# ತಮಟಕಲ್ಲು : ಮಹಿಳಾ ಜಾನಪದ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ತ್ರಿವೇಣಿ ಜಿ.ಬಿ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು




ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೨೦

# ತಮಟಕಲ್ಲು : ಮಹಿಳಾ ಜಾನಪದ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ತ್ರಿವೇಣಿ ಜಿ.ಬಿ.**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು





**ಜಾನಪದ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬


೨೦೨೦

## ಮಾರ್ಗದರ್ಶಕರ ದೃಢೀಕರಣ ಪತ್ರ

**ತಮಟಕಲ್ಲು : ಮಹಿಳಾ ಜಾನಪದ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ತ್ರಿವೇಣಿ ಜಿ.ಬಿ.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ, ಯಾವುದೇ ವಿಶ್ವವಿದ್ಯಾಲಯಕ್ಕೆ ಆಗಲಿ, ಸಂಘ-ಸಂಸ್ಥೆಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ. ಇದು ಇವರ ಸ್ವತಂತ್ರ ಸಂಶೋಧನಾ ಅಧ್ಯಯನವಾಗಿದೆ. ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
**ಜಾನಪದ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ: 12-2-2020

## ಸಂಶೋಧಕರ ಘೋಷಣಾ ಪತ್ರ

**ತಮುಟಕಲ್ಲು : ಮಹಿಳಾ ಜಾನಪದ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಮಂಜುನಾಥ ಬೇವಿನಕಟ್ಟಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ. ಹಾಗೂ ಬಿಡಿ ಇಲ್ಲವೆ ಇಡಿಯಾಗಿ ಎಲ್ಲೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

[signature]

**ತ್ರಿವೇಣಿ ಜಿ.ಬಿ**

ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 17/2/2020

## ಪರಿವಿಡಿ


ಚಿತ್ರದುರ್ಗ ಜಿಲ್ಲೆ
ಸಂತೆಗುಡ್ಡ
ಹಳೇದಡಗೂರು
ಜಟಂಗಿರಾಮೇಶ್ವರ
ಬ್ರಹ್ಮಗಿರಿ
ನುಂಕಿಮಲೆ
ಮೊಳಕಾಲ್ಮೂರು
ಗೌರಸಮುದ್ರ
ನಾಯಕನಹಟ್ಟಿ
ಓಬಳಾಪುರ
ದೊಡ್ಡ ಉಳ್ಳಾರ್ತಿ
ಚಳ್ಳಕೆರೆ
ಚಿಕ್ಕಮಧುರೆ
ಪರಶುರಾಮಪುರ
ಕಾಲ್ಗೆರೆ
ಸಂಗೇನಹಳ್ಳಿಕೆರೆ
ದೇವಿನಹಳ್ಳಿ
ಚಿಪ್ಪಿನಕೆರೆ
ಇಸಾಮುದ್ರ
ಸಿರಿಗೆರೆ
ತಮಟಕಲ್ಲು
ಚಿತ್ರದುರ್ಗ
ಚಂದ್ರವಳ್ಳಿ
ಚಿಕ್ಕಜಾಜೂರು
ದುಮ್ಮಿ
ಹೊಳಲ್ಕೆರೆ
ಹೊರಕೆರೆದೇವಪುರ
ಮರಡಿದೇವಿಗೆರೆ
ಹರ್ತಿಕೋಟೆ
ಧರ್ಮಪುರ
ಐಮಂಗಲ
ಹಿರಿಯೂರು
ಮತ್ತೋಡು
ಹಾಲುರಾಮೇಶ್ವರ
ಹೊಸದುರ್ಗ
ಚಿಕ್ಕಬ್ಯಾಲದಕೆರೆ
ಹೆಗ್ಗೆರೆ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ , ಸ್ವರೂಪ ಮತ್ತು ವಿಧಾನ

೧.೧. ಪ್ರಸ್ತಾವನೆ
೧.೨. ಅಧ್ಯಯನದ ಉದ್ದೇಶ
೧.೩. ಅಧ್ಯಯನದ ಸ್ವರೂಪ
೧.೪. ಅಧ್ಯಯನ ವಿಧಾನ
೧.೫. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನ

### ೧.೧ ಪ್ರಸ್ತಾವನೆ

ಪ್ರಸ್ತುತ ಮಹಾಪ್ರಬಂಧವು ಗ್ರಾಮೀಣ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡು ಸಿದ್ದಗೊಂಡಿದೆ. ಮಹಿಳೆಯು ಹಲವು ಶತಮಾನಗಳಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಹಲವು ಬಗೆಯಲ್ಲಿ ಅಂಚಿಗೆ ಸರಿಯಲ್ಪಡುತ್ತಲೇ ಬಂದಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಅದೇ ರೀತಿ ಹುಟ್ಟಿನಿಂದ ಇಂದಿನವರೆಗೆ ಮಹಿಳೆಯು ಯಾವ ಸ್ಥಾನಮಾನಗಳನ್ನು ಹೊಂದಿದ್ದಾಳೆ? ಮಹಿಳೆ ಕೌಟುಂಬಿಕ, ಸಾಂಸ್ಕೃತಿಕ ಆಚರಣೆ, ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ವಲಯದಲ್ಲಿ ಯಾವ ರೀತಿಯಲ್ಲಿ ಹಿನ್ನೆಲೆಗೆ ಸರಿಯಲ್ಪಡುತ್ತಾ ಬಂದಿದ್ದಾಳೆ ಎಂದು ಚರ್ಚಿಸಲಾಗಿದೆ.

ಮಹಿಳೆಯರ ಜನಸಂಖ್ಯೆಯು ದೇಶದ ಒಟ್ಟು ಸಂಖ್ಯೆಯ ಅರ್ಧದಷ್ಟಿದೆ. ಗ್ರಾಮೀಣ ಮಹಿಳೆಯರ ಪಾಲು ಹೆಚ್ಚು ಕಡಿಮೆ ೭೫ ಪ್ರತಿ ಶತದಷ್ಟಿದೆ. ಭಾರತದಲ್ಲಿ ಗ್ರಾಮೀಣ ಜನರು ಅಧಿಕ ಸಂಖ್ಯೆಯಲ್ಲಿದ್ದು ಬಹುಪಾಲು ಮಹಿಳೆಯರು ಹಳ್ಳಿಗಳಲ್ಲೆ ವಾಸಿಸುತ್ತಿದ್ದಾರೆ. ಸಮಾಜದ ಸುವ್ಯವಸ್ಥೆಯಲ್ಲಿ ಮಹಿಳೆಯ ಪಾತ್ರ ಹಿರಿದಾದುದಾಗಿದೆ. ಗ್ರಾಮೀಣ ಮಹಿಳೆಯರ ಪ್ರಗತಿಯಿಂದ ಕುಟುಂಬಕ್ಕೆ ಹಾಗೂ ಒಟ್ಟು ದೇಶದ ಪ್ರಗತಿಗೆ ಅನುಕೂಲವಾಗುತ್ತದೆ. ಆದರೆ ನಗರ ಪ್ರದೇಶಗಳ ಮಹಿಳೆಯರಿಗೆ ಹೋಲಿಸಿದರೆ ಗ್ರಾಮೀಣ ಪ್ರದೇಶದ ಮಹಿಳೆಯರು ಹೆಚ್ಚಿನ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಗ್ರಾಮೀಣ ಮಹಿಳೆಯರು ಬಡವರು, ಅನಕ್ಷರಸ್ಥರು ಮತ್ತು ತುಳಿತಕ್ಕೊಳಗಾದವರಾಗಿದ್ದಾರೆ. ಗ್ರಾಮೀಣ ಮಹಿಳೆಯರು ಅಸಂಘಟಿತರಾಗಿದ್ದು, ಸೂಕ್ತ ಪ್ರಾತಿನಿಧ್ಯವನ್ನು ಹೊಂದಿಲ್ಲ. ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ತೊಡಕಾಗಿದೆ. ಸಮಾಜದ ಅಂಗವಿಕಲತೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಮರ್ಪಕ ಅವಕಾಶಗಳ ಕೊರತೆ. ದೇಶದಲ್ಲಿ ಮಹಿಳೆಯರನ್ನು ಇನ್ನು ಎರಡನೇ ದರ್ಜೆ ನಾಗರಿಕರು ಎಂದು ನೋಡಲಾಗುತ್ತಿದ್ದು, ಚರಿತ್ರೆಯನ್ನು ಅವಲೋಕಿಸಿದಾಗ ಲಿಂಗ ತಾರತಮ್ಯತೆಯ ಹಿನ್ನೆಲೆಯಲ್ಲಿ ಮಹಿಳೆಯರು ಅಸ್ತಿತ್ವ ರಹಿತಳಾಗಿ ಸಾಮಾಜಿಕವಾಗಿ.

ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಉದಾಸೀನಕ್ಕೊಳಗಾಗುತ್ತಲೇ ಬಂದಿದ್ದಾಳೆ. ಪುರುಷನಿಗಿಂತ ಮಹಿಳೆ ದುರ್ಬಲಳು ಎನ್ನುವ ಅಸಮಾನ ನೆಲೆಗಳು ಕುಟುಂಬದಿಂದ ಹಿಡಿದು ಸಮಾಜದ ವಿವಿಧ ಸ್ತರಗಳಲ್ಲಿ ಬೆಳೆದುಕೊಂಡಿವೆ.

ಪಾರಂಪರಿಕವಾಗಿ ಸ್ತ್ರೀಯನ್ನು ಗಂಡಿನ ಚರಾಸ್ತಿಯನ್ನಾಗಿ, ಗುಲಾಮಳನ್ನಾಗಿ, ಭೋಗದ ವಸ್ತುವನ್ನಾಗಿ ಪರಿಗಣಿಸಿದ ಸಂಗತಿಗಳು, ಭಾರತದ ಸ್ವಾತಂತ್ರ್ಯದ ನಂತರ ಅದು ಸಂವಿಧಾನ ರೂಪಗೊಂಡು ನಂತರ ಮಹತ್ತರ ಪಲ್ಲಟಗಳಿಗೆ ಒಳಗಾದವು. ಸ್ತ್ರೀ ಪುರುಷರ ಸಾಮಾಜಿಕ ಸಮಾನತೆಯ ನೆಲೆಯನ್ನು ಸಂವಿಧಾನದಲ್ಲಿ ಅಂತರ್ಗತಗೊಳಿಸುವ ಮೂಲಕ ಮಹಿಳೆಯರಿಗೆ ಒಂದು ಹೊಸ ದಿಗಂತವನ್ನು ತೆರೆದಿಡಲಾಯಿತು. ಜೊತೆಗೆ ಸಂವಿಧಾನವು ಮೂರು ಮುಖ್ಯ ತೀರ್ಮಾನಗಳನ್ನು ಕೈಗೊಂಡಿತು. ಒಂದು ಲಿಂಗಾಧಾರಿತವಾದ ತಾರತಮ್ಯತೆಗಳ ನಿಷೇಧ. ಎರಡು ಮಹಿಳೆಯರ ಜೈವಿಕ, ಮಾನಸಿಕ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ಅನುಲಕ್ಷಿಸಿ ಅವರಿಗೆ ರಾಜ್ಯವು ವಿಶೇಷ ಕಾಳಜಿಯನ್ನು ವಹಿಸುವಂತಹ ಉಪಬಂಧಗಳನ್ನು ರಚಿಸಲು ಅಧಿಕಾರ ನೀಡುವುದು. ಮೂರು ಮಹಿಳೆಯರಿಗಾಗಿಯೇ ನಿರ್ದಿಷ್ಟ ನಿರ್ದೇಶನಗಳನ್ನು ನೀಡುವ ನಿರ್ದೇಶಕ ತತ್ವಗಳನ್ನು ಸಂರಚಿಸುವುದು. ಹೀಗೆ ಸ್ತ್ರೀ ಪುರುಷರನ್ನು ಸಮಾನ ಪಾತಳಿಯಲ್ಲಿ ಗ್ರಹಿಸುವ ತಿಳುವಳಿಕೆಗಳೆ ಮಾನವ ನಾಗರಿಕತೆಯ ನಿಜವಾದ ಪ್ರಗತಿಯ ಮಜಲುಗಳು. ಆದರೂ ಸಹ ಮಹಿಳೆಯರು ಬೇರೆ ಬೇರೆ ಹಂತಗಳಲ್ಲಿ ಅಸ್ತಿತ್ವ ರಹಿತಳಾಗಿ ಅಶುಭದ ಸಂಕೇತವಾಗಿ ವ್ಯಾಖ್ಯಾನಕ್ಕೊಳಗಾತ್ತಲೇ ಬಂದಿದ್ದಾಳೆ.

೨೦ನೇ ಶತಮಾನದ ಜನಪರ ಚಿಂತನೆಗಳಲ್ಲಿ ಬಹಳ ಮುಖ್ಯವಾದುದು ಮಹಿಳಾ ಪರಚಿಂತನೆ. ಈ ಜನಪರ ಹೋರಾಟಗಳಲ್ಲಿ ಅತ್ಯಂತ ಮುಖ್ಯವಾದುದ್ದು ಲಿಂಗ ಸಮಾನತೆಯ ಬಗ್ಗೆ ನಡೆದ ಅಂದೋಲನವು ಒಂದು. ಯೂರೋಪಿನಲ್ಲಿ ಮಹಿಳಾ ಶಿಕ್ಷಣದ ಕಾರಣದಿಂದಾಗಿ ಪ್ರಾರಂಭಗೊಂಡ ಸ್ತ್ರೀವಾದಿ ಚಿಂತನೆ ಇಂದು ಜಗತ್ತಿನಾದ್ಯಂತ ತನ್ನ ಅರಿವಿನ ಮೂಲಕ ಜಾಗೃತಿಯನ್ನು ಮೂಡಿಸಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಹೆಣ್ಣಿಗೆ ಯಾವುದೇ ಸ್ವಾತಂತ್ರ್ಯವನ್ನು ನೀಡದೆ ಅವಳನ್ನು ಗೃಹಕೃತ್ಯ ಮಾಡುವ ಸೇವಕಳೆಂದು, ಸಂತಾನೋತ್ಪತ್ತಿಯ ಸಾಧನವೆಂದು, ಭೋಗದ ವಸ್ತುವೆಂದು ಭಾವಿಸಿ ನಿರಂತರವಾಗಿ ಶೋಷಣೆ ಮಾಡಿಕೊಂಡು ಬರಲಾಯಿತು. ಪುರುಷ ಜಗತ್ತು ಅವಳನ್ನು ಎರಡನೆಯ ದರ್ಜೆಯ ಪ್ರಜೆಯೆಂದು ಕರೆದು ಪುರುಷನ ಸಮಾನವಾಗಿ ಕಾಣಲು ನಿರಾಕರಿಸಿತು. ಈ ಎಲ್ಲಾ ಕಾರಣಗಳಿಂದ ಮಹಿಳೆಯ ಬೌದ್ಧಿಕ ವಿಕಾಸನವಾಗಲು ಸಾಧ್ಯವಾಗದೇ, ಅವಳು ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಕೌಟುಂಬಿಕ ವಿಷಯಗಳಲ್ಲಿ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಕೇವಲ ದುಡಿಯುವ ಸ್ವತ್ತಾಗಿ ಪರಿಗಣಿತಳಾದಳು.

೨೦ನೇ ಶತಮಾನ ದೀನದಲಿತರ, ಕೂಲಿ ಕಾರ್ಮಿಕರ ಪಾಲಿಗೆ ನವ ಜೀವನದ ಸಾಧ್ಯತೆಗಳನ್ನು ನೀಡಿದಂತೆಯೇ ಮಹಿಳೆಯರ ಪಾಲಿಗೆ ಅರಿವನ್ನು ನೀಡುವ ಯುಗವಾಯಿತು. ಮಹಿಳಾ ಸಮಾನತೆಯ ಬಗ್ಗೆ ಮಾತನಾಡಿ ಭೌದ್ಧಿಕವಾಗಿ ಮತ್ತು ಶಾರೀರಿಕವಾಗಿ ಪುರುಷನಿಗೆ ಯಾವುದೇ ವಿಷಯದಲ್ಲೂ ಎರಡನೆಯವಳಲ್ಲ. ಅವಳು ಅವನಿಗೆ ಸರಿಸಮಾನಳು ಎಂದು ತನ್ನ ಭೌದ್ಧಿಕ ಎಚ್ಚರದಿಂದ ನಿರೂಪಿಸ ತೊಡಗಿದಳು. ಶಿಕ್ಷಣದಿಂದ ಮಹಿಳೆ ಸಂಘಟಿತಳಾಗಿ ಲಿಂಗಸಮಾನತೆಯ ತಳಹದಿಯ ಮೇಲೆ ಮಾನವ ಸಮಾಜದ ಒಳಿತು ಅಡಗಿದೆ ಎಂಬುದನ್ನು ಪ್ರತಿಪಾದಿಸ ತೊಡಗಿದಳು. ಸೃಷ್ಟಿಯ ಅರ್ಧಭಾಗದಷ್ಟಿರುವ ಮಹಿಳೆಯನ್ನು ಚರಿತ್ರೆಯ ಉದ್ದಕ್ಕೂ ಪುರುಷ ಜಗತ್ತು ಶೋಷಣೆ ಮಾಡಿರುವುದನ್ನು ಪ್ರಶ್ನಿಸಿದರು. ಆದರೂ ಸಹ ಅವಳಿಗೆ ಬೇರೆ ಬೇರೆ ರೀತಿಯಲ್ಲಿ ಶೋಷಣೆ ನಡೆಯುತ್ತಲೇ ಇದೆ. ಪುರುಷ ಪ್ರಾಬಲ್ಯಕ್ಕೆ ಸಿಕ್ಕಿ ಇನ್ನು ಅವಳು ದೌರ್ಜನ್ಯಕ್ಕೆ ದಮನಕ್ಕೆ ಒಳಗಾಗುತ್ತಲೆ ಇದ್ದಾಳೆ.

ಸ್ವಾತಂತ್ರ್ಯ ಬಂದು ೭೧ ವರ್ಷಗಳಾದರೂ ಕೂಡ ನಮ್ಮ ದೇಶದ ಸಂವಿಧಾನದಲ್ಲಿ ಮಹಿಳೆಯರಿಗೆ ಸಮಾನ ಹಕ್ಕು ಅವಕಾಶಗಳಿದ್ದರೂ ಕೂಡ ಇಂದಿಗೂ ಭಾರತೀಯ ಮಹಿಳೆಯ ಸ್ಥಾನಮಾನದಲ್ಲಿ ಹೆಚ್ಚಿನ ಬದಲಾವಣೆಗಳು ಕಾಣುವುದಿಲ್ಲ. ಯಾವುದೇ ಮಾನದಂಡವನ್ನು ತೆಗೆದುಕೊಂಡರು, ಅಂದರೆ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಕೌಟುಂಬಿಕವಾಗಿ, ಆಚರಣೆಗಳ ಭಾಗವಹಿಸುವಿಕೆಯಲ್ಲಿ, ನೀತಿ ನಿರ್ಧಾರ ತೆಗೆದುಕೊಳ್ಳುವಲ್ಲಿ ಈ ಎಲ್ಲಾ ವಿಷಯಗಳಲ್ಲೂ ಆಕೆ ಇನ್ನೂ ಹಿಂದೆ ಉಳಿದಿದ್ದಾಳೆ. ಆದರೂ ಸಹ ಮಹಿಳೆ ಕೈಕಟ್ಟಿ ಕೂರದೇ ಎಂತಹ ಸನ್ನಿವೇಶನದಲ್ಲೂ ಸಹ ಎಷ್ಟೇ ಶೋಷಣೆ, ದೌರ್ಜನ್ಯ, ದಬ್ಬಾಳಿಕೆಗೆ ಒಳಗಾದರೂ ಪ್ರತಿಯೊಂದು ಕ್ಷೇತ್ರಗಳಲ್ಲಿ ದುಡಿಯಲು ತನ್ನನ್ನು ತೊಡಗಿಸಿಕೊಂಡಿದ್ದಾಳೆ. “ಉದ್ಯೋಗಂ ಪುರುಷ ಲಕ್ಷಣಂ” ಎಂಬುದು ಗಾದೆ ಮಾತು. ಅದರೀಗ ಕಾಲ ಬದಲಾಗಿದೆ. ಮಹಿಳೆಗೆ ಮನೆಯಷ್ಟೆ ಕಾರ್ಯಕ್ಷೇತ್ರವಾಗಿ ಉಳಿದಿಲ್ಲ. ಸಮಾಜದ ವಿವಿಧ ಸ್ತರಗಳಲ್ಲಿ ವಿಭಿನ್ನ ಬಗೆಯ ಉದ್ಯೋಗಗಳಲ್ಲಿ ಸ್ವಾವಲಂಬನೆಯ ದಾರಿಯನ್ನು ಆಕೆ ಕಂಡುಕೊಂಡಿದ್ದಾಳೆ. ಜೀವನದ ಹಲವಾರು ಏಳು ಬೀಳುಗಳ ಮಧ್ಯೆಯೂ ಮಹಿಳೆ ಇಂದು ತನ್ನನ್ನು ಸಮರ್ಥವಾಗಿ ಪ್ರಸ್ತುತಪಡಿಸಲು ಹೋರಾಡುತ್ತಿದ್ದಾಳೆ. ವೈರುಧ್ಯಗಳ ಮಧ್ಯೆ ಇಂದು ಮಹಿಳೆ ಬದುಕು ಸಾಗಿಸಲು ನೂರಾರು ದಾರಿಗಳನ್ನು ಕಂಡುಕೊಂಡಿದ್ದಾಳೆ. ಸಂಸಾರದ ನೊಗ ಹೊರುವುದರಲ್ಲಿ ತನ್ನದು ಪಾಲಿರಲಿ ಎಂದು ಬಯಸುತ್ತಾಳೆ. ದುಡಿಮೆಗೆ ಅವಕಾಶವಿಲ್ಲ ಎಂದು ಕುಳಿತಿರುವ ಬದಲು ಇರುವ ಪರಿಮಿತಿಯಲ್ಲೆ ತನಗೆ ಸಾಧ್ಯವಾದುದನ್ನು ಮಾಡುವ ಕ್ರಿಯಾಶೀಲಗುಣದವಳು ಮಹಿಳೆ.

ಭಾರತದಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚು ಸಮಯ ದುಡಿಯುತ್ತಾರೆ. ಮನೆ ಮತ್ತು ಹೊರಗಿನ ಕ್ಷೇತ್ರಗಳಲ್ಲಿ ವ್ಯಯಿಸುವ ಸಮಯ ಪರಿಗಣನೆಗೆ ತೆಗೆದುಕೊಂಡರೆ ಮಹಿಳೆಯರೇ ಹೆಚ್ಚು ದುಡಿಯುತ್ತಾರೆ. ಮಹಿಳೆಯರ ದುಡಿಮೆಯು ದುಡಿಮೆ ಎಂದು ಪರಿಗಣಿತವಾಗಿಲ್ಲ. ಪುರುಷನ

ದುಡಿಮೆ ಮಾತ್ರ ದುಡಿಮೆಯೆಂದು ಆತನು ಮಾತ್ರ ದುಡಿಮೆಗಾರನೆಂದು ತಿಳಿಸಲಾಗಿದೆ. ಈ ಬಗೆಯ ಪರಿಭಾವನೆಗಳಿಂದಾಗಿ ಮಹಿಳೆಯು ಅಪ್ರಧಾನಳೂ, ಅವಲಂಬಿತಳೂ ಆಗಿ ಬಿಟ್ಟಿದ್ದಾಳೆ. ಆಕೆಯ ದುಡಿಮೆಯು ಅಗೋಚರವು. ಅಮೂರ್ತವು ಆಗಿಬಿಟ್ಟಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಅದರಲ್ಲೂ ಬಡ ಕುಟುಂಬಗಳ ಹೆಣ್ಣುಮಕ್ಕಳ ದೃಷ್ಟಿಯಿಂದ ಬದುಕು ಮತ್ತು ದುಡಿಮೆಗಳು ಬೇರೆ ಬೇರೆ ಅಲ್ಲವೆ ಅಲ್ಲ. ಅವೆರೆಡು ವಿಭಿನ್ನ ಮಹಿಳೆಯರ ಕಾಲ ಬಳಕೆ ಬಗ್ಗೆ ನಡೆದ ಅಧ್ಯಯನಗಳಲ್ಲಿ ಅವಳು ಪ್ರತಿದಿನ ೧೨ ರಿಂದ ೧೫ ಗಂಟೆಗಳ ಕಾಲ ದುಡಿಯುತ್ತಾಳೆಂದು ತಿಳಿಸುತ್ತಾರೆ.

ಪುರುಷ ಪ್ರಧಾನತೆಯ ಈ ಸಮಾಜದಲ್ಲಿ ಜೀವಿಸುವ ಮಹಿಳೆಯು ಬುದ್ಧಿ ಮನಸ್ಸು ಎಷ್ಟೇ ವೈಚಾರಿಕವಾಗಿದ್ದರೂ ಅನಿವಾರ್ಯವಾಗಿ ಪುರುಷ ಪ್ರಧಾನ್ಯತೆಯ ಮೌಲ್ಯ ಕಟ್ಟುಪಾಡುಗಳನ್ನು ಮೈಗೂಡಿಸಿಕೊಂಡು ಅವುಗಳಂತೆ ನಡೆದು ಪುರುಷರ ಪರವಾಗಿಯೇ ಕೆಲಸ ಮಾಡುತ್ತಾ ಪುರುಷ ಪ್ರಧಾನ್ಯತೆ ವಿರುದ್ಧ ನಡೆದರೆ ಅಥವಾ ಕಾಲಿಟ್ಟರೆ ಎದುರಿಸಬಹುದಾದ ಅಘಾತಗಳ ಭಯಾನಕ ಪರಿಸ್ಥಿತಿಯನ್ನೇ ಅರಿತು ಸದಾ ತನ್ನ ಕೊರಳಿಗೆ ಎಚ್ಚರಿಕೆಯ ಕರೆಗಂಟೆ ತೂಗು ಹಾಕಿಕೊಂಡು ತಮ್ಮನ್ನು ತಾವೇ ಬಂಧಿಸಿಕೊಂಡು ಬಳಲುತ್ತಾ ಬಿಡುವಿಲ್ಲದೆ ನರಳುವ ಅವಸ್ಥೆಯನ್ನು ತಲುಪಿದ್ದಾರೆ. ಪ್ರಪಂಚದ ಎಲ್ಲಾ ದೇಶಗಳಲ್ಲೂ ಕುಟುಂಬ ನಿರ್ವಹಣೆ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಹಿಳೆಯ ದುಡಿಮೆ ಅಪಾರವಾಗಿದೆ.

ಅಂಚಿಗೆ ತಳ್ಳಲ್ಪಡುವಿಕೆ ಎಂಬ ಪದದ ಅರ್ಥವೆಂದರೆ ಅಭಿವೃದ್ಧಿಯ ಸನ್ನಿವೇಶನದಲ್ಲಿ ಒಂದು ಗುಂಪು ಅಥವಾ ವರ್ಗವು ಇನ್ನೊಂದು ಗುಂಪು ಅಥವಾ ವರ್ಗದಿಂದ ಒಂದಲ್ಲ ಒಂದು ರೀತಿಯಲ್ಲಿ ಅಡ್ಡಿ ಆತಂಕಗಳನ್ನು ಒಂದು ವರ್ತುಲದಿಂದ ಇನ್ನೊಂದು ವರ್ತಲಕ್ಕೆ ಅಥವಾ ಒಂದು ಸ್ತರದಿಂದ ಇನ್ನೊಂದು ಸ್ತರಕ್ಕೆ ಎದುರಿಸುವುದು. ಹೀಗೆ ಅಂಚಿಗೆ ತಳ್ಳಲ್ಪಡುವ ಗುಂಪು ಪ್ರಗತಿಯ ಲಾಭಗಳ ಅಂಚಿನಲ್ಲಿದ್ದು ನಷ್ಟ ಅನುಭವಿಸುವುದು. ಒಟ್ಟಾರೆಯಾಗಿ ಪ್ರಸ್ತುತ ಮಹಾಪ್ರಬಂಧವು ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡು ಸಿದ್ದಗೊಂಡಿದೆ. ಮಹಿಳೆಯು ಹಲವು ಶತಮಾನಗಳಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಹಲವು ಬಗೆಯಲ್ಲಿ ಅಂಚಿಗೆ ಸರಿಯಲ್ಪಡುತ್ತಲೇ ಬಂದಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಅದೇ ರೀತಿ ಹುಟ್ಟಿನಿಂದ ಸಾವಿನವರೆಗೆ ಮಹಿಳೆಯು ಯಾವ ಬಗೆಯ ಸ್ಥಾನಮಾನಗಳನ್ನು ಹೊಂದಿದ್ದಾಳೆ? ಮಹಿಳೆ ಕೌಟುಂಬಿಕ, ಸಾಂಸ್ಕೃತಿಕ ಆಚರಣೆ, ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ವಲಯದಲ್ಲಿ ಯಾವ ರೀತಿಯಲ್ಲಿ ಓಸ್ನೆಲೆಗೆ ಸರಿಯಲ್ಪಡುತ್ತಾ ಬಂದಿದ್ದಾಳೆ ಎಂದು ಚರ್ಚಿಸಲಾಗಿದೆ.

**೧.೨. ಅಧ್ಯಯನದ ಉದ್ದೇಶ :**

ತಮಟಕಲ್ಲು ಗ್ರಾಮದ ರಾಜಕೀಯ, ಭೌಗೋಳಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಓಸ್ನೆಲೆಯನ್ನು ಗುರುತಿಸುವುದರ ಜೊತೆಗೆ, ಮಹಿಳೆಯ ಭಾಗವಹಿಸುವಿಕೆಯಲ್ಲಿ ಅವಳಿಗೆ ನೀಡಿರುವ ಸ್ಥಾನಮಾನವೇನು? ಅವಳ ಸಮಸ್ಯೆಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಸಂಭವಿಸುವ ಯಾವುದೇ ತೆರನಾದ ಸುಧಾರಣೆಗಳಿಂದ ಹರಿದು ಬರುವ ಲಾಭಗಳಲ್ಲಿ ಒಂದು ದಿಕ್ಕಿನ ನೆಲೆಯಲ್ಲಿ ಲಭಿಸತಕ್ಕ ಪಾಲಿನಿಂದ ಮಹಿಳೆಯರು ವಂಚಿತರಾಗಿರುತ್ತಾರೆ. ಭಾರತದಲ್ಲಿ ಚಾರಿತ್ರಿಕ ಯಾತನೆಗಳಿಗೆ, ಹೆಸರಾಗಿರುವ ಒಂದು ಪ್ರಧಾನ ಅಂಚಿಗೆ ಸರಿಸಲ್ಪಟ್ಟ ಗುಂಪು ಎಂದರೆ ಮಹಿಳೆಯರು. ವಾಸ್ತವದಲ್ಲಿ ಇದೊಂದು ಲಿಂಗತ್ವ ಸಮಸ್ಯೆ. ಇದರಿಂದಾಗಿಯೇ ಲಿಂಗತ್ವ ನಿಷ್ಪಕ್ಷಪಾತತೆ ಮತ್ತು ಮಹಿಳಾ ಸಬಲೀಕರಣ ಇತ್ಯಾದಿ ಕ್ಲೀಷೆಯೆನಿಸಿಬಿಟ್ಟಿರುವ ಕರೆಗಳು ಕೇಳುತ್ತಿರುವುದು.

ಮಹಿಳಾ ಬದುಕು ಕೇಂದ್ರಿತ ಅಧ್ಯಯನದಲ್ಲಿ ಮಹಿಳೆಯ ಬದುಕನ್ನು ವಿವರಿಸುವ ವಿಧಾನಗಳತ್ತ ಗಮನಹರಿಸುವುದು ಮುಖ್ಯವಾಗಿದೆ. ಅದನ್ನು ವಿವರಿಸುವ ಸಂದರ್ಭದಲ್ಲಿ ಬೇರೆ ಬೇರೆ ಅಂಶಗಳು ಪ್ರಭಾವ ಬೀರುತ್ತವೆ. ಸಂಪ್ರದಾಯ, ನಂಬಿಕೆ, ಸಾಂಸ್ಕೃತಿಕ ಪರಿಸರ, ಪುರುಷ ಕೇಂದ್ರಿತ ಪ್ರಜ್ಞೆ ಇವೆ ಮೊದಲಾದ ಅಂಶಗಳು ಅವಳ ಬದುಕಿನ ಮೇಲೆ ಪ್ರಭಾವ ಬೀರಿರುತ್ತವೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯ ಬದುಕಿನ ಸ್ಥಿತಿಗತಿಗಳನ್ನು, ಸ್ಥಾನಮಾನಗಳನ್ನು ಗುರುತಿಸಲು ಕೈಗೊಳ್ಳುವ ಪ್ರಯತ್ನ ಇಲ್ಲಿದೆ. ಮಧ್ಯಮ ವರ್ಗದ ಗ್ರಾಮೀಣ ಮಹಿಳೆಯ ಬದುಕು ಹೇಗೆ ರೂಪುಗೊಂಡಿದೆ. ಅವಳ ಉಡುಗೆ, ತೊಡುಗೆ, ಶಿಕ್ಷಣ, ರಾಜಕೀಯ, ಆರ್ಥಿಕ, ಸಾಮಾಜಿಕ, ಉದ್ಯೋಗ ,ಉತ್ಪಾದನೆಗಳು ಮಹಿಳೆಯ ಬದುಕನ್ನು ಹೇಗೆ ಪ್ರಭಾವಿಸಿವೆ, ಮತ್ತು ಅವರನ್ನು ಪುರುಷ ಪ್ರಧಾನ ಸಮಾಜ ನಡೆಸಿಕೊಳ್ಳುವ ರೀತಿ, ಅವಳಿಗೆ ಕೊಟ್ಟಿರುವ ಸ್ಥಾನಗಳೇನು? ಎನ್ನುವ ಚಿತ್ರಣವನ್ನು ಗುರುತಿಸುವುದು.

೧. ತಮಟಕಲ್ಲು ಚಾರಿತ್ರಿಕವಾಗಿ ಶಾಸನದ ಕಾರಣಕ್ಕೆ ಹೆಚ್ಚು ಪರಿಚಿತ. ಆದರೆ ಈ ಗ್ರಾಮದ ವರ್ತಮಾನದ ಜನ ಜೀವನವನ್ನು ಕುರಿತು ಈತನಕ ಯಾರೂ ಅಧ್ಯಯನ ಮಾಡಿರುವುದಿಲ್ಲ. ಹಾಗಾಗಿ ಚಾರಿತ್ರಿಕ ಗ್ರಾಮದ ವರ್ತಮಾನದ ಮಹಿಳಾ ಜನ ಜೀವನ ಹೇಗಿದೆ ಎಂದು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

೨. ಸಾಮಾಜಿಕ, ರಾಜಕೀಯ, ಆರ್ಥಿಕ ಜೀವನದಲ್ಲಿ ಅವಳ ಪಾಲ್ಗೊಳ್ಳುವಿಕೆಯನ್ನು ವಿಶ್ಲೇಷಿಸುವುದು.

೩. ಸದ್ಯದ ಪರಿಸ್ಥಿತಿಯಲ್ಲಿ ಮಹಿಳೆಯ ಕುಟುಂಬ ನಿರ್ವಹಣೆಯ ಜವಾಬ್ದಾರಿಯ ಸ್ವರೂಪ ಹಾಗೂ ಅವಳ ಸ್ಥಾನಮಾನವನ್ನು ಗುರುತಿಸುವುದು.

೪. ಸಾಂಸ್ಕೃತಿಕ ಆಚರಣೆಗಳಲ್ಲಿ ಮಹಿಳಾ ಸ್ಥಾನಮಾನ ಮತ್ತು ಪಾಲ್ಗೊಳ್ಳುವಿಕೆಯನ್ನು ಗುರುತಿಸುವುದು.

ದೇಶ ಮತ್ತು ರಾಜ್ಯದಲ್ಲಿ ಮಹಿಳೆಯರ ಮೇಲೆ ನಿರಂತರ ದೌರ್ಜನ್ಯಗಳು ನಡೆಯುತ್ತಿರುವುದು ವರದಿಯಾಗಿದೆ.ಇನ್ನೊಂದೆಡೆ ಮಹಿಳೆಯರು ಎಲ್ಲಾ ಕ್ಷೇತ್ರದಲ್ಲಿಯೂ ಮುನ್ನಡೆ ಪಡೆದು ಸಾಧನೆಯನ್ನು ಮಾಡುತ್ತಿದ್ದಾರೆ. ಈ ನಡುವೆ ಗ್ರಾಮೀಣ ಮಹಿಳೆಯರ ಸ್ಥಿತಿಗತಿಗಳು ಏನಾಗಿವೆ? ವರ್ತಮಾನದ ಗ್ರಾಮೀಣ ಮಹಿಳೆಯರ ಸಮಸ್ಯೆಗಳಾವುವು? ಮುಂತಾದ ಸಂಗತಿಗಳನ್ನು ಜಾನಪದ ಮತ್ತು

ಮಹಿಳಾ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶವಿದೆ. ಇಲ್ಲಿನ ಕೆಲವು ಆಚರಣೆಗಳು ವಿಶಿಷ್ಟವಾಗಿದ್ದು, ತಮಟಕಲ್ಲು ಗ್ರಾಮದ ವ್ಯಾಪ್ತಿಯಲ್ಲಿ ಬರುವ ಆಚರಣೆಗಳಲ್ಲಿ ಮಹಿಳೆಯರು ಹೇಗೆ ಪಾಲ್ಗೊಳ್ಳುತ್ತಾರೆ. ಇವರ ಭಾಗವಹಿಸುವಿಕೆಯಲ್ಲಿ ಆಗಿರುವ ಬದಲಾವಣೆಗಳು ಯಾವುವು? ಹೆಣ್ಣು ಮಕ್ಕಳ ಆರ್ಥಿಕ ವ್ಯವಹಾರ ಅಂದರೆ ವರ್ಷವಿಡೀ ಹೊಲದಲ್ಲಿ ಕೆಲಸ ಮಾಡಿದ ಹೆಣ್ಣು ಮಕ್ಕಳು ಬೆಳೆ ಬಂದ ನಂತರ ಆ ಬೆಳೆಯನ್ನು ಮಾರುಕಟ್ಟೆಗೆ ಯಾರು ಕೊಂಡೊಯ್ಯುತ್ತಾರೆ. ಹಣದ ವ್ಯವಹಾರ ನೋಡಿಕೊಳ್ಳುವ ಅವಕಾಶ ಅವರಿಗೆ ಇದೆಯೇ ಮತ್ತು ಸಾಮಾಜಿಕ ಆಚರಣೆಗಳ ಸಂದರ್ಭದಲ್ಲಿ ಮತ್ತು ಮದುವೆ ಸಂದರ್ಭದಲ್ಲಿ, ಹೆಣ್ಣು ಗಂಡು ಕೊಡುವ ವಿಚಾರಗಳಲ್ಲಿ ಮತ್ತು ಮಹಿಳಾ ಮೀಸಲಾತಿ ಹೆಸರಿನಲ್ಲಿ ಗಂಡು ಮಕ್ಕಳು ಹೆಣ್ಣಿನ ಅಧಿಕಾರವನ್ನು ಚಲಾಯಿಸುತ್ತಿರುವುದು, ಹೆಣ್ಣು ಕೇವಲ ನಾಮ ಮಾತ್ರಕ್ಕೆ ಅಧಿಕಾರ ವಹಿಸಿಕೊಳ್ಳುವುದು, ಹೀಗೆ ಎಲ್ಲಾ ವಿಷಯಗಳಲ್ಲಿ ಅವಳಿಗೆ ನಿರ್ಧಾರ ತೆಗೆದುಕೊಳ್ಳುವ ಅವಕಾಶ ಇದೆಯೇ ಹೀಗೆ ಎಲ್ಲಾ ಹಂತಗಳಲ್ಲಿ ತಮಟಕಲ್ಲು ಗ್ರಾಮವನ್ನು ಅಧ್ಯಯನಕ್ಕೆ ಆಯ್ದುಕೊಂಡಿದ್ದೇನೆ.

ಒಟ್ಟಾರೆ ಬದಲಾದ ಸಾಮಾಜಿಕ, ಸಾಂಸ್ಕೃತಿಕ ವಲಯದಲ್ಲಿ ಹಿಂದಿನ ಕಾಲದಿಂದ ವರ್ತಮಾನದವರೆಗಿನ ಮಹಿಳೆಯ ಪಾಲ್ಗೊಳ್ಳುವಿಕೆ ಹಾಗೂ ಸಾಮಾಜಿಕ ಸ್ಥಾನಮಾನದಲ್ಲಿ ಏನಾದರೂ ಬದಲಾವಣೆ ಆಗಿದೆ ಎಂದು ಗಮನಿಸಲಾಗಿದೆ.

**೧.೩. ಅಧ್ಯಯನದ ಸ್ವರೂಪ :**

ಯಾವುದೇ ಒಂದು ಅಧ್ಯಯನ ನಡೆಸಬೇಕಾದರೆ ಅದರ ಆಳ ಹರವುಗಳನ್ನು ,ವಿಸ್ತಾರಗಳನ್ನು, ವ್ಯಾಪ್ತಿಯನ್ನು ನಿಗದಿಪಡಿಸಿಕೊಳ್ಳಬೇಕು. ಹಾಗಾದಾಗ ಮಾತ್ರ ಅಧ್ಯಯನಕ್ಕೆ ಒಂದು ನಿರ್ದಿಷ್ಟ ಗುರಿ ಸಿಗುತ್ತದೆ. ಮತ್ತು ಪ್ರಸ್ತುತ ಅಧ್ಯಯನಕ್ಕೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನವು ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಗ್ರಾಮ ಅಧ್ಯಯನದ ಕ್ಷೇತ್ರವಾಗಿದೆ. **'ತಮಟಕಲ್ಲು:ಮಹಿಳಾ ಜಾನಪದ'** ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು ಅಧ್ಯಯನಕ್ಕೊಳಪಡಿಸಲಾಗಿದೆ. ಹಾಗಾಗಿ ಪ್ರಸ್ತುತ ಪ್ರದೇಶವನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಲು ಅಧ್ಯಯನದ ಅನುಕೂಲಕ್ಕಾಗಿ ಹಲವು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಪ್ರಸ್ತುತ ಮಹಾ ಪ್ರಬಂಧವು ಒಟ್ಟು ೦೬ ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ಸ್ವರೂಪ, ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆಗಳ ಬಗ್ಗೆ ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯ ತಮಟಕಲ್ಲು ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನಲೆ, ಇದರಲ್ಲಿ ಗ್ರಾಮದ ಸ್ಥಳನಾಮ ಮತ್ತು ತಮಟಕಲ್ಲು ಪದದ ಪದ ನಿಷ್ಪತ್ತಿ ಪರಿಚಯ, ಭೌಗೋಳಿಕ ಲಕ್ಷಣ, ಸುತ್ತಮುತ್ತಲ ಗ್ರಾಮಗಳ ಪರಿಚಯ, ಗ್ರಾಮದ ಸಾಮಾಜಿಕ ಜೀವನ, ಮನೆಯ ಮಾದರಿ, ಕುಟುಂಬ ಪದ್ಧತಿ, ಕುಟುಂಬದಲ್ಲಿ ಮಹಿಳೆಯ ನಿರ್ವಚನ, ಸಾರಿಗೆ ವ್ಯವಸ್ಥೆ, ನ್ಯಾಯ ವ್ಯವಸ್ಥೆ

ಬಗ್ಗೆ,ಗ್ರಾಮದ ಪ್ರಾಚೀನತೆಯ ಬಗ್ಗೆ ಚರ್ಚಿಸಿದ್ದು ,ಇಲ್ಲಿ ದೊರೆತಿರುವ ಶಾಸನಗಳಿಂದ ಈ ಊರಿಗೆ ಹಿಂದೆ ಬೇರೊಂದು ಹೆಸರಿತ್ತು ಎನ್ನುವ ಹಿನ್ನೆಲೆಯನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ತಮಟಕಲ್ಲು ಗ್ರಾಮದ ಮಹಿಳೆಯರ ಆರ್ಥಿಕ, ರಾಜಕೀಯ, ಶೈಕ್ಷಣಿಕ ಜೀವನದಲ್ಲಿ ಇವರ ಸ್ಥಾನಮಾನ ಅಥವಾ ಸ್ಥಿತಿಗತಿ ಎಂದಿದ್ದು ಆರ್ಥಿಕ ಸ್ಥಿತಿಗತಿಯಲ್ಲಿ ಆರ್ಥಿಕ ಕ್ಷೇತ್ರದಲ್ಲಿನ ಒಡೆತನ ಮತ್ತು ಮಹಿಳೆ, ಕೃಷಿ ಭೂ ಒಡೆತನದಲ್ಲಿ ಮಹಿಳೆಯ ಪಾತ್ರ ಮತ್ತು ಸಾಮಾಜಿಕ ಅಭಿಪ್ರಾಯದ ಬಗ್ಗೆ,ರಾಜಕೀಯ ಸ್ಥಿತಿಗತಿಯಲ್ಲಿ ಗ್ರಾಮ ಪಂಚಾಯಿತಿಯಲ್ಲಿ ಮಹಿಳೆ, ಮಹಿಳೆ ಭಾಗವಹಿಸುವಿಕೆ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಆಚರಣೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ನೆಲೆಗಳು ಎಂದಿದ್ದು ಇಲ್ಲಿ ಜೀವನಾವರ್ತನ ಆಚರಣೆಗಳ ಮತ್ತು ವಾರ್ಷಿಕಾವರ್ತನ ಆಚರಣೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ, ನೀತಿ ನಿರ್ಧಾರ ತೆಗೆದುಕೊಳ್ಳುವ ಬಗ್ಗೆ, ಹಬ್ಬ, ಸಂಪ್ರದಾಯಗಳು. ಅಲ್ಲಿನ ಜನರ ಜೀವನ ಸಂಸ್ಕೃತಿಯನ್ನು ತಿಳಿಸುವ ಪ್ರತಿಬಿಂಬದಂತಿದ್ದು ಮಹಿಳೆಯರಿಗೆ ಇವುಗಳಲ್ಲಿ ಯಾವ ರೀತಿಯ ಸ್ಥಾನಮಾನವಿದೆ ಎಂದು, ಮತ್ತು ಜನಪದ ನಂಬಿಕೆ ಮತ್ತು ನಿಷೇಧಗಳಲ್ಲಿ ಮಹಿಳೆಗಿರುವ ಕಟ್ಟುಪಾಡುಗಳೇನು ಎಂದು ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಜನಪದ ಆಟ, ಜನಪದ ವೈದ್ಯದಲ್ಲಿ ಮಹಿಳೆಗೆ ಯಾವ ರೀತಿ ಸ್ಥಾನವಿದೆ. ಕೃಷಿಗೆ ಮಹಿಳೆಯ ಕೊಡುಗೆ ಏನು? ಆಧುನಿಕ ಕೃಷಿಯಲ್ಲಿ ಮಹಿಳೆಯ ಪಾತ್ರವೇನು, ಸ್ವಸಹಾಯ ಸಂಘದಿಂದ ಮಹಿಳೆಗೆ ಆಗುವ ಉಪಯೋಗವೇನು, ಜನಪದ ಸಾಹಿತ್ಯದಲ್ಲಿ ಮಹಿಳೆ ತನಗಾದ ನೋವು ಸಂತೋಷವನ್ನು ಹೇಗೆ ಹೇಳಿಕೊಂಡಿದ್ದಾಳೆ ಹಾಡುಗಳ ಮೂಲಕ ಎಂದು ತಿಳಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಸಮಾರೋಪ ಕುರಿತು ಒಟ್ಟು ಅಧ್ಯಯನದ ನೋಟ, ಅಧ್ಯಯನದ ಫಲಿತಗಳು, ಅನುಬಂಧದಲ್ಲಿ ಗ್ರಂಥ ಋಣ. ವಕ್ತೃ ವಿವರ, ಛಾಯಚಿತ್ರಗಳು ಇತ್ಯಾದಿಯನ್ನು ಒಳಗೊಂಡಿದೆ.

ಓಗೆ ಈ ಮಹಾಪ್ರಬಂಧದ ರಚನೆಗೆ ಬೇಕಾಗಿರುವ ಪೂರಕ ಸಾಮಾಗ್ರಿಗಳನ್ನು ಇತರ ಗ್ರಾಮಾಧ್ಯಯನ ಕೃತಿಗಳಿಂದ, ಸ್ಥಳೀಯರಿಂದ, ವಿದ್ವಾಂಸರಿಂದ ತಮಟಕಲ್ಲಿನ ಬಗ್ಗೆ ಈಗಾಗಲೇ ಪ್ರಕಟಗೊಂಡಿರುವ ಕೆಲವು ಲೇಖನಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**೧.೪. ಅಧ್ಯಯನ ವಿಧಾನ :**

ಪ್ರಸ್ತುತ ಮಹಾಪ್ರಬಂಧವು ತಮಟಕಲ್ಲು : ಮಹಿಳಾ ಜಾನಪದ ಎಂಬ ಶೀರ್ಷಿಕೆ ಅಡಿಯಲ್ಲಿ ಜಾನಪದದ ಸಂಶೋಧನೆಯ ಭಾಗವಾಗಿದೆ. ಈ ಅಧ್ಯಯನದಲ್ಲಿ ತಮಟಕಲ್ಲು ಕ್ಷೇತ್ರ ಪರಿಚಯ ಈ ಊರಿಗೆ ಹಿಂದೆ ಇದ್ದ ಹೆಸರು ಮತ್ತು ಪ್ರಸ್ತುತ ಇರುವ ಹೆಸರು ಬರಲು ಕಾರಣವನ್ನು

ತಿಳಿಸಲಾಗಿದೆ. ಅಲ್ಲಿನ ಸಾಮಾಜಿಕ ಆಚರಣೆಗಳು, ನಂಬಿಕೆ ಮತ್ತು ವಿಧಿ-ನಿಷೇಧಗಳು, ರಾಜಕೀಯ, ಆರ್ಥಿಕ, ಜನಪದ ಆಟ, ವೈದ್ಯದಲ್ಲಿ ಮಹಿಳಾ ಸ್ಥಾನ ಮಾನದ ಬಗ್ಗೆ ಮುಂತಾದ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಲು ಕೆಲವು ಸಂಶೋಧನಾ ವಿಧಾನಗಳನ್ನು ಆಳವಡಿಸಿಕೊಳ್ಳಲಾಗೆದೆ.

**ಪ್ರಾಥಮಿಕ ಮಾಹಿತಿ ಸಂಗ್ರಹ ವಿಧಾನಗಳು**

**೧. ಸಂದರ್ಶನ ವಿಧಾನ :**

ತಮಟಕಲ್ಲು : ಮಹಿಳಾ ಜಾನಪದ ಅಧ್ಯಯನ ಮಾಡುವಾಗ ಅಲ್ಲಿನ ಕ್ಷೇತ್ರ ಪರಿಚಯ ಹಾಗೂ ಭೌಗೋಳಿಕ ಲಕ್ಷಣಗಳ ಬಗ್ಗೆ, ಕುಂಡುಬದಲ್ಲಿ ಮಹಿಳೆಯ ನಿರ್ವಚನದ ಬಗ್ಗೆ, ಆರ್ಥಿಕ ಕ್ಷೇತ್ರದಲ್ಲಿನ ಒಡೆತನ ಮತ್ತು ಮಹಿಳಾ ಭಾಗವಹಿಸುವಿಕೆಯ ಬಗ್ಗೆ, ಆಚರಣೆಗಳಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ, ಜಾನಪದ ಆಟಗಳಲ್ಲಿ ಮಹಿಳೆ ಪಾತ್ರ, ಸ್ವ ಸಹಾಯ ಸಂಘಗಳು ಮಹಿಳೆಯರಿಗೆ ಯಾವ ರೀತಿ ಪ್ರಯೋಜನವಾಗಿವೆ ಎಂಬುದರ ಬಗ್ಗೆ ಮಾಹಿತಿಯನ್ನು ಸಂಗ್ರಹ ಮಾಡಲು ನೇರವಾಗಿ ವಕ್ತೃಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸುವ ವಿಧಾನವನ್ನು ಅನುಸರಿಸಿದ್ದೇನೆ.

ತಮಟಕಲ್ಲು ಪರಿಸರದ ಮಹಿಳೆಯರನ್ನು ಸಂದರ್ಶಿಸಿದಾಗ ಆಚರಣೆಗಳಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಭಾಗವಹಿಸುವಿಕೆಯ ಬಗ್ಗೆ, ಆರ್ಥಿಕ ಒಡೆತನದ ಬಗ್ಗೆ ಆಗಲಿ ಮುಕ್ತವಾಗಿ ತಮ್ಮ ಅನುಭವಗಳನ್ನು ಪ್ರತಿಯೊಬ್ಬರು ಮನಸ್ಪೂರ್ವಕವಾಗಿ ಹೇಳಿಕೊಂಡರು. ಭೂ ಒಡೆತನ ಎನ್ನುವುದು ಮಹಿಳೆಯ ಹೆಸರಲ್ಲಿದ್ದರು ಅದು ನಾಮಕಾವಸ್ಥೆಗೆ, ಅದರ ಪೂರ್ತಿ ಅಧಿಕಾರ ಗಂಡಸ್ಸಿನದೇ. ಸರ್ಕಾರದಿಂದ ಸಿಗುವ ಸೌಲಭ್ಯ ಪಡೆಯಲು ಮಹಿಳೆಯ ಹೆಸರಿಗೆ ಮಾಡಿಸಿರುವುದಾಗಿ ಹೇಳಿದರು. ಮತ್ತೆ ಕೆಲವರು ಕುಟುಂಬದ ಯಜಮಾನಿಕೆ ನಡೆಸುವವರು ನಮ್ಮ ಗಂಡಂದಿರೆ. ಇನ್ನು ಕೆಲವು ಮಹಿಳೆಯರು ತಾವೇ ಯಜಮಾನಿಕೆ ನೆಡೆಸುವುದಾಗಿ ಹೇಳಿದರು. ಅದಕ್ಕೆ ಕಾರಣಗಳನ್ನು ಸಹ ಹೇಳಿದರು. ಇನ್ನು ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ಭಾಗವಹಿಸುವಿಕೆಗೆ ಅವಕಾಶವಿರುವುದರಿಂದ ಇಲ್ಲಿನ ಕೆಲವು ಮಹಿಳೆಯರು ಸ್ವ ಇಚ್ಛೆಯಿಂದ ಚುನಾವಣೆಯಲ್ಲಿ ಭಾಗವಹಿಸಿದರೆ ಮತ್ತೆ ಕೆಲವು ಮಹಿಳೆಯರು ಮನೆಯಲ್ಲಿ ಗಂಡನ ಇಚ್ಛೆಯಿಂದ ಮತ್ತು ಊರಿನ ಅವರ ಸಮುದಾಯದ ಎಲ್ಲ ವ್ಯಕ್ತಿಗಳ ಪ್ರೋತ್ಸಾಹ ನೀಡಿದಾಗ ಚುನಾವಣೆಯಲ್ಲಿ ಸ್ಪರ್ಧಿಸಿರುವುದಾಗಿ ಹೇಳಿದರು. ಸಭೆಗೆ ತಾವೇ ಖುದ್ದು ಹಾಜರಾಗುವುದು, ಸೌಲಭ್ಯ ಕೇಳುವುದು ಎಲ್ಲ ಮಾಡುತ್ತೇವೆ. ಆದರೆ ಊರಿನ ಚರಂಡಿ, ರೋಡ್, ತೊಟ್ಟಿ ಮೊದಲಾದ ಕೆಲಸ ಮಾಡಿಸುವವರು ಗಂಡ ಅಥವಾ ಮಕ್ಕಳು ಮಾಡಿಸುವುದಾಗಿ ಹೇಳಿದರು. ಜನಪದ ನಂಬಿಕೆಗಳು ಮಹಿಳೆಯರ ಮೇಲೆ ಬೀರಿರುವ ಪರಿಣಾಮದ ಬಗ್ಗೆ ವಾರ್ಷಿಕಾವರ್ತನ ಮತ್ತು ಜೀವನಾವರ್ತನ ಆಚರಣೆಗಳಲ್ಲಿ ಮಹಿಳೆಯು ಎಲ್ಲಿ, ಯಾವ ಸಂದರ್ಭದಲ್ಲಿ ಅವರ ಭಾಗವಹಿಸುವಿಕೆ ಹೆಚ್ಚಾಗಿದೆ ಎಂಬುದನ್ನು, ನೀತಿ ನಿರ್ಧಾರ ತೆಗೆದುಕೊಳ್ಳುವ ವಿಷಯದಲ್ಲಿ ಮಹಿಳೆಗೆ ಇನ್ನು ಸ್ವತಂತ್ರ ಹಕ್ಕು ಇಲ್ಲ ಎನ್ನುವುದು ಆ ಊರಿನ ಮಹಿಳೆಯರನ್ನು ಸಂದರ್ಶಿಸಿದಾಗ ತಿಳಿಯಲಾಯಿತು. ವಕ್ತೃಗಳು ನಾನು ನಿರೀಕ್ಷಿಸಿದ್ದಕ್ಕಿಂತ ಭಿನ್ನವಾಗಿ ತಮ್ಮ ಅನುಭವಗಳನ್ನು ಹಂಚಿಕೊಂಡರು.

೨.ಅವಲೋಕನ ವಿಧಾನ :

ತಮಟಕಲ್ಲು : ಮಹಿಳಾ ಜಾನಪದದಲ್ಲಿ ಬರುವಂತಹ ಆಚರಣೆಗಳು, ಸಂಪ್ರದಾಯಗಳು, ಜಾತ್ರೆ, ನಂಬಿಕೆ, ವಿಧಿ-ನಿಷೇಧ ಇವುಗಳ ಬಗ್ಗೆ ಅಧ್ಯಯನ ಮಾಡಲು ಮಾಹಿತಿ ಸಂಗ್ರಹಣೆಗಾಗಿ ಅವಲೋಕನ ವಿಧಾನಕ್ಕೂ ಮೊರೆ ಹೋಗ ಬೇಕಾಯಿತು. ಇಲ್ಲಿನ ಜನ ಸಮುದಾಯವನ್ನು ಸಂದರ್ಶಿಸಿದಾಗ ಅವರ ಕೌಟುಂಬಿಕ ಜೀವನದ ಸ್ಥಿತಿಯನ್ನು ಅವಲೋಕಿಸಿದಾಗ ಅವರವರ ಧಾರ್ಮಿಕ ನಂಬಿಕೆ, ಆಚಾರ-ವಿಚಾರ, ದೈವಗಳ ಆರಾಧನೆ, ಸಂಪ್ರದಾಯಗಳನ್ನು ನೋಡಿದಾಗ ಸಾಮಾಜಿಕ ಸ್ತರದಲ್ಲಿ ಶ್ರೀಮಂತರು-ಬಡವರು ಮತ್ತು ಬೇರೆ ಬೇರೆ ಸಮುದಾಯದವರು ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಪೂಜಾ ಪುನಸ್ಕಾರಗಳನ್ನು ಮಾಡುವುದಾಗಲೀ, ಆಚರಣೆಗಳನ್ನು ಮಾಡುವುದರಲ್ಲಾಗಲೀ ಕೆಲವು ವ್ಯತ್ಯಾಸಗಳನ್ನು ಗುರುತಿಸಲಾಯಿತು. ಕೆಲವು ಕುಟುಂಬಗಳಲ್ಲಿ ಆಚರಣೆಯ ಸಂರ್ಭದಲ್ಲಿ ಮಹಿಳೆಯರಿಗೆ ಹೆಚ್ಚಿನ ಆದ್ಯತೆ ನೀಡಿದರೆ ಇನ್ನು ಕೆಲವು ಕುಟುಂಬದಲ್ಲಿ ಎಲ್ಲಾ ಜವಬ್ದಾರಿ ಗಂಡಿನದೇ ಆಗಿರುತ್ತಾದೆ. ಮಹಿಳೆ ಅಡುಗೆ ಕೆಲಸ ಮಾಡಲು, ಮಕ್ಕಳನ್ನು ನೋಡಿಕೊಳ್ಳಲು ಮಾತ್ರ ಸೀಮಿತ ಎನ್ನುವಷ್ಟರ ಮಟ್ಟಿಗೆ ಅವಳಿಗೆ ಸ್ಥಾನ ನೀಡಿರುವುದನ್ನು ಕೆಲವು ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಇಲ್ಲಿನ ಜನರಿಗೆ ಆಂಜನೇಯ ಸ್ವಾಮಿಯ ಮೇಲೆ ಧೃಢವಾದ ಭಕ್ತಿ ಇರುವುದರಿಂದ ಇಲ್ಲಿನ ಜನರಿಗೆ ಏನಾದರು ದೊಡ್ಡ ಕಾಯಿಲೆ ಬಂದರೆ ಮೊದಲು ಆಂಜನೇಯ ಸ್ವಾಮಿಯಲ್ಲಿ ಹೂವನ್ನು ಕೇಳಿಸುತ್ತಾರೆ. ಇದು ಆಸ್ಪತ್ರೆಯ ಕಾಯಿಲೆಯೋ ಅಥವಾ ಯಾರಾದರು ಮಾಡಿಸಿರುವುದೋ ಎಂದು ದೇವರು ಆಸ್ಪತ್ರೆಗೆ ಹೋಗು ಎಂದು ಹೂ ಕೊಟ್ಟರೆ ಆಸ್ಪತ್ರೆಗೆ ಹೋಗುತ್ತಾರೆ. ಇಲ್ಲವಾದರೆ ಆಂಜನೆಯ ಸ್ವಾಮಿ ದೇವಸ್ಥಾನದಲ್ಲಿಯೇ ಒಂದು ವಾರ, ತಿಂಗಳು ಗಟ್ಟಲೆ ದೇವರ ಭಂಡಾರವನ್ನು ಕಾಯಿಲೆಯಾದ ವ್ಯಕ್ತಿಗೆ ಹಚ್ಚಿ ಅಲ್ಲಿಯೇ ಇರುತ್ತಾರೆ. ಕೆಲವೊಂದು ಕುಟುಂಬಗಳಲ್ಲಿ ಆಧುನಿಕತೆಗೆ ತಕ್ಕಂತೆ ಆಚರಣೆಗಳು, ಸಂಪ್ರದಾಯಗಳು ಮರೆಯಾಗುವಂತಹ ಸ್ಥಿತಿಯನ್ನು ಆವಲೋಕನ ಮಾಡಲಾಯಿತು. ಅಲ್ಲಿ ಸಾಕಷ್ಟು ಮಹಿಳೆಯರು ಮಹಿಳಾ ಸಂಘಗಳಿಗೆ ಸೇರುವ ಮೂಲಕ ತಮ್ಮ ಜೀವನ ನಿರ್ವಹಣೆಗೆ ಅನುಕೂಲವಾಗುವ ಪರಿಸರವನ್ನು ಅವರು ನಿರ್ಮಿಸಿಕೊಂಡಿರುವುದು ಅವಲೋಕನ ಮಾಡಲಾಯಿತು. ಇಂತಹ ಸೂಕ್ಷ್ಮಾತಿ ಸೂಕ್ಷ್ಮ ಅಂಶಗಳನ್ನು ಅವಲೋಕಿಸಿ ಅವುಗಳನ್ನು ಅಧ್ಯಾಯದಲ್ಲಿ ವಿವರಿಸಲಾಗಿದೆ.

೩.ಪ್ರಶ್ನಾವಳಿ ವಿಧಾನ :

ಪ್ರಸ್ತುತ ಅಧ್ಯಯನವು ಅರಚನಾತ್ಮಕ ಪ್ರಶ್ನಾವಳಿಗಳ ವಿಧಾನವನ್ನು ಒಳಗೊಡಿದೆ. ಅರಚನಾತ್ಮಕ ಪ್ರಶ್ನಾವಳಿಗ ಮೂಲಕ ಸಂದರ್ಶನ ವೇಳೆಯಲ್ಲಿ ಪರಿಸ್ಥಿತಿಗೆ ತಕ್ಕಂತೆ ಪ್ರಶ್ನೆಗಳನ್ನು ಕೇಳಿ ಮಾಹಿತಿಯನ್ನು ಪಡೆಯಲಾಗಿದೆ.

## ೧.೪. ಇದುವರೆಗಿನ ಅಧ್ಯಯನ ಸಮೀಕ್ಷೆ :

ತಮಟಕಲ್ಲು ಗ್ರಾಮದ ಕುರಿತು ದೊರೆಯುವ ಕೆಲವು ಅಧ್ಯಯನಗಳನ್ನು ಗಮನಿಸಿದಾಗ ತಮಟಕಲ್ಲು ಗ್ರಾಮವನ್ನೇ ಕೇಂದ್ರೀಕರಿಸಿಕೊಡು ಸಂಪೂರ್ಣ ಗ್ರಾಮದ ಅಧ್ಯಯನ ಈ ವರೆಗೆ ಕಂಡು ಬಂದಿಲ್ಲ. ಆದರೂ ತಮಟಕಲ್ಲು ಗ್ರಾಮದ ಬಗ್ಗೆ ಬಂದಿರುವ ಕೆಲವು ಲೇಖನಗಳಲ್ಲಿ ಗ್ರಾಮದಲ್ಲಿ ಕಂಡುಬರುವ ಶಾಸನದ ಬಗ್ಗೆ, ಈ ಊರಿಗೆ ಹೆಸರು ಹೇಗೆ ಬಂದಿತು ಎನ್ನುವ ಸ್ಥಳನಾಮದ ಬಗ್ಗೆ, ಆಂಜನೇಯ ದೇವಾಲಯದ ಬಗ್ಗೆ, ಸತಿಕಲ್ಲಿನ ಬಗ್ಗೆ ಕೆಲವು ಸಂಶೋಧಕರು ಮಾಹಿತಿ ನೀಡಿದ್ದಾರೆ.

ಇತಿಹಾಸ ಸಂಪುಟ-೩೩[೨೦೧೮]ಎಂಬ ಕೃತಿಯಲ್ಲಿ ಲಕ್ಷ್ಮಣ ತೆಲಗಾವಿಯವರು ಬರೆದಿರುವ ತಮಟಕಲ್ಲು ಸ್ಥಳನಾಮದ ಹಿನ್ನಲೆ ಎನ್ನುವ ಲೇಖನದಲ್ಲಿ ತಮಟಕಲ್ಲು ಪರಿಸರದ ಹಿನ್ನಲೆಯನ್ನು ಅಂದರೆ ಶಾತವಾಹನ ಮಹಾರಾಜರ ಆಡಳಿತಾವಧಿಯಿಂದ ಆರಂಭಗೊಂಡಿರುವ ಬಗ್ಗೆ, ತಮಟಕಲ್ಲು ಎನ್ನುವುದು ತಾಮ್ರ ಕುಟುಕರು ನೆಲೆಸಿದ್ದ ತಾಮ್ರಸಾಲೆಯೆನಿಸಿದ್ದು, ತಾಮ್ರ ಭಸ್ಮ ತಯಾರಿಕೆಯ ಕೇಂದ್ರವಾಗಿದ್ದಿತೆನ್ನಲಾಗಿದೆ. ಮತ್ತು ಅಲ್ಲಿಯೇ ದೊರೆತಿರುವ ಬಂಡೆ ಬರಹದಿಂದ ಮಾಳನಾಯಕನ ಮಗ ಬೂಸಿನಾಯಕನೆಂಬವನು ತಮಂಡಿಕಲ್ಲು ನರಸಿಂಹ ದೇವರ ಗುಹಾಲಯಕ್ಕೆ ಕಲ್ಲು ಹಾದಿಯನ್ನು ಮಾಡಿಸಿದ್ದನ್ನು ಹೇಳುತ್ತದೆ. ಈ ಬರಹದ ಬುಡದಲ್ಲಿ ಬಿಲ್ಲು-ಬಾಣ ಸಹಿತವಿರುವ ಬುಸಿನಾಯಕನ ರೇಖಾಕೃತಿ ಇದೆ ಎಂದು ತಿಳಿಸಿದ್ದಾರೆ. ಈ ಬಂಡೆ ಬರಹದ ಕಾಲಮಾನ ೧೮ನೇ ಶತಮಾನ ಇರಬಹುದೆಂದು ಊಹಿಸಿದ್ದಾರೆ. ರಂಗಸ್ವಾಮಿ ಗುಡ್ಡದ ಮೇಲೆ ಕೆಲವು ಬರಹಗಳು ಮಂಡಲಾಕೃತಿ, ಜ್ಯಾಮಿತಿಯಾಕೃತಿ ಮತ್ತಿತರ ತಂತ್ರ ಸಂಬಂಧಿ ಸಂಕೇತಗಳುಳ್ಳ ರೇಖಾಕೃತಿಗಳ ಬಗ್ಗೆ, ಇಂದಿನ ತಮಟಕಲ್ಲಿನ ಗುಡ್ಡದ ತುದಿಯಲ್ಲಿ ಬೋರಲು ಹಾಕಿದಂತಿರುವ ಬಟ್ಟಲಾಕಾರ ಬಂಡೆಯನ್ನು ತಮಟಕಲ್ಲು[ನಗಾರಿಕಲ್ಲು] ಎಂದು ಗುರುತಿಸಿದ್ದು ಅದರ ದೆಸೆಯಿಂದಲೇ ತಮಟಕಲ್ಲು ಎಂಬ ಹೆಸರು ಬಂದಿದೆ ಎಂದು ತಿಳಿಸಿದ್ದಾರೆ.

ಚಿತ್ರದುರ್ಗ ಪರಿಸರದ ಇಂಗಳದ ಹಾಳು, ಕುಂಚಿಗನ ಹಾಳು ಮಾತ್ರವಲ್ಲದೆ ಈ ಹೋಬಳಿ ವ್ಯಾಪ್ತಿಯಲ್ಲಿ ಬರುವ ಗೋನುರು, ಗೊಲ್ಲರ ಹಟ್ಟಿ, ಚಿಕ್ಕೇನಹಳ್ಳಿ, ಗುಡ್ಡದ ರಂಗವ್ವನ ಹಳ್ಳಿಗಳ ಬಳಿಯಲ್ಲೂ ಪೂರ್ವಜರು ಗಣಿ ತೋಡಿ ತಾಮ್ರ ಲೋಹ ಸಂಗ್ರಹಿಸಿರುವುದು ಕಂಡು ಬಂದಿರುತ್ತದೆ. ತಮಟಕಲ್ಲು ಸಹ ಇದೇ ಗಣಿವಲಯದಲ್ಲಿದ್ದರೂ ಇಲ್ಲಿ ಗಣಿಗಾರಿಕೆ ನಡೆದ ಯಾವ ಸೂಚನೆಗಳು ದೊರೆಯುವುದಿಲ್ಲ. ಆದರೆ ಇಲ್ಲಿ ಕುಲುಮೆ ದರ್ಜೆಯ ತಾಮ್ರವನ್ನು ಉತ್ಪಾದಿಸುವ ಘಟಕವಿದ್ದುದರ ಬಗ್ಗೆ ತಾಮ್ರಪಟದ ತಯಾರಿಕೆಯಲ್ಲಿ ಅಗತ್ಯವಿರುವ ತಾಮ್ರ ಗರ್ಭ ಅಥವಾ ಮೈಲು ತುತ್ತು[ಕಾಪರ್ ಸಲ್ಫೇಟ] ವಿಫಲವಾಗಿ ದೊರೆಯುವುದರ ಬಗ್ಗೆ,ತಾಮ್ರ ಸಂಸ್ಕರಣೆಗೆ ಸಂಬಂಧಿಸಿದ ಕುಲುಮೆಗಳ ಕುರುಹುಗಳು ಗೋಚರಿಸುವುದರ ಬಗ್ಗೆ, ತಮಟಕಲ್ಲು ನಿವೇಶನದಲ್ಲಿ ದೊರೆತ ವಸ್ತುಗಳ ಬಗ್ಗೆ ತಿಳಿಸುತ್ತಾ ತಮಟಕಲ್ಲು ಪುರಾತಾತ್ವಿಕವಾಗಿ ಮಾತ್ರವಲ್ಲದೆ ಚಾರಿತ್ರಿಕ ಮತ್ತು ಸಾಂಸ್ಕೃತಿಕ ನೆಲೆಯೂ ಆಗಿ ಮಹತ್ವವನ್ನು ಪಡೆದುಕೊಂಡಿದೆ.

ಚಿತ್ರದುರ್ಗ ಜಿಲ್ಲಾ ದರ್ಶಿನಿ[೧೯೯೧]ಎಂಬ ಕೃತಿಯಲ್ಲಿ ಟಿ ಗಿರಿಜಾ ರವರು ತಮಟಕಲ್ಲು ಸುತ್ತ ಮುತ್ತ ಬರುವ ಹಳ್ಳಿಗಳ ಬಗ್ಗೆ, ಅಲ್ಲಿ ದೊರೆತಿರುವ ಶಾಸನ ಅದರ ಕಾಲ, ಗುಣಮಧುರ ಎಂಬ ವ್ಯಕ್ತಿಯ ವರ್ಣನೆ ಮಾಡಿರುವುದರ ಬಗ್ಗೆ, ಈ ಊರಿನಲ್ಲಿ ದೊರೆತಿರುವ ಸತಿಕಲ್ಲಿನ ಬಗ್ಗೆ, ತಮಟಕಲ್ಲು ಸ್ಥಳನಾಮದ ಹಿನ್ನೆಲೆ ಬಗ್ಗೆ ತಿಳಿಸಲಾಗಿದೆ.

ಕರ್ನಾಟಕದ ವೀರಗಲ್ಲುಗಳು[೨೦೦೪] ಎಂಬ ಕೃತಿಯಲ್ಲಿ ಡಾ.ಆರ್.ಶೇಷಶಾಸ್ತ್ರೀಯವರು ಕರ್ನಾಟಕದ ಮೊಟ್ಟ ಮೊದಲನೆ ವೀರಗಲ್ಲು. ತಮಟಕಲ್ಲಿನಲ್ಲಿ ಸುಮಾರು ಕ್ರಿ.ಶ.೫೦೦ರ ಗುಣಮಧುರನ ವೀರಗಲ್ಲು. ಈ ಶಾಸನ ಸಂಸ್ಕೃತ ಭಾಷೆಯದು ಮತ್ತು ಇದರ ಪಕ್ಕದಲ್ಲಿಯೇ ಇದೇ ವೀರನನ್ನು ಹೊಗಳುವ ಕನ್ನಡ ಭಾಷೆಯ ವೃತ್ತ ಛಂದಸ್ಸಿನ ಒಂದು ಪದ್ಯವಿದೆ ಎಂದು ತಿಳಿಸಿದ್ದಾರೆ. ಸಂಸ್ಕೃತ ಭಾಷೆಯ ನಂತರ ಕನ್ನಡ ಭಾಷೆಯಲ್ಲಿಯೂ ವಿವರಗಳು ಇರುವುದಾಗಿ, ಈ ದೃಷ್ಟಿಯಿಂದ ನೋಡಿದಾಗ ತಮಟಕಲ್ಲಿನಲ್ಲಿ ವೀರಗಲ್ಲಿನ ಮೇಲಿರುವ ಸಂಸ್ಕೃತದ ಪಾಠ ಮತ್ತು ಪಕ್ಕದಲ್ಲಿಯೇ ಇರುವ ಅದೇ ವೀರನನ್ನು ಹೊಗಳುವ ಕನ್ನಡ ಭಾಷೆಯ ವೃತ್ತ ಕೂತೂಹಲಕಾರಿಯಾಗುತ್ತವೆ. ತಮಟಕಲ್ಲಿನ ವೀರಗಲ್ಲಿನ ಪಕ್ಕದಲ್ಲಿರುವ ಈ ಶಾಸನವನ್ನು ವೀರಗಲ್ಲಿನ ಪಾಠದ ಒಂದು ಭಾಗವೆಂದೇ ಸ್ವೀಕರಿಸಬಹುದೆಂದು ತೋರುತ್ತದೆ ಎಂದು ತಿಳಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ[೨೦೦೯] ಎಂಬ ಕೃತಿಯಲ್ಲಿ ತಮಟಕಲ್ಲು, ಚಿಕ್ಕಗೊಂಡನ ಹಳ್ಳಿ,ಸಂಗೇನಹಳ್ಳಿ ನೆಲೆಗಳಲ್ಲಿ ಇತಿಹಾಸ ಆರಂಭದ ಅವಶೇಷಗಳು ಪತ್ತೆ ಹಚ್ಚಿರುವುದಾಗಿ ಪ್ರೊ॥ ಲಕ್ಷ್ಮಣ ತೆಲಗಾವಿ ಮತ್ತು ಸಂಶೋಧನಾ ತಂಡದವರು ಹೇಳಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ[೨೦೦೫]ಎಂಬ ಕೃತಿಯಲ್ಲಿ ಡಾ.ಎಸ್. ಗುರುರಾಜ್ ರವರ ಚಿತ್ರದುರ್ಗದ ಜಿಲ್ಲೆಯ ಕನ್ನಡ ಶಾಸನಗಳು ಎಂಬ ಲೇಖನದಲ್ಲಿ ತಮಟಕಲ್ಲಿನಲ್ಲಿ ದೊರೆತಿರುವ ಶಾಸನದ ಬಗ್ಗೆ ತಿಳಿಸಿದ್ದಾರೆ. ಇಲ್ಲಿ ದೊರೆತಿರುವ ಶಾಸನ ಎರಡುವೀರಗಲ್ಲುಗಳೇ ಇವುಗಳ ಪಾಠ ಮೊದಲನೆಯದು ಸಂಸ್ಕೃತದಲ್ಲಿದ್ದರೆ ಮತ್ತೊಂದರದು ಕನ್ನಡದಲ್ಲಿದೆ. ರೈಸ್ ರವರ ಪ್ರಕಾರ ಈ ಎರಡೂ ಶಾಸನಗಳ ಕಾಲ ಸು ಕ್ರಿ.ಶ.೫೦೦ ಇವು ಗುಣಮಧುರ ಎನ್ನುವ ವೀರನನ್ನು ಕುರಿತು ವರ್ಣಿಸುವಂಥವು. ವರ್ಣನೆ ಈ ರೀತಿಯಾಗಿದೆ. ಈವೀರನ ವಂಶಾವಳಿ ಹೀಗಿದೆ: ಭಾರಧ್ವಾಜ ವಂಶ[ಗೋತ್ರ?]ಕ್ಕೆ ಸೇರಿದ್ದವನು. ಧನಾಗಮ; ಈತನ ಮಗ ಮನಾಗಮ[ಅಥ ಭಾರಧ್ವಾಜ ವಂಶ ಧನಾಗಮಸ್ಯ ಪುತ್ರ:ಮನಾಗಮ;] ಈತನ ಸುಪುತ್ರನೇ ಗುಣಮದುರನೆಂಬಾತ [ಕಸ್ಯ ಚಸೂನು;ಗುಣ ಮದುರೋನಾಮ]; ಈತನಾದರೋ ಸಜ್ಜನರಿಗೆ ದಾನ ಕೊಡುವಲ್ಲಿ 'ಕೊಡುಗೈ' ಎನಿಸಿದ್ದವನ್ನು ಎಂದು ತಿಳಿಸಿದ್ದಾರೆ. ಇನ್ನೊಂದು ಶಾಸನ ಪಾಠ ಕನ್ನಡದಲ್ಲಿದೆ ಈ ರೀತಿ ಇರುವುದಾಗಿ ತಿಳಿಸಿದ್ದಾರೆ. ಈ ಗುಣಮಧುರ 'ಅನಿನ್ದ್ಯ ಗುಣನ್': ಪ್ರಣಯಿಜನಕ್ಕೆ ಕಾಮನಸಿತೋತ್ತ ವರ್ಣ್ಣನವನ್': ಆತ 'ದಿವ್ಯ ಪುರುಷನ್': ಪುರುಷ ಪ್ರವರನ್'-ಹೀಗೆ ಸಾಗಿರುವುದಾಗಿ ಒಬ್ಬ ವೀರನನ್ನು ಕುರಿತಂಥ ಎರಡು ವೀರಗಲ್ಲುಗಳಿರುವುದಾಗಿ ಅಪರೂಪವೆಂದು ತಿಳಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆ ದರ್ಶನ[೨೦೧೫]ಎಂಬ ಕೃತಿಯಲ್ಲಿ ಕೆ. ಮಂಜುನಾಥ ನಾಯಕರವರು ಚಿತ್ರದುರ್ಗ ಪರಿಸರದ ತಮಟಕಲ್ಲು ಸಹ ಮಾನವ ಬದುಕಿನ ಬಗೆಗೆ ಖಚಿತ ಮಾಹಿತಿ ಒದಗಿಸಿರುವುದಾಗಿ ಮತ್ತು ಚಂದ್ರವಳ್ಳಿಯಲ್ಲಿಯೂ ನವ ಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಯುಗದ ಸಂಸ್ಕೃತಿಗಳ ಅವಶೇಷಗಳು ಶೋಧಿಸಲ್ಪಟ್ಟರೆ ತಮಟಕಲ್ಲು ಗ್ರಾಮವು ಇದಕ್ಕೆ ಸೇರಿರುವುದಾಗಿ ಹೇಳಿದ್ದಾರೆ.ಮತ್ತು ವಾಸಿಕಾಪುರದ ಅದಿನಾಥ ಗುಣಮಧುರನೆಂಬವನನ್ನು ಮನೋಜ್ಞವಾಗಿ ವರ್ಣಿಸುವ ೬ನೇಯ ಶತಮಾನದ ಸುಪ್ರಸಿದ್ಧ ಕಲ್ಲು ಚಪ್ಪಡಿ ಬರಹವು ತಮಟಕಲ್ಲಿರುವುದಾಗಿ ತಿಳಿಸಿದ್ದಾರೆ.

ಚಿತ್ರದುರ್ಗ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ [೨೦೦೫] ಎಂಬ ಕೃತಿಯಲ್ಲಿ ಡಾ.ಕೆ.ಬಿ.ಶಿವತಾರಕ್ ರವರ ಚಿತ್ರದುರ್ಗ ಜಿಲ್ಲೆಯ ಪ್ರಗಿತಿಹಾಸ ಲೇಖನದಲ್ಲಿ ತಮಟಕಲ್ಲು ಸಹ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆ ಎಂದು ತಿಳಿಸಿದ್ದಾರೆ.

ಕರ್ನಾಟಕ ದೇವಾಲಯ ಕೋಶ : ಚಿತ್ರದುರ್ಗ ಜಿಲ್ಲೆ [೨೦೧೭] ಎಂಬ ಕೃತಿಯಲ್ಲಿ ಡಾ.ಎಸ್.ವೈ. ಸೋಮಶೇಖರರವರು ತಮಟಕಲ್ಲಿನಲ್ಲಿರುವ ಕ್ರಿ.ಶ.ಸು ೧೫ನೇ ಶತಮಾನದ ಆಂಜನೇಯ ದೇವಾಲಯದ ಬಗ್ಗೆ ಹೇಳಿದ್ದಾರೆ. ಈ ದೇವಾಲಯ ಜೀರ್ಣೋದ್ಧಾರವಾಗಿ ಆಧುನೀಕರಣಗೊಂಡಿರುವುದಾಗಿ, ಆರು ಅಡಿಗಳೆತ್ತರದ ಆಂಜನೇಯನ ಉಬ್ಬು ಶಿಲ್ಪ ಇರುವುದಾಗಿ ಗರ್ಭಗೃಹದ ಬಾಗಿಲುವಾಡವನ್ನು ಹಿತ್ತಾಳೆಯ ತಗಡಿನಿಂದ ಹೊದಿಸಿದ್ದು, ಗರ್ಭಗೃಹ ಮತ್ತು ಪ್ರವೇಶ ದ್ವಾರಗಳ ಮೇಲೆ ದ್ರಾವಿಡ ಮಾದರಿಯ ಗೋಪುರವನ್ನು ಇತ್ತೀಚಿಗೆ ನಿರ್ಮಿಸಿರುವುದಾಗಿ ಹೇಳಿದ್ದಾರೆ. ಮತ್ತು ತಮಟಕಲ್ಲು ಗ್ರಾಮವು ಪ್ರಾಗೈತಿಹಾಸಿಕ ಕಾಲದಿಂದಲೂ ಪ್ರಾಚೀನ ಮಾನವನ ವಸತಿ ತಾಣವಾಗಿದ್ದು, ಗ್ರಾಮದ ದಕ್ಷಿಣಕ್ಕಿರುವ ಚಿಕ್ಕ ಬೆಟ್ಟದ ಮಧ್ಯದ ಕಣಿವೆಯೇ ಆದಿ ಮಾನವನ ಪ್ರಸಿದ್ಧ ವಸತಿ ನೆಲೆಯಾಗಿತ್ತು ಮತ್ತು ನವಶಿಲಾಯುಗ ಕಾಲದ ಬೂದಿ ದಿಬ್ಬ, ಕಲ್ಲಿನ ಕೊಡಲಿ, ಕವಣೆ ಕಲ್ಲು, ಮಡಕೆ–ಕುಡಿಕೆಗಳು ಹೇರಳವಾಗಿ ಕಂಡು ಬರುತ್ತವೆ ಎಂದು ತಿಳಿಸಿದ್ದಾರೆ. ಇಲ್ಲಿ ಬೃಹತ್ ಶಿಲಾಯುಗ,ಶಾತವಾಹನ ಕಾಲದ ಮಡಕೆ–ಕುಡಿಕೆ ಮೊದಲಾದ ಅವಶೇಷಗಳೂ ದೊರೆತಿರುವುದಾಗಿ, ಜೊತೆಗೆ ಚಾರಿತ್ರಿಕ ಕಾಲದ ಕ್ರಿ.ಶ.೫ನೇ ಶತಮಾನದ ಪ್ರಾಚೀನ ಶಾಸನೋಕ್ತ ವೀರಗಲ್ಲು ಇಲ್ಲಿ ಕಂಡು ಬಂದಿರುವುದಾಗಿ, ಇಲ್ಲಿರುವ ಈ ಶಾಸನದ ಬಗ್ಗೆ ಶಾಸನದಲ್ಲಿ ಗುಣಮಧುರನನ್ನು ಹೊಗಳಿರುವುದರ ಬಗ್ಗೆ ಮತ್ತು ಈ ವೀರಗಲ್ಲಿನಲ್ಲಿ ಮೂರು ಜನ ವೀರರನ್ನು ಕಡೆಯಲಾಗಿದ್ದು ಇವರಲ್ಲಿ ಮಧ್ಯದವನು ಶಾಸನದಲ್ಲಿ ಹೇಳಿರುವ ಗುಣಮಧುರನಿರಬೇಕು ಅಕ್ಕ ಪಕ್ಕದವರು ಅವನ ಸಹಾಯಕರಾಗಿದ್ದಾರೆ. ಮಧ್ಯದಲ್ಲಿ ನಿಂತಿರುವ ವೀರನು ಹೋರಾಟಕ್ಕೆ ಮುನ್ನುಗ್ಗುತ್ತಿರುವಂತಿದೆ ಎಂದು ತಿಳಿಸಿದ್ದಾರೆ, ಮತ್ತು ಈ ತಮಟಕಲ್ಲು ಗ್ರಾಮದಲ್ಲಿ ಕಂಡು ಬರುವ ಕೆಲವು ದೇವಾಲಯಗಳಾದ ಉಡಸಲಮ್ಮ, ಭೈರಸಿದ್ದೇಶ್ವರ, ರಂಗಸ್ವಾಮಿ, ಸೂಜಿ ದೇವರು, ಈಶ್ವರ ದೇವಾಲಯಗಳಿರುವುದಾಗಿ ಮತ್ತು ವೀರಗಾರರ ಗುಡಿಯಲ್ಲಿ ವಿಜಯನಗರೋತ್ತರ ಕಾಲದ

ವೀರಗಲ್ಲನ್ನು ಇಟ್ಟು ಆರಾಧಿಸುವುದರ ಬಗ್ಗೆ ತಿಳಿಸಿದ್ದಾರೆ. ಹುಟ್ಟಿದ ಹಳ್ಳಿ [೨೦೦೧] ಕೃತಿಯಲ್ಲಿ ಅರ್ಚಕ ಬಿ ರಂಗಸ್ವಾಮಿ ಯವರು ಇಂಗ್ಲೀಷಿನವರ ಪ್ರಭಾವ ಹಳ್ಳಿಯ ಜನರ ಪ್ರಭಾವ ಹೇಗೆ ಬೀರಿವೆ, ಜನಪದ ವೈದ್ಯ ಪದ್ಧತಿ ಬಗ್ಗೆ , ಜನರ ನಡೆ-ನುಡಿ, ಹಬ್ಬ-ಹರಿದಿನಗಳ ಬಗ್ಗೆ, ಜಾತಿಪದ್ಧತಿಯನ್ನು ನಮ್ಮ ದೇಶದದಲ್ಲಿ ಎಷ್ಟು ಕಟ್ಟು ನಿಟ್ಟಾಗಿ ಅನುಸರಿಸುತ್ತಾರೆ.ಅಂತರ್ ಜಾತಿ ವಿವಾಹವನ್ನು ಹೇಗೆ ವಿರೋಧಿಸುತ್ತಾರೆ. ನ್ಯಾಯ ತೀರ್ಮಾನ ವೈಖರಿ ಬಗ್ಗೆ, ಗಂಡಿನ ಆಸರೆ ಇಲ್ಲದೆ ಒಂದು ಹೆಣ್ಣು ಸಮಾಜದಲ್ಲಿ ಬದುಕಲು ಸಾಧ್ಯವಿಲ್ಲ. ಒಂದು ವೇಳೆ ಅವಳನ್ನು ಸಮಾಜ ನೋಡುವ ದೃಷ್ಟಿಯೇ ಬೇರೆ ಎಂದು ತಿಳಿಸಿದ್ದಾರೆ. ಆ ಊರಿನಲ್ಲಿ ಜನರು ಬಳಸುವ ಗಾದೆಗಳು, ಕಥೆಗಳು ಲಾವಣಿಗಳ ಬಗ್ಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಪ್ರತಿಯೊಂದು ಹಳ್ಳಿಗಳ ಬದುಕು ಒಂದೇ ರೀತಿ ಎಂಬಂತೆ ಕಂಡು ಬಂದರು ಒಂದೊಂದು ಹಳ್ಳಿಗೂ ತನ್ನದೇ ಆದ ಪ್ರತ್ಯೇಕ ವಿಶಿಷ್ಟ ಗುಣ ಇರುವುದನ್ನು ಗುರುತಿಸಬಹುದು. ಅದೇ ರೀತಿಯಾಗಿ ಚನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ[೧೯೯೩]ಎಂಬ ಕೃತಿಯಲ್ಲಿ ಡಾ.ಟಿ. ಗೋವಿಂದರಾಜು ಆ ಊರಿನ ಭೌಗೋಳಿಕ ನೈಸರ್ಗಿಕ ವಿವರಗಳಿಂದ ಹಿಡಿದು ಊರಿನ ಪ್ರಾಚೀನತೆ, ಜಾತಿ ಪದ್ಧತಿ, ಅರ್ಥ ವ್ಯವಸ್ಥೆ, ಕುಟುಂಬ ಪದ್ಧತಿ ವೈವಾಹಿಕ ಸಂಪ್ರದಾಯಗಳು, ಶವಸಂಸ್ಕಾರದ ಆಚರಣಾ ವಿಧಿಗಳು, ಧಾರ್ಮಿಕ ಆರಾಧನೆಗಳು, ಹಬ್ಬ- ಹರಿದಿನಗಳ ಬಗ್ಗೆ ,ಕುಲಗಳಬಗ್ಗೆ, ಕಟ್ಟೆ ಮನೆಗಳ ಬಗ್ಗೆ, ನ್ಯಾಯ ತೀರ್ಮಾನಗಳ ಬಗ್ಗೆ ತಿಳಿಸಿದ್ದಾರೆ.

ಗೊಳಂಗಿ ಗ್ರಾಮ : ಒಂದು ಸಾಂಸ್ಕೃತಿಕ ಅಧ್ಯಯನ[೧೯೯೫] ಎಂಬ ಕೃತಿಯಲ್ಲಿ ಡಾ. ಅರ್ಜುನ ಯ. ಗೊಳಸಂಗಿ ಈ ಒಂದು ಕೃತಿಯಲ್ಲಿ ಗೊಳಸಂಗಿ ಪದ ನಿಷ್ಪತ್ತಿ, ಊರಿಗೆ ಹೆಸರು ಕಾರಣವಾಗಿರುವ ದಂತ ಕಥೆಗಳಬಗ್ಗೆ, ಜಹಗೀರ್ದಾರರ ಆಡಳಿತ, ಮನೆಗಳ ರಚನೆ, ಭೌಗೋಳಿಕ ಲಕ್ಷಣದ ಬಗ್ಗೆ, ಗೊಳಸಂಗಿಯಲ್ಲಿ ಜಾತಿ ಆಧಾರದ ಮೇಲೆ ಕೆಳವರ್ಗ,ಮೇಲ್ ವರ್ಗ, ಮಧ್ಯಮ ವರ್ಗ ಎಂದು ಗುರುತಿಸದೇ ೪೦ರಿಂದ ೮೦ ಎಕರೆ ಭೂಮಿ ಇರುವವರಿಗೆ ಮೇಲ್ ವರ್ಗ, ೧೧ರಿಂದ ೪೦ ಎಕರೆ ಮಧ್ಯಮ ವರ್ಗ, ೫ರಿಂದ ೧೦ಎಕರೆ ಜಮೀನುವುಳ್ಳವರನ್ನು ಕೆಳವರ್ಗ ಎನ್ನುವರು. ಪ್ರಾಚೀನ ಕಾಲದಲ್ಲಿ ಹಳ್ಳಿಯ  ಕೆಲಸಗಳನ್ನು ಯಾವ ರೀತಿಯಲ್ಲಿ ಹಂಚಿದ್ದರೂ ಎಂದು ತಿಳಿಸಿದ್ದಾರೆ. ಜನನದಿಂದ ಸಾವಿನವರೆಗಿನ ನಡೆಯುವ ಆಚರಣೆಗಳ ಬಗ್ಗೆ ತಿಳಿಸಿದ್ದಾರೆ ಮನೋರಂಜನೆಗಾಗಿ ಬೆಳಸಿಕೊಡು ಬಂದ ಹವ್ಯಾಸಿ ಜನಪದ ಕಲೆ, ಆಟ ಬಗ್ಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಅಪ್ರಕಟಿತ ಮಹಾಪ್ರಬಂಧವಾದ ಕಬ್ಬಾಳು ಸಂಕಥನದಲ್ಲಿ, ಕಬ್ಬಾಳು ಸ್ಥಳನಾಮದ ಬಗ್ಗೆ ಇರುವ ಐತಿಹ್ಯದ ಬಗ್ಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಸ್ಥಿತಿಗತಿ ಬಗ್ಗೆ, ಗ್ರಾಮ ದೇವತೆಯಾದ ಕಬ್ಬಾಳಮ್ಮನ ಬಗ್ಗೆ,ಆಧುನಿಕತೆಯ ಪ್ರಭಾವದಿಂದ ಅವಿಭಕ್ತ ಕುಟುಂಬಗಳು ಕಣ್ಮರೆಯಾಗಿ ವಿಭಕ್ತ ಕುಟುಂಬಗಳು ಹೆಚ್ಚುತ್ತಿರುವುದರ ಬಗ್ಗೆ ಆಧುನಿಕ ಕೃಷಿ

ಪದ್ಧತಿ ಹೆಚ್ಚಿದಂತೆಲ್ಲ ಗ್ರಾಮೀಣ ಜನರು ಪರಾವಲಂಬಿಯಾಗುತ್ತಿರುವ ಬಗ್ಗೆ ಈ ಪ್ರದೇಶದಲ್ಲಿ ಕಥೆಗಳು ಹೆಚ್ಚಾಗಿ ಮಹಿಳೆಯರಿಂದಲೇ ಹೇಳಲ್ಪಟ್ಟಿರುವುದಾಗಿವೆ. ಕಥೆಗಳ ಮೂಲಕ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಬಹುದು ಕಥೆಗಳಲ್ಲಿ ಬದುಕಿನ ವಿನೋದ, ಹಾಸ್ಯ, ಆಧ್ಯಾತ್ಮ, ಕುಟುಂಬ, ಮದುವೆ, ದುರಂತ, ಸಾಹಸ, ಕಷ್ಟ ಪರಂಪರೆಯ ಸಂಗತಿಗಳನ್ನು ಇಲ್ಲಿನ ಕಥೆಗಳಲ್ಲಿ ಕಾಣಬಹುದು.

ಈ ಮೇಲಿನ ಎಲ್ಲಾ ಲೇಖನಗಳನ್ನು ಗಮನಿಸಿದಾಗ ಇದುವರೆಗೂ ನಡೆದಿರುವ ಅಧ್ಯಯನಗಳು ಹೆಚ್ಚಾಗಿ ತಮಟಕಲ್ಲು ಶಾಸನದ ಬಗ್ಗೆ, ಊರಿಗೆ ಹೆಸರು ಹೇಗೆ ಬಂದಿತು, ಸತೀಕಲ್ಲಿನ ಬಗ್ಗೆ, ಆಂಜನೇಯ ದೇವಾಲದ ಬಗ್ಗೆ. ಈ ಮಾಹಿತಿಯ ಜೊತೆಗೆ ಇಡೀ ಊರಿನ ಎಲ್ಲಾ ಚಟುವಟಿಕೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಅಥವಾ ಮಹಿಳೆಯರ ಸ್ಥಾನದ ಬಗ್ಗೆ ಅಧ್ಯಯನ ಮಾಡಲಾಗಿದೆ.

# ಅಧ್ಯಾಯ ಎರಡು:
# ತಮಟಕಲ್ಲು ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ, ಸಮಾಜಿಕ ಜೀವನ

# ಅಧ್ಯಾಯ - ಎರಡು

# ತಮಟಕಲ್ಲು ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನಲೆ, ಸಾಮಾಜಿಕ ಜೀವನ

ಪ್ರತಿಯೊಂದು ಗ್ರಾಮ ನಾಮವು ಒಂದು ಅರ್ಥವನ್ನು ಹೊಂದಿರುತ್ತದೆ. ಆದರೆ ಕಾಲಾನಂತರದಲ್ಲಿ ಆ ಊರಿನ ಹೆಸರು ಜನರ ಮನಸ್ಸಿನಿಂದ ಅದರ ಅರ್ಥವನ್ನು ಕಳೆದುಕೊಂಡು ಬಿಟ್ಟಿರುತ್ತದೆ. ಹಾಗಾಗಿ ತನ್ನ ಊರಿನ ನಿಜ ಸ್ವರೂಪ, ಮೂಲಾಂಶಗಳನ್ನು ತಿಳಿಯಬೇಕೆಂದರೆ ಆಳವಾದ ಅಧ್ಯಯನದಿಂದ ಮಾತ್ರ ಸಾಧ್ಯ.

ಸ್ಥಳನಾಮಗಳ ಅಧ್ಯಯನದಿಂದ ಹಳ್ಳಿಯ ಏಳಿಗೆ, ಮಹಾಪುರುಷರ ಜೀವನ, ಜನರ ಅಭಿರುಚಿ, ಸೃಜನಶೀಲತೆಯನ್ನು ಅರಿಯಬಹುದಾಗಿದೆ. ಸ್ಥಳನಾಮಗಳು ನಮ್ಮ ಹಿರಿಯರ ವಿದ್ಯಾ ಸಂಪನ್ನತೆ, ಸೌಂದರ್ಯ ಪ್ರಜ್ಞೆ, ಧಾರ್ಮಿಕ ದೃಷ್ಟಿ, ಅಂದಿನ ಜನರ ವೃತ್ತಿ, ನೈಸರ್ಗಿಕ ಸಂಪತ್ತು, ಅನೇಕ ವಿಷಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡಿವೆ. ಸ್ಥಳನಾಮಗಳಾಗಿ ಉಳಿಯದೆ ನಮ್ಮ ಪೂರ್ವಿಕರ, ರಾಜ-ಮಹಾರಾಜರ ಸಾಮಾನ್ಯ ಜನರ ಸಂಸ್ಕೃತಿಯ ಕುರುಹುಗಳಾಗಿ ಉಳಿದಿವೆ.

ಪ್ರತಿಯೊಂದು ಗ್ರಾಮ ನಾಮಗಳಲ್ಲಿ ಆ ಗ್ರಾಮದ ವಿಶಿಷ್ಟತೆ ಅಡಗಿರುತ್ತದೆ. ಅದಕ್ಕೊಂದು ಚಾರಿತ್ರಿಕ ಹಿನ್ನೆಲೆ ಇರುತ್ತದೆ. ಅದೇ ರೀತಿಯಾಗಿ ತಮಟಕಲ್ಲು ಗ್ರಾಮಕ್ಕೂ ಚಾರಿತ್ರಿಕ ಹಿನ್ನೆಲೆ ಇದೆ. ಅದನ್ನು ತಿಳಿಯುವ ಮೊದಲು ಸ್ಥಳನಾಮವೆಂದರೇನು? ಎಂದು ತಿಳಿದುಕೊಳ್ಳೋಣ. ಸ್ಥಳನಾಮವೆಂದರೆ ಊರ ಹೆಸರು ಎಂದರ್ಥ. ಗ್ರೀಕ್ ಭಾಷೆಯಲ್ಲಿ TOPOS ಎಂದರೆ ಸ್ಥಳಗಳು, NOMOS ಎಂದರೆ ಹೆಸರುಗಳು. ಆದ್ದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ TOPONOMY ಎಂದು ಕರೆಯಲಾಗುತ್ತದೆ. ಸ್ಥಳನಾಮವೆಂದರೆ ಊರಿನ ಹೆಸರು ಎಂದು ಅರ್ಥೈಸಿಕೊಳ್ಳುವುದಾದರೆ, ಅಂತ ಊರುಗಳಿಗೆ ಹಳ್ಳಿ, ಗ್ರಾಮ, ಹಟ್ಟಿ, ವಾಡಿ, ಪುರ, ಎಂದು ಕರೆಯುತ್ತಾರೆ. ಗ್ರಾಮ ಎನ್ನುವ ಪದವು ಸಂಸ್ಕೃತ ಪದವಾಗಿದೆ. ಇದು ಸಾಮಾನ್ಯವಾಗಿ ಊರುಗಳ ಹೆಸರಿನಿಂದ ಕೊನೆಗೆ ಬರುವಂಥದ್ದು. ಈ ಗ್ರಾಮ, ಗಾಂವ್ ಪದವು ಹಿಂದಿ ಅಥವಾ

ಮರಾಠಿಯಲ್ಲಿ ಊರು ಎನ್ನುವ ಅರ್ಥವನ್ನು ಕೊಡುತ್ತದೆ. ಗ್ರಾಮದ ಹೆಸರುಗಳನ್ನು ಜನರ ಬಾಯಲ್ಲಿ ಹೆಚ್ಚು ಹೆಚ್ಚು ಬಳಸುವುದರಿಂದ ತುಂಬ ವ್ಯತ್ಯಾಸ ಕಂಡು ಬರುತ್ತದೆ. ಸ್ಥಳನಾಮಗಳು ರೂಪದ ದೃಷ್ಟಿಯಿಂದ ಅಧಿಕ ವ್ಯತ್ಯಾಸ ಪಡೆದುಕೊಂಡಿರುತ್ತವೆ. ಇದರಿಂದ ತನ್ನ ನಿಜ ಅರ್ಥವನ್ನು ಹುಡುಕುವ ಕುತೂಹಲ ಕೆರಳುವುದು ಸಹಜವಾಗಿದೆ. ವ್ಯಕ್ತಿಗೊಂದು ಹೆಸರು ಹೇಗೆ ಅನಿವಾರ್ಯವೋ, ಹಾಗೆ ವ್ಯಕ್ತಿ ತಾನು ನೆಲೆಸಿದ ನೆಲೆಗೊಂದು ಹೆಸರಿಡುವ ಪದ್ಧತಿ ಅಥವಾ ಪ್ರಕ್ರಿಯೆ ಇಂದು ನಿನ್ನೆಯದಲ್ಲ. ಅದು ಮನುಷ್ಯನಷ್ಟೇ ಪ್ರಾಚೀನವಾದುದು. ಸ್ಥಳನಾಮಗಳಿಗೆ ಸಾಮಾನ್ಯ ನಾಮಗಳಿಗೆ ಕೊಡಬೇಕಾದ ಪ್ರಾಧಾನ್ಯಕ್ಕಿಂತ ಹೆಚ್ಚು ಪ್ರಾಧಾನ್ಯ ಕೊಡಬೇಕಾಗಿದೆ. ಏಕೆಂದರೆ ಯಾವುದೇ ಒಂದು ಊರಿಗೆ ಒಂದು ಹೆಸರು ಬರಲು ಸಾಕಷ್ಟು ಕಾರಣಗಳಿರುತ್ತವೆ. ಆ ಊರಿನ ಭೌಗೋಳಿಕ ಲಕ್ಷಣಗಳಿಂದಲೋ ಅಥವಾ ಆ ಊರಿನ ಪ್ರಸಿದ್ಧ ವ್ಯಕ್ತಿಯಿಂದಲೋ, ಆ ಊರಿನಲ್ಲಿರುವ ದೇವರುಗಳಿಂದಲೋ, ಅಥವಾ ಚಾರಿತ್ರಿಕ ಹಿನ್ನಲೆಯಿಂದಲೋ ಹಲವಾರು ಕಾರಣಗಳಿಂದಾಗಿ ಗ್ರಾಮಗಳಿಗೆ ಹೀಗೆ ಸ್ಥಳನಾಮದಿಂದ ಕರೆಯಲಾಗುತ್ತದೆ. ಸ್ಥಳನಾಮಗಳು ಕೇವಲ ಸ್ಥಳನಾಮಗಳಾಗಿ ಉಳಿಯದೆ ಮಾನವ ಸಂಸ್ಕೃತಿಯ ಕುರುಹುಗಳಾಗಿ ಉಳಿದಿವೆ. ಸ್ಥಳನಾಮಗಳು ಹಿಂದಿನಿಂದ ಹುಟ್ಟಿವೆ, ಈಗಲೂ ಹುಟ್ಟುತ್ತಲೇ ಬೆಳೆಯುತ್ತವೆ, ಬದಲಾಗುತ್ತವೆ. ಹುಟ್ಟಿದ ಸಂದರ್ಭವನ್ನು ಅದರ ಅರ್ಥವನ್ನು ಗ್ರಹಿಸುವುದೇ ಸ್ಥಳನಾಮ ಅಧ್ಯಯನದ ಪ್ರಮುಖವಾದ ಉದ್ದೇಶವಾಗಿದೆ. ಸ್ಥಳನಾಮಗಳ ಅಧ್ಯಯನದಿಂದ ಒಂದು ಜನಾಂಗದ ಅಭಿರುಚಿ, ಅನುಭವ, ಸೃಜನಶೀಲ ಶಕ್ತಿಯನ್ನು ಅರಿಯಬಹುದು. ಸ್ಥಳನಾಮಗಳಿಗೆ ಅವುಗಳದೇ ಆದ ಅರ್ಥವಿರುತ್ತದೆ. ಅರ್ಥರಹಿತವಾದ ಸ್ಥಳನಾಮಗಳು ಇರುವುದಿಲ್ಲ. ಪ್ರತಿಯೊಂದು ಗ್ರಾಮನಾಮಕ್ಕೂ ಐತಿಹಾಸಿಕ ಪರಂಪರೆಯಿರುತ್ತದೆ. ಅದಕ್ಕೆ ಪೂರಕವಾಗಿ ಸಿಗುವ ಶಾಸನ, ಸಾಹಿತ್ಯ ಕೃತಿಗಳು, ಲೇಖನಗಳಿಂದ ಆ ಊರಿನ ಪ್ರಾಚೀನತೆಯನ್ನು ತಿಳಿಯಬಹುದಾಗಿದೆ. ತಮಟಕಲ್ಲು ಸ್ಥಳನಾಮ ಕುರಿತು ಈ ಊರಿಗೆ ಹೆಸರು ಹೇಗೆ ಬಂದಿತು ಎಂದು ಅಧ್ಯಯನ ಮಾಡಿದರೆ, ಕರ್ನಾಟಕದ ಮಧ್ಯ ಭಾಗದಲ್ಲಿರುವ ಪಾಳೇಗಾರರು ಆಳ್ವಿಕೆ ನಡೆಸಿದ ಚಿತ್ರದುರ್ಗ ಜಿಲ್ಲೆಯಿಂದ ೫ಕಿ. ಮೀ. ದೂರದ ವಾಯುವ್ಯದಲ್ಲಿ ಸಣ್ಣ ಬೆಟ್ಟಗಳ ಮಧ್ಯೆ ಹುದುಗಿರುವ ಚಿಕ್ಕ ಹಳ್ಳಿ ತಮಟಕಲ್ಲು. ೧೬೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ತಮಟಕಲ್ಲು ಚಿತ್ರದುರ್ಗದ ಶಾನಭೋಗರ ಕಾಲದ ಕಾಮರಸ ತಿಮ್ಮಪ್ಪಯ್ಯನ ಸ್ಥಳ. ಚಿತ್ರದುರ್ಗದ ಪಟ್ಟಡಿ ಗ್ರಾಮ ತಮಟಕಲ್ಲು ಎಂದು ಪಾಳೇಗಾರರ ದಾಖಲೆಗಳಲ್ಲಿ ತಮಟಕಲ್ಲು ಎನ್ನುವ ಉಲ್ಲೇಖವಿದೆ ಎಂದು ತಿಳಿಸಲಾಗಿದೆ.ಡಾ.ರಾಜಶೇಖರಪ್ಪ ಇವರೊಂದಿಗೆ ಚರ್ಚಿಸಿದಾಗ ಈ ವಿಷಯ ತಿಳಿಸಿದರು. ಇಡೀ ಪ್ರಾಂತ್ಯ ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿದ್ದು, ತಮಟಕಲ್ಲು ಸಹ ಆ ಪ್ರಾಂತ್ಯಕ್ಕೆ ಒಳಪಟ್ಟಿತ್ತು ಎಂದು ತಿಳಿಸಿದ್ದಾರೆ.

**೨.೧. ತಮಟಕಲ್ಲು ಪದ ನಿಷ್ಪತ್ತಿ :**

ತಮಟಕಲ್ಲು ಎಂಬುದು ತಮಂಡಿಗಲ್ಲು, ತಮಟೆಗಲ್ಲು, ತಮ್ಮಟಗಲ್ಲು ಎಂದಾಗಿದೆ. ತಮಟಕಲ್ಲು ಗ್ರಾಮಕ್ಕೆ ಹೆಸರು ಬರಲು ಕಾರಣವೇನೆಂದು ತಿಳಿದುಕೊಳ್ಳುವುದಾದರೆ ಹಿಂದೆ ಶತ್ರುಗಳು ಬಂದರೆ

ಊರ ಬೆಟ್ಟದ ಕಾವಲಿನವರು ತಮಟೆ ಬಾರಿಸುತ್ತಿದ್ದರಂತೆ. ಆ ಧ್ವನಿ ಚಿತ್ರದುರ್ಗದ ಬಸವನ ಬುರುಜಿಗೆ ಕೇಳಿಸುತ್ತಿತ್ತಂತೆ. ಆಗ ದುರ್ಗದವರು ಶತ್ರುಗಳು ಬಂದರೆಂದು ಎಚ್ಚೆತ್ತುಕೊಳ್ಳುತ್ತಿದ್ದರಂತೆ. ಆದ್ದರಿಂದ ತಮಟೆಗಲ್ಲು, ತಮಂಡಿಗಲ್ಲು, ತಮಟಗಲ್ಲು ಎಂದು ಹೆಸರಾಯಿತಂತೆ. (ಟಿ.ಗಿರಿಜಾ, ೧೯೯೧, ಪುಟ ೧೦೦). ತಮಟಕಲ್ಲಿಗೆ ಹಿಂದೆ ಬೇರೊಂದು ಹೆಸರಿತ್ತೆಂದು ತಮಟಕಲ್ಲಿನಲ್ಲಿಯೇ ದೊರೆತಿರುವ ಶಿಲಾಶಾಸನ ಒಂದರಿಂದ ತಿಳಿದು ಬರುತ್ತದೆ. ಈ ಶಾಸನ ಕ್ರಿ.ಶ. ೫೦೦ರಲ್ಲಿ ಬರೆದ ಶಾಸನವೆಂದು ಇತಿಹಾಸಕಾರರ ಅಭಿಪ್ರಾಯ. ಶಾಸನದಲ್ಲಿ ಮಾಸಿಕಾಪುರದ ಅಧಿಪತಿಯಾದ ಧನಾಗಮ, ಇವನ ಮಗ ವನಾಗಮ, ಇವನ ಮಗ ಗುಣಮಧುರನೆಂಬ ಬ್ರಾಹ್ಮಣನ ಗುಣಗಳನ್ನು ಹೊಗಳಲಾಗಿದೆ. ಮತ್ತೊಂದು ಶಾಸನದಲ್ಲಿ ಗುಣಮಧುರ ಯುದ್ಧದಲ್ಲಿ ಸತ್ತ ನಂತರ ಅವನನ್ನು ಪ್ರಶಂಶಿಸಿ ಬರೆಯಲಾಗಿದೆ. ಈ ಪ್ರದೇಶ ಮಾಸಿಕಾಪುರವಾಗಿರಬಹುದೆಂದು ಈಗಿನ ತಮಟಕಲ್ಲು, ಹಿಂದೆ ಮಾಸಿಕಾಪುರ ಎಂಬ ಹೆಸರಿತ್ತೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ತಮಟಕಲ್ಲಿನ ವಿಶೇಷವೆಂದರೆ ಇಲ್ಲಿ ಅನೇಕ ಶಿಲಾಶಾಸನಗಳು ದೊರೆತಿವೆ. ಬೆಟ್ಟದ ಪ್ರಸಿದ್ಧ ರಂಗನಾಥಸ್ವಾಮಿ ದೇವಾಲಯದ ಪಕ್ಕದ ಎತ್ತರದ ಬಂಡೆಯ ಕೆಳಗೆ ೧೫ನೇ ಶತಮಾನದ ಶಾಸನವಿದೆ. ಒಂದು ಅಪಾರ ಕಲ್ಲಿನಲ್ಲಿರುವ ಅಕ್ಷರಗಳು ಕನ್ನಡದಲ್ಲಿ ಪದ್ಯ ರೂಪದಲ್ಲಿ ಕೊರೆದ ಪ್ರಥಮ ಶಾಸನವಾಗಿರಬೇಕೆಂದು ಅಭಿಪ್ರಾಯವಿದೆ. (ಟಿ.ಗಿರಿಜಾ,೧೯೯೧,ಪುಟ ೧೦೦). ಈ ಶಾಸನವು ಕನ್ನಡದ ವೃತ್ತ, ಛಂದಸ್ಸು, ಕನಕಾರ್ಜುನಿ ವೃತ್ತ, ಗುಣಮಧುರ ವ್ಯಕ್ತಿಯನ್ನು ವರ್ಣಿಸುತ್ತದೆ. ಜೊತೆಗೆ ಕನ್ನಡ ಭಾಷೆಯ ವೈಶಿಷ್ಟ್ಯತೆಯನ್ನು ಕನ್ನಡ ಬೆಳೆಯುವ ಬಗ್ಗೆ ತಿಳಿಸುತ್ತದೆ ಎಂದು ಡಾ.ಕಲವೀರ ಮನ್ವಾಚಾರ್ ಇವರೊಂದಿಗೆ ಚರ್ಚಿಸಿದಾಗ ತಿಳಿಸಿದರು. ತಮಟಕಲ್ಲಿನಲ್ಲಿ ದೊರೆತಿರುವ ಶಾಸನ ಈ ರೀತಿಯಾಗಿದೆ.

ಬಿಣಮಣಿ ಅನ್ತುಭೋಗಿ ಬಿಣದುಳ್ಮಣಿಲ್ಲಮನದೋನ್
ರಣಮುಖದುಳ್ಳ ಕೋಲಂ ನೆರಿಯರ್ಕ್ಕು ಮನಿಅನ್ದ್ಯದುಣನ್
ಪ್ರಣಯಿಜನಕ್ಕೆ ಕಾಮನರಸಿ ತೋತ್ಪಲವರ್ಣ್ಣನವನ್
ಗುಣಮಧುರಾಂಕ್ಕ ದಿವ್ಯ ಪುರುಷನ್ಪುರುಷ ಪ್ರವರನ್.
(ರಾಜಪ್ಪ ದಳವಾಯಿ,೨೦೧೦,ಪುಟ-೭).

ಗುಣಮಧುರ ವ್ಯಕ್ತಿಯನ್ನು ವರ್ಣಿಸುತ್ತದೆ. ವ್ಯಕ್ತಿತ್ವವನ್ನು ತಿಳಿಸಲಾಗಿದೆ. ಗುಣಮಧುರ ಎಂಬ ವ್ಯಕ್ತಿಯು ಯಾಚಕರಿಗೆ ಬೇಡಿದ್ದನ್ನೆಲ್ಲ ಕೊಡುತ್ತಾನೆ. ಯಾವ ರೀತಿಯಾಗಿ ನೀಡುತ್ತಾನೆಂದರೆ ಹಾವಿನ ಮಣಿ ಕೊಟ್ಟಂತೆ ದ್ವಂದ್ವ ಮನಸ್ಸಿನಿಂದಾಗಲೀ ಅಥವಾ ದ್ವೇಷ, ಅಸೂಯೆ, ಇಲ್ಲದಂತೆ ಬೇಡಿದವರಿಗೆ ನೀಡುತ್ತಾನೆ. ದಿವ್ಯ ಪುರುಷನು, ಪುರುಷ ಶ್ರೇಷ್ಠ. ಯುದ್ಧದಲ್ಲಿ ಇವನನ್ನು ಎದುರಿಸುವ ಶಕ್ತಿ ಯಾರಿಗೂ ಇಲ್ಲ. ಬೆರಳು ಮಾಡಿ ತೋರಿಸುವಂತಹ ಕೆಟ್ಟ ಗುಣಗಳು ಅವನಲ್ಲಿ

ಇರಲಿಲ್ಲ. ಯಾವುದೇ ರೀತಿಯ ನಿಂದಿಸುವ ಕೆಟ್ಟ ಗುಣ ಅಪಖ್ಯಾತಿ ಹೊಂದದೇ ಇರುವಂತಹ ಗುಣ ಹೊಂದಿದ್ದಾನೆ. ಪ್ರೀತಿಸುವ, ಮೋಹಿಸುವ ಹುಡುಗಿಯರಿಗೂ ದ್ವೇಷಿಸುವ ಹುಡುಗಿಯರಿಗೂ ಅವನು ಸುಂದರವಾದ ಮನ್ಮಥನ ರೀತಿ ಇದ್ದಾನೆ. ಅಥವಾ ಕಾಮನೆ ಕೃಷ್ಣವರ್ಣದ ಬಣ್ಣ ಹೊಂದಿದವನು.

ಒಟ್ಟಾರೆ ಗುಣಮಧುರನ ಬಾಹ್ಯ ಮತ್ತು ಆಂತರಿಕ ಗುಣಗಳನ್ನು ತಿಳಿಸಲಾಗಿದೆ. ತಮಟಕಲ್ಲು ಈ ಹಿಂದೆ ದರೋಡೆಕಾರರ ವಾಸಸ್ಥಳವಾಗಿದ್ದು, ಬೆಟ್ಟದ ಕಣಿವೆಗಳಲ್ಲಿ ತಂಗಿದ್ದು ಈ ಮಾರ್ಗವಾಗಿ ಸಂಚರಿಸುವವರನ್ನು ದರೋಡೆ ಮಾಡಿ ಅವರ ಶವಗಳನ್ನು ಬೆಟ್ಟದಲ್ಲಿ ಹೂಳುತ್ತಿದ್ದರಂತೆ. ಅದಕ್ಕೆ ಈ ಕಣಿವೆಗೆ 'ಬೂದಿ ಕಣಿವೆ' ಎಂದು ಕರೆಯುತ್ತಾರೆ. ಬೆಟ್ಟದ ತುದಿಯಲ್ಲಿ ಕೊಡೆಯ ಆಕಾರದ ಕಲ್ಲಿನ ಕೆಳಗೆ ಉತ್ತಾರಾಭಿಮುಖವಾಗಿ ಚಿಕ್ಕ ಬಸವಣ್ಣನ ವಿಗ್ರಹವಿದೆ. ಬೆಟ್ಟದ ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ಊರು ಹಬ್ಬಿದೆ. ಇನ್ನೊಂದು ಶಾಸನದಿಂದ ನರಸಿಂಹ ದೇವಸ್ಥಾನಕ್ಕೆ ಮಳೆಯ ನಾಯಕನ ಮಗ ಬೂಸಿನಾಯಕನು ಹಾದಿ ಮಾಡಿಸಿದ ಎಂದು ತಿಳಿದು ಬರುತ್ತದೆ. ಆದರೆ ನರಸಿಂಹಸ್ವಾಮಿ ದೇವಸ್ಥಾನ ಇಲ್ಲವಾಗಿದ್ದು ಈಗಿನ ರಂಗನಾಥಸ್ವಾಮಿ ದೇವಾಲಯವೇ ನರಸಿಂಹಸ್ವಾಮಿ ದೇವಾಲಯ ಆಗಿರಬೇಕೆಂದು ಅಭಿಪ್ರಾಯವಿದೆ.

ಹೀಗೆ ತಮಂಡಿಗಲ್ಲು ಗ್ರಾಮವು ತಮಟಕಲ್ಲು ಗ್ರಾಮ ಆಗಿದೆ. ಗ್ರಾಮ ಅಧ್ಯನವೆಂಬುದು ಒಂದು ಗ್ರಾಮದ ಸಾಂಸ್ಕೃತಿಕ ಅಧ್ಯಯನವಾಗಿರುತ್ತದೆ. ಗ್ರಾಮೀಣ ಸಮುದಾಯದ ಅಭಿರುಚಿ, ಉದ್ಯೋಗ, ವ್ಯವಹಾರ, ಆಹಾರ, ಉಡುಗೆ-ತೊಡುಗೆ, ಮನರಂಜನೆ ಒಟ್ಟಾರೆ ಗ್ರಾಮೀಣರ ಬದುಕೆಲ್ಲ ಇದರ ತೆಕ್ಕೆಗೆ ಒಳಗಾಗಿರುತ್ತದೆ. ಊರ ಪೂರ್ವಕ್ಕೆ ಸುಮಾರು ೨ ಪರ್ಲಾಂಗ ತಮಟಕಲ್ಲಿನಿಂದ ಗುಡ್ಡದ ರಂಗವ್ವನ ಹಳ್ಳಿಗೆ ಹೋಗುವ ಬಂಡಿ ಹಾದಿಯ ಬಲಬದಿಯ ತಳವಾರ ಓಬಣ್ಣನ ಜಮೀನಿನಲ್ಲಿ ಶಾಸನ ಕಂಡುಬರುತ್ತದೆ. ಇಲ್ಲಿ ಒಂದು ಬಂಡೆಯ ಮೇಲೆ ಅಕ್ಷರವಿರುವ ಶಾಸನ ಕಂಡುಬಂದರೆ ಇನ್ನೊಂದು ಕಲ್ಲಿನಲ್ಲಿ ಉಬ್ಬು ಚಿತ್ರವಿರುವ ಮೂವರು ಪುರುಷರು ಇರುವ ಶಾಸನ ಕಂಡುಬರುತ್ತದೆ. ತಮಟಕಲ್ಲು ಶಾಸನ ಕಲ್ಲಿನ ಉದ್ದ- ೬ ಅಡಿ, ಅಗಲ ೮ ಅಡಿ ಇರುತ್ತದೆ.

ತಮಟಕಲ್ಲಿನಲ್ಲಿ ಶಾಸನ ಮಾತ್ರವಲ್ಲದೆ, ಸತಿಕಲ್ಲು ಕಂಡು ಬರುತ್ತದೆ. ಊರಿನ ಪಶ್ಚಿಮದಲ್ಲಿ ಸೂರಜ್ಜಿ ಹೊಂಡವಿದೆ. ಇಲ್ಲಿ ಒಂದು ಸತಿಕಲ್ಲು ಇದೆ. ಈ ಕಲ್ಲಿನಲ್ಲಿ ಸೂರಜ್ಜಿ ಹಾಗೂ ಗಂಡು ಮಗುವಿನ ವಿಗ್ರಹವಿದೆ. ಈಕೆ ಸತ್ತ ಸ್ಥಳದಲ್ಲಿ ಅಗೆದರೆ ಈಗಲೂ ಗಂಧದ ಚೂರುಗಳು ಸಿಗುತ್ತವೆ. (ಟಿ.ಗಿರಿಜಾ,೧೯೯೧,ಪುಟ-೧೦೦) ಊರಿನವರನ್ನು ಕೇಳಿದರೆ ಇಲ್ಲಿ ಯಾವುದೇ ಹೊಂಡವಿಲ್ಲ ಎಂದು ಹೇಳುತ್ತಾರೆ. ಚಿತ್ರದುರ್ಗದಿಂದ ರಾಯನಹಳ್ಳಿಗೆ ಹೋಗುವ ರಸ್ತೆಯ ಎಡಬದಿಯಲ್ಲಿ ಸತಿಕಲ್ಲು ಇದೆ. ಇಲ್ಲಿ ಗ್ರಾಮಾಂತರ ಪ್ರೌಢಶಾಲೆಯು ಇದೆ. ಈ ಸತಿಕಲ್ಲಿಗೆ ಜನ ಪೂಜೆಯನ್ನು ಮಾಡುತ್ತಾರೆ.

**೨.೨. ಗ್ರಾಮದ ಭೌಗೋಳಿಕ ಸ್ವರೂಪ :**

ಜಗತ್ತಿನ ಪ್ರತಿಯೊಂದು ರಾಷ್ಟ್ರ ಹಾಗೂ ಜನ ಸಮುದಾಯಗಳ ಮೇಲೆ ಭೌಗೋಳಿಕ ಪರಿಸರವು ಪ್ರಭಾವ ಬೀರಿವೆ. ಮಾನವನ ಜೀವನಕ್ಕೂ ಅವನ ಪರಿಸರಕ್ಕೂ ನಿಕಟ ಸಂಬಂಧವಿದೆ. ಆದ್ದರಿಂದ ಮನುಷ್ಯನ ಇತಿಹಾಸ ತಿಳಿಯಲು ಭೌಗೋಳಿಕ ಪರಿಸರವು ಅತ್ಯವಶ್ಯಕವಾಗಿದೆ.

ಕರ್ನಾಟಕ ರಾಜ್ಯದ ಒಂದು ಜಿಲ್ಲೆ ತಾಲೂಕು, ಅವುಗಳ ಆಡಳಿತ ಕೇಂದ್ರವಾದ ಚಿತ್ರದುರ್ಗ ಜಿಲ್ಲೆ ಉ.ಅ.೧೩೩೪-೧೫೦೨ಮತ್ತು ಪೂರ್ವ ರೇ ೭೫೩೭-೭೭೦೧ ನಡುವೆ ಇದೆ. ಉತ್ತರದಲ್ಲಿ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ಹಾಗೂ ಬಳ್ಳಾರಿ ಜಿಲ್ಲೆ. ಪೂರ್ವದಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ಆಗ್ನೇಯದಲ್ಲಿ ತುಮಕೂರು ಜಿಲ್ಲೆ, ನೈರುತ್ಯದಲ್ಲಿ ಚಿಕ್ಕಮಂಗಳೂರು ಜಿಲ್ಲೆ, ಪಶ್ಚಿಮದಲ್ಲಿ ಶಿವಮೊಗ್ಗ ಜಿಲ್ಲೆ, ವಾಯುವ್ಯದಲ್ಲಿ ಧಾರವಾಡ ಜಿಲ್ಲೆ ಮೇರೆಗಳಾಗಿವೆ. ಜನಸಂಖ್ಯೆ ೧,೫೧೦,೨೨೭. ಚಿತ್ರದುರ್ಗ ಜಿಲ್ಲೆಯ ಸರಾಸರಿ ವಾರ್ಷಿಕ ಮಳೆ ೫೦ ಸೆ.ಮೀ. ಮೇ, ಸೆಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹೆಚ್ಚಿನ ಮಳೆ. ಜಿಲ್ಲೆಯಲ್ಲಿ ಮಳೆ ಕಡಿಮೆ. ಬೇಸಿಗೆಯ ತಾಪ ಹೆಚ್ಚು, ಚಳಿಗಾಲ ಹಿತಕರ. ಚಳಿಗಾಲದ ಸರಾಸರಿ ಉಷ್ಣತೆ ೨೭ಡಿ.ಸೆ. ಬೇಸಿಗೆಯಲ್ಲಿ ೩೬.೨ಸೆಂ.ಳಸೆಂ. ಚಿತ್ರದುರ್ಗ ಜಿಲ್ಲೆಯಲ್ಲಿ ಕುರುಚಲು ಕಾಡು ಹೆಚ್ಚು, ಮಳೆ ಹೆಚ್ಚಾಗಿಲ್ಲ. ಈ ಭಾಗಗಳಲ್ಲಿ ಹುಣಸೆ, ಜಾಲಿ ಜಾತಿಯ ಗಿಡಮರಗಳು ಹೆಚ್ಚಾಗಿ ಬೆಳೆಯುತ್ತವೆ.

ಜಿಲ್ಲೆಯ ಮುಖ್ಯ ಖನಿಜಗಳು, ಕಲ್ನಾರು, ಅನ್ಟಿಮಾನಿ, ಬಾಕ್ಸೈಟ್, ತ್ರಾಮ, ಕಬ್ಬಿಣದ ಅದಿರು, ಸುಣ್ಣದಕಲ್ಲು, ಮ್ಯಾಂಗನೀಸ್, ಸೀಸ, ಬೆಣಚುಕಲ್ಲು, ಸ್ಫಟಿಕಶಿಲೆ, ಹಾಸುಗಲ್ಲು. ಚಿತ್ರದುರ್ಗ ತಾಲ್ಲೂಕಿನ ವಿಸ್ತೀರ್ಣ ೧.೩೬೬೭ ಚ.ಕಿ.ಮೀ. ಜಿಲ್ಲೆಯಲ್ಲಿ ಕಪ್ಪು ಮಣ್ಣು ಫಲವತ್ತಾಗಿದೆ. ಮುಖ್ಯ ಬೆಳೆಗಳು ಹತ್ತಿ, ನೆಲಗಡಲೆ, ಜೋಳ, ತೊಗರಿ, ಬತ್ತ, ನವಣೆ, ಗೋಧಿ, ಸಾಸಿವೆ, ತಂಬಾಕು, ಬಾಳೆ, ಅಡಿಕೆ, ತೆಂಗು ಬೆಳೆಯುತ್ತವೆ. (ಭೂಗೋಳ ವಿಜ್ಞಾನ ೨೦೦೯, ಪುಟ-೩೭೧).

ತಮಟಕಲ್ಲು ಗ್ರಾಮ ಚಿತ್ರದುರ್ಗ ತಾಲ್ಲೂಕು ಮತ್ತು ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಿದ್ದು, ಭೌಗೋಳಿಕ ಅಂಶಗಳ ಆಧಾರದ ಮೇಲಿಂದ ಕರ್ನಾಟಕವನ್ನು ಪ್ರಾಕೃತಿಕವಾಗಿ ವಿಭಾಗಿಸಿದಾಗ ಪ್ರಸ್ತುತ ತಮಟಕಲ್ಲು ಬಯಲು ಸೀಮೆಯ ಪ್ರದೇಶವಾಗಿದ್ದು ಇಲ್ಲಿ ಯಾವುದೇ ನದಿ ಹರಿಯುವುದಿಲ್ಲ. ಇಲ್ಲಿ ಬಹುತೇಕ ಜನರು ಮಳೆಯನ್ನೇ ಅವಲಂಬಿಸಿ ಬೆಳೆಗಳನ್ನು ಬೆಳೆಯುವವರೆ ಹೆಚ್ಚು. ಬೆರಳೆಣಿಕೆಯಷ್ಟು ಜನ ಮಾತ್ರ ಪಂಪ್‌ಸೆಟ್‌ಗಳನ್ನು ಹೊಂದಿದ್ದಾರೆ. ತಮಟಕಲ್ಲು ಗ್ರಾಮದ ಭೂಮಿಯ ಸ್ವರೂಪವನ್ನು ಗಮನಿಸಿದಾಗ ಕಪ್ಪು ಮಣ್ಣು, ಕೆಂಪು ಮಣ್ಣು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಇಲ್ಲಿ ಭೂಮಿಗಳು ಅಷ್ಟೇನು ಫಲವತ್ತಾಗಿರುವುದಿಲ್ಲ. ಇಲ್ಲಿ ಮೆಕ್ಕೆ ಜೋಳ, ಈರುಳ್ಳಿ, ಹತ್ತಿ, ರಾಗಿ, ಎಳ್ಳು, ಜೋಳ, ಶೇಂಗಾ ಬೆಳೆಯುತ್ತಾರೆ. ಈ ಭಾಗದಲ್ಲಿ ಮಳೆಯ ಪ್ರಮಾಣ ತುಂಬ ಕಡಿಮೆ. ಆದ್ದರಿಂದ ಬೆಳೆಯೂ ಕೂಡಾ ಕಡಿಮೆ. ನೀರಾವರಿ ಸೌಲಭ್ಯವಿದ್ದವರು ಮಾತ್ರ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಬೆಳೆ ಬೆಳೆಯುತ್ತಾರೆ. ಈ ಭಾಗದಲ್ಲಿ ಫಲವತ್ತು ರಹಿತ

ಭೂ ಪ್ರದೇಶವು ಸಹ ಕಂಡು ಬರುತ್ತದೆ. ಈ ಪ್ರಕಾರದ ಮಣ್ಣಿನಲ್ಲಿ ಬಿತ್ತನೆ ಮಾಡಲು ಅಧಿಕ ಮಳೆ ಬೇಕು. ಆದರೆ ಈ ಭಾಗದಲ್ಲಿ ಮಳೆಯ ಪ್ರಮಾಣ ತುಂಬ ಕಡಿಮೆ. ಆದ್ದರಿಂದ ಬೆಳೆಯೂ ಕೂಡಾ ಅಷ್ಟಕ್ಕಷ್ಟೇ. ಯಾವುದೇ ನದಿ, ಕೆರೆಗಳು ಹರಿಯುವುದಿಲ್ಲ. ಈ ಗ್ರಾಮಕ್ಕೆ ಯಾವುದೇ ನೀರಿನ ಮೂಲಗಳಿಲ್ಲದ ಕಾರಣ ಇಲ್ಲಿನ ಜನ ಮಳೆಯನ್ನು ಆಶ್ರಯಿಸಿ ಬೆಳೆ ಬೆಳೆಯುವಂತಾಗಿದೆ. ಕುಡಿಯುವ ನೀರಿಗಾಗಿ ಬೋರ್‌ವೆಲ್ ಕೊರೆಸುತ್ತಾರೆ. ಮಳೆ ಬಂದರೆ ನೀರು ಬರುತ್ತದೆ ಮಳೆ ಕಡಿಮೆಯಾದರೆ ಇಲ್ಲಿನ ಬೋರ್‌ವೆಲ್‌ಗಳಲ್ಲಿಯೂ ನೀರು ಕಡಿಮೆಯಾಗುತ್ತದೆ. ಇಲ್ಲಿನ ದನಕರುಗಳಿಗೆ, ಜನಗಳಿಗೆ ಬಟ್ಟೆ ತೊಳೆಯಲು ಕಟ್ಟೆಗಳಲ್ಲಿ ನಿಂತಿರುವ ನೀರೇ ಇವರಿಗೆ ಜಲಮೂಲ. ತಮಟಕಲ್ಲಿನಲ್ಲಿ ಕೆಲವೊಂದು ಕಟ್ಟೆಗಳಿವೆ. ಏಸು ಕಟ್ಟೆ, ಪಲ್ಲಪ್ಪರ ಕಟ್ಟೆ, ಹನುಮಪ್ಪನ ಕಟ್ಟೆ ಎಂದು.

೧. ಏಸು ಕಟ್ಟೆ:- ಈ ಕಟ್ಟೆಯನ್ನು ಸರಿ ಸುಮಾರು ೧೯೮೮-೯೦ ರಲ್ಲಿ ಕ್ರಿಶ್ಚಿಯನ್ ಪಾದ್ರಿಗಳು ಕಟ್ಟಿಸಿದ್ದಾರೆ. ಕಾರಣ ಈ ಊರಿಗೆ ಆಗಮಿಸಿದಂತಹ ಕ್ರಿಶ್ಚಿಯನ್‌ರು ತಮಟಕಲ್ಲು ಗ್ರಾಮದ ಜನರಿಗೆ ಕ್ರಿಶ್ಚಿಯನ್ನ ಧರ್ಮ ಭೋಧನೆ ಮಾಡುವುದರ ಜೊತೆಗೆ ಅಲ್ಲಿನ ಜನರನ್ನು ತಮ್ಮ ಮತಕ್ಕೆ ಮತಾಂತರಿಸಲು ಪ್ರಯತ್ನಪಟ್ಟಿದ್ದಾರೆ. ಆದರೆ ಅಲ್ಲಿನ ಜನರು ಆಂಜನೇಯನಲ್ಲಿ ದೃಢವಾದ ನಂಬಿಕೆಯನ್ನು ಹೊಂದಿರುವುದರಿಂದ, ಅವರು ಮತಾಂತರ ಹೊಂದಲು ಮುಂದಾಗಲಿಲ್ಲ. ಆದರೆ ಅವರ ಪ್ರಯತ್ನವನ್ನು ಅವರು ನಿಲ್ಲಿಸದೇ ಆ ಊರಿನ ಜನರಿಗೆ ಕ್ರಿಶ್ಚಿಯನ್ನ ಮತಕ್ಕೆ ಸೇರುವುದರಿಂದ, ಸಿಗುವ ಸೌಲಭ್ಯ ಅವಕಾಶಗಳ ಬಗ್ಗೆ ತಿಳಿಸಿದ್ದಾರೆ. ಮತ್ತೆ ತಮಟಕಲ್ಲು ಗ್ರಾಮಕ್ಕೆ ಕಟ್ಟೆಯನ್ನು ಕಟ್ಟಿಸಿಕೊಟ್ಟಿದ್ದಾರೆ. ಆದರೂ ಜನ ಮತಾಂತರ ಹೊಂದಲಿಲ್ಲ. ಆ ಸಂದರ್ಭದಲ್ಲಿ ಕಟ್ಟಿಸಿದ ಕಟ್ಟೆಗೆ ಅಲ್ಲಿನ ಜನ ಏಸು ಕಟ್ಟೆ ಎಂದು ಕರೆಯುತ್ತಾರೆ.

೨. ಪಲ್ಲಮುರ ಕಟ್ಟೆ:- ಇದು ಪಲ್ಲಪ್ಪರ ಮನೆತನಕ್ಕೆ ಸೇರಿದ ಕಟ್ಟೆ. ಈ ಮನೆತನದ ಹಿರಿಯರು ಕಟ್ಟಿಸಿದ್ದರು. ಆದರೆ ಈಗ ಇದು ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟಿದೆ.

೩. ಮಡದರೆ ಹನುಮಪ್ಪನ ಕಟ್ಟೆ:- ಇದು ಸಹ ಸರ್ಕಾರಿ ಸೌಮ್ಯಕ್ಕೆ ಸೇರಿದೆ.

**ಸ್ವಾಭಾವಿಕ ಸಸ್ಯವರ್ಗ :**

ಸ್ವಾಭಾವಿಕ ಸಸ್ಯವರ್ಗದ ದೃಷ್ಟಿಯಿಂದ ನೋಡಿದಾಗ ತಮಟಕಲ್ಲು ಕಲ್ಲಿನ ಗುಡ್ಡಗಾಡು ಪ್ರದೇಶವಾಗಿದ್ದು ಈ ಕಲ್ಲುಗಳನ್ನು ಕೊರೆಯುವುದರ ಮೂಲಕ ಜಲ್ಲಿಕಲ್ಲುಗಳನ್ನು ತಯಾರಿಸುತ್ತಾರೆ. ಗ್ರಾಮದಲ್ಲಿ ಯಾವುದೇ ದಟ್ಟ ಅರಣ್ಯ ಪ್ರದೇಶವಿಲ್ಲ. ಈ ಹಿನ್ನೆಲೆಯಲ್ಲಿ ಸ್ವಾಭಾವಿಕ ಸಸ್ಯವರ್ಗ ವಿರಳವಾಗಿರುವುದು ಕಂಡುಬರುತ್ತದೆ.

ಗ್ರಾಮದ ಅರಣ್ಯ ಪ್ರದೇಶವನ್ನು ಉಷ್ಣವಲಯದ ಶುಷ್ಕ ವಿಭಾಗಕ್ಕೆ ಸೇರಿಸಬಹುದು. ಈ ಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀರಿನ ಆಶ್ರಯವಿಲ್ಲದೇ ಬೆಳೆಯುವ ಮುಳ್ಳುಗಂಟಿ, ಜಾಲಿಗಿಡಗಳು, ಬೇವಿನ ಮರ, ಹುಣಸೆ ಮರಗಳು ಕಂಡುಬರುತ್ತವೆ

**ಹವಾಗುಣ** : ಪ್ರಸ್ತುತ ಅಧ್ಯಯನದ ಕೇಂದ್ರ ಸ್ಥಳ ಎನಿಸಿರುವ ತಮಟಕಲ್ಲು ಗ್ರಾಮವು ಹವಾಗುಣದಲ್ಲಿಯೂ ಭಿನ್ನತೆಯನ್ನು ಹೊಂದಿರುವುದನ್ನು ಗುರುತಿಸಬಹುದಾಗಿದೆ. ಬೇಸಿಗೆಯಲ್ಲಿ ಬಿಸಿಲು, ಒಣಹವೆಯಿಂದ ಕೂಡಿರುತ್ತದೆ. ಚಳಿಗಾಲದಲ್ಲಿ ತೀರಾ ಚಳಿಯೆನಿಸದೆ ಒಂದು ಸಮ ಪ್ರಮಾಣದಲ್ಲಿ ಇರುತ್ತದೆ. ಆದರೆ ಮಳೆಗಾಲದಲ್ಲಿ ಕೆಲವು ಸಾರಿ ಮಳೆ ಬಂದರೆ ಬೆಳೆ ಹಾನಿಯಾಗುವಷ್ಟು ಬರುತ್ತದೆ. ಇಲ್ಲವಾದರೆ ಮಳೆಯೇ ಬರುವುದಿಲ್ಲ.

**ಪ್ರಾಣಿ ಪಕ್ಷಿ ಸಂಕುಲ** : ಸೃಷ್ಟಿಕರ್ತ ಬ್ರಹ್ಮನು ಮನುಷ್ಯರನ್ನು ಸೃಷ್ಟಿಸಿದಂತೆ ಪ್ರಾಣಿಯನ್ನು ಸೃಷ್ಟಿಸಿದ್ದಾನೆ. ನಿಸರ್ಗದ ಕೃಪೆಯಿಂದ ಇವು ಕೂಡ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದವು. ಆದರೆ ಮಾನವನ ದುರಾಸೆ, ಆಧುನಿಕತೆ ಪ್ರಭಾವದಿಂದ ಪ್ರಕೃತಿಯನ್ನು ನಾಶ ಮಾಡುವುದರಿಂದ ಪ್ರಾಣಿ ಪಕ್ಷಿ ಸಂಕುಲಗಳು ಅಳಿವಿನ ಅಂಚಿನಲ್ಲಿವೆ. ಹಿಂದೆ ಹಳ್ಳಿಗಳಲ್ಲಿ ಪ್ರತಿಯೊಬ್ಬರ ಮನೆಯಲ್ಲಿಯೂ ಎತ್ತು, ಹಸು, ಎಮ್ಮೆ, ಕುರಿ, ಕೋಳಿ, ನಾಯಿಗಳನ್ನು ಹೆಚ್ಚಾಗಿ ಸಾಕುತ್ತಿದ್ದರು. ಕೃಷಿ ಚಟುವಟಿಕೆ, ಹೈನುಗಾರಿಕೆ ಮತ್ತು ಸಾಕು ಪ್ರಾಣಿಗಳ ರೂಪದಲ್ಲಿ ಪ್ರಾಣಿ ಪಕ್ಷಿ ಸಂಕುಲವನ್ನು ಬಳಸಿಕೊಳ್ಳಲಾಗುತ್ತಿತ್ತು. ಮತ್ತು ಈಗಲೂ ಬಳಸುತ್ತಾರೆ. ಆದರೆ ತುಂಬ ಕಡಿಮೆ. ಒಂದು ಹಳ್ಳಿ ಎಂದರೆ ಕೇವಲ ನಾಲ್ಕೈದು ಮನೆಗಳಲ್ಲಿ ಮಾತ್ರ ಎತ್ತು, ಎಮ್ಮೆ, ಹಸು ಕಟ್ಟಿಕೊಂಡಿರುತ್ತಾರೆ. ಕಾರಣ ಇವುಗಳನ್ನು ಸಾಕುವುದು ತುಂಬ ಕಷ್ಟ. ಆಧುನಿಕ ಯಂತ್ರೋಪಕರಣಗಳು ಬಂದಿರುವುದರಿಂದ ಎತ್ತುಗಳನ್ನು ಕೃಷಿ ಚಟುವಟಿಕೆಗಳಿಗೆ, ಎಮ್ಮೆ, ಹಸು, ಕುರಿ, ಆಡುಗಳನ್ನು ಹೈನುಗಾರಿಕೆಗೆ ಬಳಸುತ್ತಿರುವುದು ಕಡಿಮೆಯಾಗುತ್ತಿದೆ. ಬೆಕ್ಕು, ನಾಯಿಯನ್ನು ಮಾತ್ರ ಈಗಲೂ ಮನೆಯ ಕಾವಲಿಗೆ, ಕುರಿ ಹಟ್ಟಿ ಕಾವಲಿಗೆ ಉಪಯೋಗಿಸುತ್ತಾರೆ. ಪಾಕೆಟ್‌ನಲ್ಲಿ ಸಿದ್ಧವಿರುವ ಹಾಲು, ಮೊಸರು ದೊರೆಯುವಾಗ ಏಕೆ ಕಷ್ಟಪಡಬೇಕು ಎನ್ನುವ ಮನೋಭಾವ ಗ್ರಾಮೀಣ ಜನರಲ್ಲಿಯೂ ಬೆಳೆದಿದೆ. ವೇದಕಾಲದಿಂದಲೂ ಹಸು ಪೂಜ್ಯನೀಯ ಹಾಗೂ ಸಂಪತ್ತಿನ ಸಂಕೇತವೆನಿಸಿತ್ತು. ಈಗಲೂ ಸಹ ಈ ರೀತಿಯ ಮನೋಭಾವನೆಯನ್ನು ಜನ ಹೊಂದಿರುವುದನ್ನು ಕಾಣಬಹುದು. ಏಕೆಂದರೆ ಹಸುವಿನಲ್ಲಿ ಕಾಮಧೇನುವಿನ ಪ್ರತಿರೂಪವನ್ನು ಕಾಣುವುದರಿಂದ ಮತ್ತೆ ಅದರ ತಲೆಯಿಂದ ಬಾಲದವರೆಗೆ ೩೩ಕೋಟಿ ದೇವಾನು ದೇವತೆಗಳು ಅಡಗಿರುತ್ತಾರೆಂಬ ಭಾವನೆ ಈಗಲೂ ಬೇರೂರಿದೆ. ಆದ್ದರಿಂದ ಗೃಹಪ್ರವೇಶ ಮುಂತಾದ ವಿಶೇಷ ಸಂದರ್ಭಗಳಲ್ಲಿ ಹಸುವಿಗೆ ಪ್ರಥಮ ಆದ್ಯತೆ ನೀಡಲಾಗುತ್ತದೆ. ಪಕ್ಷಿ ಸಂಕುಲವು ಸಹ ಇಲ್ಲಿ ಕಂಡು ಬರುತ್ತದೆ. ಕಾಗೆ, ಗುಬ್ಬಿ, ಗೂಬೆ, ಕೃಷ್ಣ ಪಕ್ಷಿ ಕಂಡುಬರುತ್ತವೆ. ಆದರೆ ಇವುಗಳ ಸಂಖ್ಯೆಯು ತುಂಬ ವಿರಳ.

**ತಮಟಕಲ್ಲಿನ ಭೌಗೋಳಿಕ ವಿಸ್ತೀರ್ಣ :**

ಜಗತ್ತಿನ ಪ್ರತಿಯೊಂದು ರಾಷ್ಟ್ರ ಹಾಗೂ ಜನಸಮುದಾಯಗಳ ಮೇಲೆ ಭೌಗೋಳಿಕ ಪರಿಸರವು ಪ್ರಭಾವ ಬೀರುತ್ತದೆ. ಮಾನವನ ಜೀವನಕ್ಕೂ ಅವನ ಪರಿಸರಕ್ಕೂ ನಿಕಟ ಸಂಬಂಧವಿರುತ್ತದೆ. ಯಾವುದೇ ಒಂದು ಪ್ರದೇಶ ಇಂತಿಷ್ಟು ಭೌಗೋಳಿಕ ವಿಸ್ತೀರ್ಣವನ್ನು ಹೊಂದಿರುವಂತೆ

ತಮಟಕಲ್ಲು ಸಹ ಇದಕ್ಕೆ ಹೊರತಾಗಿಲ್ಲ. ತಮಟಕಲ್ಲಿನ ಭೌಗೋಳಿಕ ವಿಸ್ತೀರ್ಣ  ೧೩೩೮.೨೧ ಗುಂಟೆ ಆಗಿರುತ್ತದೆ.

* ಕರಾಬು ವಿಸ್ತೀರ್ಣ–೨೦೮.೧೧ ಗುಂಟೆ ಕರಾಬು ಎಂದರೆ ಸಾಗುವಳಿಗೆ ಯೋಗ್ಯವಲ್ಲದ ಭೂಮಿ.
* ಜಾತ ವಿಸ್ತೀರ್ಣ–೧೦೦.೦೯ ಗುಂಟೆಜಾತಾ ಎಂದರೆ ಸಾಗುವಳಿಗೆ ಯೋಗ್ಯವಾದ ಭೂಮಿ.
* ಭಾಗಾಯಾತು ವಿಸ್ತೀರ್ಣ–೨೯.೨೧ ಭಾಗಾಯಾತು ಎಂದರೆ ನೀರಾವರಿ ಜಮೀನು.
* ತರಿ ಜಮೀನು ಇಲ್ಲ (ಸರ್ಕಾರಿ ಸ್ವಾಮ್ಯದ ನೀರಿನ ಆಶ್ರಯದಿಂದ ಬೆಳೆಯುವ ಜಮೀನು) ಇವುಗಳಿಗೆ ಕಂದಾಯ ಎಷ್ಟು ಕಟ್ಟುತ್ತಾರೆ ಎಂದು ನೋಡುವುದಾದರೆ
* ಜಾತಗೆ–೧೧೩೦.೦೯ ಗುಂಟೆ ೧೦೫೨.೦೩ ಪೈ ಕಂದಾಯ
* ಖುಷ್ಕಿ–೧೧೦೦.೨೮ ಗುಂಟೆಗೆ ೧೯೩೧.೯೨ ಪೈ ಕಂದಾಯ
* ಭಾಗಾಯಾತು–೨೯.೨೧ ಗುಂಟೆಗೆ ೧೨೦.೧೧ ಪೈ ಕಂದಾಯ

**ಕರಾಬು ವಿವರ :**

ತಮಟಕಲ್ಲು ಗ್ರಾಮ ಠಾಣ (ವಿಸ್ತೀರ್ಣ) ೭ ಎಕರೆ ೩೪ ಗುಂಟೆ. ಬ್ರಿಟಿಷರ ಆಳ್ವಿಕೆಯ ಸಂದರ್ಭದಲ್ಲಿ ಸರ್ವೆ ಮಾಡಿರುವುದು ಮತ್ತೆ ಸರ್ವೆ ಮಾಡಿರುವುದಿಲ್ಲ.

* ಗೋಮಾಳ : ಸರ್ಕಾರದ ವತಿಯಿಂದ ದನಕರುಗಳಿಗೆ ಮೇಯಲು ೧೦ ಎಕರೆ ೨೦ ಗುಂಟೆ ಸ್ಥಳ ನೀಡಲಾಗಿದೆ.
* ಉಲ್‌ಬನ್ನಿ ಕರಾರು (ಕುರುಚಲುಗುಡ್ಡ) ೯೯.೦೫ ಗುಂಟೆ
* ಪುಟ್‌ಕರಾಬು (ಸರ್ಕಾರಿ ರಸ್ತೆ, ಕೆರೆ, ಹಳ್ಳ ಇವುಗಳನ್ನು ಯಾರು ಸಾಗುವಳಿ ಮಾಡಲು ಒತ್ತುವರಿ ಮಾಡಿಕೊಳ್ಳಲು ಅವಕಾಶವಿಲ್ಲ) ೯೦.೩೩ ಗುಂಟೆ

೧೯೬೮ ಅಥವಾ ೧೯೭೧ ರಿಂದ ಕಂದಾಯ ಕಟ್ಟುವುದನ್ನು ಶಾನುಭೋಗರು ಗ್ರಾಮ ಲೆಕ್ಕಾಧಿಕಾರಿಗಳಿಗೆ ಬಿಟ್ಟುಕೊಟ್ಟರು.

**೨.೩. ಸಾರಿಗೆ ಮತ್ತು ಸಂಪರ್ಕ :**

ಭಾರತ ಹಳ್ಳಿಗಳ ದೇಶ ಹಾಗೂ ಕೃಷಿ ಪ್ರಧಾನವಾದ ದೇಶ. ಹಳ್ಳಿಯ ಮತ್ತು ಕೃಷಿಯ ಅಭಿವೃದ್ಧಿಗೆ ಸಾರಿಗೆ ಅವಶ್ಯಕತೆ ತುಂಬ ಮುಖ್ಯವಾಗಿದೆ. ರೈತರು ತಾವು ಬೆಳೆದ ಉತ್ಪನ್ನಗಳನ್ನು ಮಾರುಕಟ್ಟೆಗೆ ಒಯ್ಯಲು, ಸಂಬಂಧಿಗಳ ಊರಿಗೆ ಹೋಗಲು ಹಳ್ಳಿಗಳಿಗೆ ಬೇಕಾದ ಅವಶ್ಯಕ ವಸ್ತುಗಳನ್ನು ಪೂರೈಸಿಕೊಳ್ಳಲು ಸಾರಿಗೆ ವ್ಯವಸ್ಥೆ ಸಹಾಯ ಮಾಡುತ್ತದೆ. ಪ್ರಾಚೀನ ಕಾಲದಲ್ಲಿ ಎಷ್ಟು ದೂರ ಹೋಗಬೇಕೆಂದರು ಕಾಲ್ನಡಿಗೆ ಮೂಲಕವೇ ಹೋಗಬೇಕಿತ್ತು. ಕೇವಲ ಶ್ರೀಮಂತರ

ಬಳಿ ಮಾತ್ರ  ಕುದುರೆ ಗಾಡಿ, ಎತ್ತಿನ ಗಾಡಿಗಳು ಇರುತ್ತಿದ್ದವು. ಸಾರಿಗೆ ಸಂಪರ್ಕ ವ್ಯವಸ್ಥೆ ಇಲ್ಲದ ಕಾರಣ ಜನ ಹಿಂದೆ ತಮಗೆ ಹೋಗಿ ಬರಲು ಅನುಕೂಲವಾಗವಂತಹ ಊರುಗಳಿಂದ, ಹತ್ತಿರದ ಸಂಬಂಧಿಗಳಲ್ಲಿಯೇ ಮದುವೆ, ನೆಂಟಸ್ಥಿಕೆ ಮಾಡುತ್ತಿದ್ದರು. ಮತ್ತು ವ್ಯವಸಾಯ ಕೆಲಸಗಳಿಗೆ ನೆರವಾಗುವಂತಹ ನೆಂಟರ ಬಳಿ ಸಂಬಂಧ ಬೆಳಸಿಕೊಳ್ಳುತ್ತಿದ್ದರು. ಆದರೆ ಇಂದು ವಿಜ್ಞಾನ-ತಂತ್ರಜ್ಞಾನದ ಮುಂದುವರಿಕೆಯಿಂದಾಗಿ ಮನುಷ್ಯ ತನ್ನ ಅನುಕೂಲಕ್ಕೆ ತಕ್ಕಂತೆ ವಿವಿಧ ರೀತಿಯ ವಾಹನಗಳನ್ನು ಕಂಡುಕೊಂಡಿದ್ದಾನೆ. ಚಿತ್ರದುರ್ಗ ಜಿಲ್ಲೆಯಿಂದ ೫ ಕಿ.ಮೀ ಗಳ ದೂರದಲ್ಲಿರುವ ತಮಟಕಲ್ಲು ರಾಷ್ಟೀಯ ಹೆದ್ದಾರಿಗೆ ತಲುಪುತ್ತದೆ. ತಮಟಕಲ್ಲಿಗೆ ಹಿಂದೆ ಹೋಗಲು ಕುದುರೆ ಗಾಡಿಗಳಲ್ಲಿ ಹೋಗುತ್ತಿದ್ದರು. ನಂತರ ಆಟೋ ರಿಕ್ಷಾಗಳಲ್ಲಿ ಹೋಗುತ್ತಿದ್ದರು. ಎರಡು- ಮೂರು ವರ್ಷಗಳಿಂದ ನಗರ ಸಾರಿಗೆ ವ್ಯವಸ್ಥೆ ಸೌಲಭ್ಯವಿದೆ. ತಮಟಕಲ್ಲು ಧಾರ್ಮಿಕ ಕ್ಷೇತ್ರವಾಗಿರುವುದರಿಂದ ಬೆಂಗಳೂರು, ಚಿತ್ರದುರ್ಗದ ಸುತ್ತಮುತ್ತಲ ಊರುಗಳಿಂದ ಸಾಕಷ್ಟು ಜನ ಶ್ರೀ ಆಂಜನೇಯ ಸ್ವಾಮಿ ದೇವಾಲಯಕ್ಕೆ ಪ್ರತಿ ಶನಿವಾರ ಅಧಿಕ ಸಂಖ್ಯೆಯಲ್ಲಿ ಬರುವುದರಿಂದ ನಗರ ಸಾರಿಗೆ ವ್ಯವಸ್ಥೆ ಮಾಡಲಾಗಿದೆ. ಯಾತ್ರಿಕರ ಸಂಖ್ಯೆ ಹೆಚ್ಚಳಗೊಂಡು ಆದಾಯ ಬರುವುದರ ಜೊತೆಗೆ ಕ್ಷೇತ್ರದ ಜನಪ್ರಿಯತೆ ಮತ್ತಷ್ಟು ಹೆಚ್ಚಿರುವುದರಲ್ಲಿ ಯಾವುದೇ ಸಂಶಯವಿಲ್ಲ.

**೨.೪. ಸುತ್ತಮುತ್ತಲ ಗ್ರಾಮದ ಪರಿಚಯ :**

ತಮಟಕಲ್ಲು ಗ್ರಾಮ ಕಸಬಾ ಹೋಬಳಿ ಚಿತ್ರದುರ್ಗ ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಿದ್ದು, ಚಿತ್ರದುರ್ಗ ಜಿಲ್ಲೆಯೂ ಪಾಳೇಗಾರರ ಆಳ್ವಿಕೆಗೆ ಪ್ರಸಿದ್ಧಿ ಪಡೆದಿದ್ದು ಐತಿಹಾಸಿಕವಾಗಿ, ಚಾರಿತ್ರಿಕವಾಗಿ ತನ್ನ ಚಾಪನ್ನು ಮೂಡಿಸಿದ್ದು ಅನೇಕ ಧಾರ್ಮಿಕ ಕ್ಷೇತ್ರಗಳು ಮತ್ತು ಪ್ರವಾಸಿ ತಾಣಗಳನ್ನು ಒಳಗೊಂಡಿದೆ. ಧಾರ್ಮಿಕ ಕೇಂದ್ರವಾಗಿರುವ ತಮಟಕಲ್ಲು ಐತಿಹಾಸಿಕ ಹಾಗೂ ಧಾರ್ಮಿಕ ಕ್ಷೇತ್ರವಾಗಿದೆ.

ತಮಟಕಲ್ಲು ಗ್ರಾಮವು ಬೆಟ್ಟದ ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ಹಬ್ಬಿದ್ದು, ಗ್ರಾಮದ ಪೂರ್ವಕ್ಕೆ ಗುಡ್ಡದ ರಂಗವ್ವನ ಹಳ್ಳಿ, ಪಶ್ಚಿಮಕ್ಕೆ  ಆಯಿತೋಳ್, ಉತ್ತರಕ್ಕೆ ರಾಯನಹಳ್ಳಿ, ದಕ್ಷಿಣಕ್ಕೆ ಮೇದೆಹಳ್ಳಿ, ಕೊಡೆನಹಟ್ಟಿ, ಎಂ.ಕೆ.ಹಟ್ಟಿ ಊರುಗಳಿಂದ ಸುತ್ತುವರೆದಿದೆ. ಊರಲ್ಲಿರುವ ಅತ್ಯಂತ ಪ್ರಸಿದ್ಧವಾದ ದೇವಾಲಯಗಳೆಂದರೆ ಐತಿಹಾಸಿಕ ಪ್ರಸಿದ್ದಿ ಪಡೆದ ಶ್ರೀ ಆಂಜನೇಯ ಸ್ವಾಮಿ ದೇವಸ್ಥಾನವಿದ್ದು ಈ ದೇವಸ್ಥಾನದಲ್ಲಿ ಪ್ರಾಚೀನ ಕಾಲದ ಆಂಜನೇಯಸ್ವಾಮಿ ಮೂರ್ತಿ ೯ ಅಡಿ ಎತ್ತರ ೮ ಅಡಿ ಅಗಲವುಳ್ಳ ಸುಂದರವಾದ ಒಡಮೂಡಿದ ಮೂರ್ತಿ ಇದೆ. ಈ ಆಂಜನೇಯ ಮೂರ್ತಿಯು ಪಾದದಿಂದ ಸುಮಾರು ೪ ಅಡಿ ಓಂದಕ್ಕೆ ತಲೆಯ ಭಾಗ ಬಾಗಿರುತ್ತದೆ. ಈ ಓಂದಕ್ಕೆ ಬಾಗಿದ ಮೂರ್ತಿಯಿಂದ ಹೂವುಗಳನ್ನು ಪ್ರಸಾದವಾಗಿ ಭಕ್ತರು ಕರುಹನ್ನು ಮಾಡಿಕೊಂಡು ಬಲ ಅಥವಾ ಎಡಭಾಗದ ಪುಷ್ಪಗಳನ್ನು ಕೇಳಿದಾಗ ದೇಹದ ಬೇರೆ ಯಾವ ಭಾಗದ ಹೂವು ಕೊಡದೆ ಕೇಳಿದ ಸ್ಥಾನದಲ್ಲಿಯೇ ಪುಷ್ಪಗಳನ್ನು ಕೊಡುವುದು ಈ

ದೇವರ ವೈಶಿಷ್ಟ್ಯವಾಗಿದೆ. ೧೯೫೦ನೇ ಇಸವಿಯಲ್ಲಿ ಮೊದಲು ಸಣ್ಣ ಮಣ್ಣಿನ ದೇವಸ್ಥಾನವಿದ್ದು, ಕ್ರಮೇಣ ೧೯೭೨ ರಲ್ಲಿ ಈ ಶಿಥಿಲಗೊಂಡ ದೇವಸ್ಥಾನವನ್ನು ಸಮಸ್ತ ಭಕ್ತಾದಿಗಳು ಸೇರಿ ಜೀರ್ಣೋದ್ಧಾರಗೊಳಿಸಿ ಸುಮಾರು ೩೦ ಅಡಿಯ ರಾಜಗೋಪುರವನ್ನು ನಿರ್ಮಿಸಿ ಪಂಚ ಕಳಸವನ್ನು ಪ್ರತಿಷ್ಠಾಪನೆ ಮಾಡಿರುತ್ತಾರೆ. ದೇವಸ್ಥಾನದ ಮಹಾದ್ವಾರದ ಬಳಿ ೩೧ ಅಡಿ ಬೃಹತ್ ಗಾತ್ರದ ಶ್ರೀ ಆಂಜನೇಯ ಸ್ವಾಮಿಯ ಪ್ರತಿಮೆಯನ್ನು ಮಹಾದ್ವಾರ ಬಳಿ ನಿರ್ಮಾಣ ಮಾಡುತ್ತಿದ್ದಾರೆ. ಮತ್ತೊಂದು ದೇವಸ್ಥಾನವಾದ ಈಗಿನ ರಂಗನಾಥಸ್ವಾಮಿ ದೇವಾಲಯವೇ ಹಿಂದಿನ ನರಸಿಂಹಸ್ವಾಮಿ ದೇವಾಲಯ ಆಗಿರಬೇಕೆಂದು ಅಭಿಪ್ರಾಯವಿದೆ. ಮತ್ತೊಂದು ಶಾಸನದಿಂದ ನರಸಿಂಹ ದೇವಸ್ಥಾನಕ್ಕೆ ಮಳೆಯ ನಾಯಕನ ಮಗ ಬೂಸಿನಾಯಕನು ಹಾದಿ ಮಾಡಿಸಿದ ಎಂದು ತಿಳಿಸಿದ್ದಾರೆ. ದುರ್ಗಮ್ಮ ದೇವಸ್ಥಾನ ಊರಿನ ಕೆಳವರ್ಗದವರಾದ ಎ.ಕೆ ಕಾಲೋನಿಯ ಮುಖ್ಯ ರಸ್ತೆ ಹತ್ತಿರವಿದೆ. ಮತ್ತೊಂದು ದೇವಸ್ಥಾನವಾದ ಭೂತಪ್ಪ ದೇವಸ್ಥಾನ, ಗೌರಸಂದ್ರದ ಮಾರಮ್ಮ, ರಂಗನಾಥ ಸ್ವಾಮಿ, ಲಕ್ಕವ್ವ ತುಳುಸವ್ವ, ಎಡೆಕಲ್ಲು ಬಸವಣ್ಣ ಇವು ಬೆಟ್ಟದ ತಪ್ಪಲಿನಲ್ಲಿವೆ. ಈ ಎಡೆಕಲ್ಲು ಬಸವಣ್ಣ ಊರಿನ ಪಕ್ಕ ಹೊಂದಿಕೊಂಡಿರುವ ಕಲ್ಲು ಎಡೆಕಲ್ಲು. ಈ ಕಲ್ಲು ಇರುವ ಪೂರ್ವ ದಿಕ್ಕಿನಲ್ಲಿ ಏಳು ಎಡೆ ಸರ್ಪದ ರೀತಿಯಲ್ಲಿದ್ದು ಈ ಸರ್ಪ ಹೆಡೆಯ ಕೆಳಗೆ ಬಸವಣ್ಣನ ವಿಗ್ರಹವಿದೆ. ಈ ಹೆಡೆಯ ನೆರಳು ಬಸವಣ್ಣನ ಮೇಲೆ ಬೀಳುತ್ತದೆಯಂತೆ. ಅಹೋಬಲ ನರಸಿಂಹ ಸ್ವಾಮಿ, ಶೇಜಿ ದೇವರು, ಸೂರ್ಯ ಲಿಂಗೇಶ್ವರ, ರಂಗನಾಥ ಸ್ವಾಮಿ ದೇವಸ್ಥಾನದ ಪಕ್ಕ ಇದೆ. ಈಶ್ವರ ದೇವಸ್ಥಾನ ಪಟ್ರೆ ಮರದ ಹತ್ತಿರ ಇದೆ. ಉಡಸಲಮ್ಮನ ದೇವಸ್ಥಾನ ಈಶ್ವರ ದೇವಸ್ಥಾನದ ಹಿಂಬದಿಯಲ್ಲಿದೆ. ಭೈರಸಿದ್ದೇಶ್ವರ ಕಡೂರು ಹಟ್ಟಿಯಲ್ಲಿದೆ. ಕುಕ್ಕವಾಡೇಶ್ವರ ಭಂಗಿ ಓಬಣ್ಣನ ಹೊಲದಲ್ಲಿದೆ. ಪುಡದೇರ ಹನುಮಪ್ಪ ಪುಡದೇರ ಕಟ್ಟೆಯ ಹತ್ತಿರವಿದೆ. ಈ ರೀತಿಯಾಗಿ ತಮಟಕಲ್ಲು ಸಾಕಷ್ಟು ದೇವಾಲಯಗಳಿಂದ ಕೂಡಿದ್ದು ಇವು ಜನರ ಭಕ್ತಿ ನಂಬಿಕೆಯ ಸಂಕೇತವಾಗಿ ಕಂಡುಬರುತ್ತದೆ.

ಒಂದು ಊರು ಎಂದಾಕ್ಷಣ ಅಲ್ಲಿ ಸಾಕಷ್ಟು ಓಣಿ, ಕೇರಿಗಳು ಕಂಡುಬರುತ್ತದೆ. ಅದೇ ರೀತಿಯಾಗಿ ತಮಟಕಲ್ಲಿನಲ್ಲಿಯೂ ಕೇರಿಗಳಿವೆ. ಒಂದೊಂದು ಸಮುದಾಯದವರು ಒಂದೊಂದು ಕಡೆ ವಾಸಿಸುವುದರಿಂದ, ಸಮುದಾಯಕ್ಕನುಗುಣವಾಗಿ ಓಣಿಯ ಹೆಸರುಗಳು ಹುಟ್ಟಿಕೊಂಡಿವೆ. ಅವುಗಳೆಂದರೆ, ಹರಿಜನ ಕೇರಿ, ನಾಯಕರ ಕೇರಿ, ಲಿಂಗಾಯಿತ ಕೇರಿ, ಕುಂಬಾರ ಕೇರಿ, ಬಣಜಿಗರ ಕೇರಿ ಎಂದು ಇತರ ಜನಾಂಗದ ಮನೆಗಳ ಸಂಖ್ಯೆ ಕಡಿಮೆ ಇರುವುದರಿಂದ ಭೋವಿಗಳ ಮನೆ, ಕ್ಷೌರಿಕರ ಮನೆ, ರೆಡ್ಡಿಯವರ ಮನೆ, ಅಕ್ಕಸಾಲಿಗರ ಮನೆ ಈ ರೀತಿಯಾಗಿ ಕರೆಯತ್ತಾರೆ.

**ತಮಟಕಲ್ಲು ಗ್ರಾಮದ ಜನಸಂಖ್ಯೆ ವಿವರ :**

| ಕ್ರ.ಸಂ | ಒಟ್ಟು ಜನಸಂಖ್ಯೆ | | ಒಟ್ಟು |
|---|---|---|---|
| | ಪುರುಷರು | ಮಹಿಳೆಯರು | |
| ೧ | ೮೩೪ | ೮೪೦ | ೧೬೭೪ |
| ೨ | ಸಾಕ್ಷರರು | ಸಾಕ್ಷರರು | |
| | ಗಂಡು | ಹೆಣ್ಣು | |
| | ೭೮.೫೭ | ೬೪.೦೮ | ೧೪೨.೬೫ |

**ಜೀವನೋಪಾಯ ಮಾರ್ಗಗಳು :**

ಪ್ರತಿಯೊಬ್ಬ ವ್ಯಕ್ತಿಯು ತನ್ನನ್ನು ಮತ್ತು ತನ್ನ ಮನೆಯವರನ್ನು ಜೀವಂತ ಕಾಪಾಡಿಕೊಳ್ಳುವುದಕ್ಕಾಗಿ ಒಂದು ವೃತ್ತಿಯನ್ನು ಅವಲಂಬಿಸಿರುವುದು ಅನಿವಾರ್ಯ. ಅದೇ ರೀತಿಯಾಗಿ ತಮಟಕಲ್ಲಿನ ಜನರು ತಮ್ಮ ಜೀವನೋಪಾಯಕ್ಕಾಗಿ ಹಲವು ರೀತಿಯ ಕೆಲಸಗಳನ್ನು ಮಾಡುತ್ತಾರೆ. ಇಲ್ಲಿನ ಕೆಲವು ಜನರು ಒಕ್ಕಲುತನದ ಕೆಲಸ ಮಾಡಿದರೆ ಇನ್ನು ಕೆಲವರು ವ್ಯವಸಾಯದ ಜೊತೆಯಲ್ಲಿಯೇ ಮನೆಯಲ್ಲಿ ನಾಲ್ಕೈದು ಎಮ್ಮೆಗಳನ್ನು ಸಾಕಿಕೊಂಡು ಸಮೀಪದ ಚಿತ್ರದುರ್ಗಕ್ಕೆ ಹಾಲು, ಮೊಸರನ್ನು ಮಾರಿ ಜೀವನ ನಡೆಸುತ್ತಾರೆ. ಉದಾಹರಣೆಗೆ **ಜಯಮ್ಮ:–** ಹಳ್ಳಿಯಲ್ಲಿ ಮಹಿಳೆಯರು ಮನೆಯಲ್ಲಿರುವುದೆಂದರೆ ಕನಸಿನ ಮಾತು. ಏಕೆಂದರೆ ಮನೆ ಕೆಲಸ ಮುಗಿದ ನಂತರ ಹೊಲಗಳಿಗೂ ಹೋಗಿ ಕೆಲಸ ಮಾಡುವ ಪರಿಸ್ಥಿತಿ ಇರುತ್ತದೆ. ಯಾರು ಮನೆ ಕಡೆ ಆರ್ಥಿಕವಾಗಿ ಸಧೃಢರಾಗಿರುವ ಮಹಿಳೆ ಮಾತ್ರ ಮನೆಯಲ್ಲಿರಲು ಸಾಧ್ಯ. ಇನ್ನು ಮಧ್ಯಮ ವರ್ಗದವರು ಅನಾರೋಗ್ಯದ ಕಾರಣ ಅಥವಾ ವಯಸ್ಸಾದ ಬಳಿಕ ಅಥವಾ ಮಕ್ಕಳು ಸರ್ಕಾರಿ ನೌಕರಿಗೆ ಹೋದ ಸಂದರ್ಭದಲ್ಲಿ ಮನೆಯಲ್ಲಿ ಆರಾಮವಾಗಿ ಇರಬಹುದು. ನಾನು ೨೫ ವರ್ಷಗಳಿಂದ ಹಾಲು, ಮೊಸರು ವ್ಯಾಪಾರ ಮಾಡುತ್ತೇನೆ. ಸ್ವಂತ ಎಮ್ಮೆಗಳನ್ನು ತೆಗೆದುಕೊಂಡು ಅವುಗಳನ್ನು ಮೇಯಿಸಿಕೊಂಡು ಬರುವುದು. ಸಗಣಿ ಹೊಡೆಯುವುದು, ಹಾಲು ಕರೆಯುವುದು ಎಲ್ಲ ಕೆಲಸವನ್ನು ನಾನೇ ಮಾಡುತ್ತಿದ್ದೆ. ಈಗ ಸ್ವಲ್ಪ ಅನಾರೋಗ್ಯದ ಕಾರಣ ನಮ್ಮ ಮನೆಯವರು ನಿಭಾಯಿಸಿಕೊಂಡು ಹೋಗುತ್ತಾರೆ. ನಾನು ಹಾಲು ಮೊಸರು ಮಾರಾಟ ಮಾಡುವುದರಿಂದ ನನ್ನ ಮನೆಯ ಖರ್ಚು ನಿಭಾಯಿಸಿಕೊಂಡು ಹೋಗಲು, ಮಕ್ಕಳನ್ನು ವಿದ್ಯಾಭ್ಯಾಸ ಮಾಡಿಸಲು ತುಂಬ ಅನುಕೂಲವಾಗಿದೆ. ಇಲ್ಲ ಅಂದರೆ ಇರುವ ಜಮೀನಿನಲ್ಲಿ, ಬರುವ ಮಳೆ ಬೆಳೆಯಿಂದ ಮಕ್ಕಳನ್ನು ಓದಿಸುವುದು, ಮನೆ ಖರ್ಚು ನಿಭಾಯಿಸುವುದು ತುಂಬ ಕಷ್ಟವಾಗುತ್ತಿತ್ತು.

ಹಾಲನ್ನು ಡೈರಿಗೆ ಹಾಕಬಹುದಲ್ಲ ಎಂದು ಪ್ರಶ್ನಿಸಿದ್ದಕ್ಕೆ ಅವರು ನಾವು ೪೦-೫೦ ಸಾವಿರ ಹಣ ಕೊಟ್ಟು ಎಮ್ಮೆ ತೆಗೆದುಕೊಂಡಿರುತ್ತೇವೆ. ಡೈರಿಯಲ್ಲಿ ಎಮ್ಮೆ ಹಾಲಿಗೆ ಕಡಿಮೆ ಬೆಲೆ ಹಾಕಿಕೊಡುತ್ತಾರೆ. ಮತ್ತು ಅಷ್ಟು ದುಡ್ಡು ಕೊಟ್ಟು ತಂದ ಎಮ್ಮೆಯ ಹಾಲನ್ನು ಗಟ್ಟಿಯಾಗಿ ಮಾರುವುದರಿಂದ ನಮಗೆ ನಷ್ಟವಾಗುತ್ತದೆ. ಆದ್ದರಿಂದ ಹಾಲಿನ ಜೊತೆ ಸ್ವಲ್ಪ ನೀರನ್ನು ಬೆರೆಸಿ ಮಾರುತ್ತೆವೆ.

ಲತಾ: ನಾನು ಹದಿನೈದು ವರ್ಷದಿಂದ ಹಾಲು ಮೊಸರು ಮಾರುತ್ತಿರುವುದಾಗಿ ಹೇಳಿದರು. ಹಾಲು ಮೊಸರು ಮಾರುವುದರಿಂದ ನನ್ನ ಮಕ್ಕಳ ವಿದ್ಯಾಭ್ಯಾಸ ಮಾಡಿಸಲು, ಮನೆಯ ಖರ್ಚು ನಿಭಾಯಿಸಲು ಅನುಕೂಲವಾಗುತ್ತದೆ. ನಾನೇ ಹಸುಗಳನ್ನು ಮೇಯಿಸಿಕೊಂಡು ಹಾಲು ಕರೆಯುವುದು. ಪಟ್ಟಣಕ್ಕೆ ಹೋಗಿ ಹಾಲು, ಮೊಸರು ಮಾರಿ ಬಂದು ೧೦-೩೦ ಅಥವಾ ೧೧ ಗಂಟೆಗೆ ಹಸುಗಳನ್ನು ಮೇಯಿಸಲು ಹೊಡೆದುಕೊಂಡು ಹೋಗುತ್ತೇನೆ. ಈ ಹೊಲ ಮನೆಯಲ್ಲಿ ಮಾಡಿ ನಾವು ಯಾವುದೇ ಉದ್ದಾರ ಆಗಿಲ್ಲ. ಇದರ ಜೊತೆಗೆ ಸಂಘದಿಂದ ಸಾಲವನ್ನು ತೆಗೆದುಕೊಂಡು ಹಸುಗಳನ್ನು ತೆಗೆದುಕೊಂಡಿದ್ದೇನೆ. ಮಗನಿಗೆ ಆಟೋ ಕೊಡಿಸಿದ್ದೇನೆ. ಸಂಘಕ್ಕೆ ಸೇರಿರುವುದರಿಂದ ನಮಗೆ ತುಂಬ ಉಪಯೋಗವಾಗಿದೆ. ಆಟೋದಲ್ಲಿ ಮಗ ದುಡಿದದ್ದನ್ನು ಸಂಘದ ಸಾಲ ಕಟ್ಟಲು. ಸಂಘದಿಂದಲೇ ನಾನು ಮತ್ತು ನಮ್ಮ ಮನೆಯವರು ಉದ್ಧಾರವಾಗಿರುವುದು. ಸರ್ಕಾರದಿಂದ ಸಿಗುವ ಸೌಲಭ್ಯಗಳ ಅರಿವು ನಮಗೆ ಇಲ್ಲದೆ ಇರುವುದರಿಂದ ಬೇರೆಯವರು ಸಹ ಹೇಳದೆ ಇರುವುದರಿಂದ ನಮಗೆ ಸರ್ಕಾರದ ಯಾವುದೇ ಸೌಲಭ್ಯ ಸಿಗುತ್ತಿಲ್ಲ.

ಮತ್ತೆ ಕೆಲವರು ಊರಿನಲ್ಲಿ ಚಿಕ್ಕ ಚಿಕ್ಕ ಅಂಗಡಿಗಳನ್ನು ಇಟ್ಟುಕೊಂಡು ಜೀವನ ನಡೆಸುತ್ತಾರೆ. ತಮಟಕಲ್ಲಿನಲ್ಲಿ ಒಟ್ಟು ೧೨ ಅಂಗಡಿಗಳು ಕಂಡುಬರುತ್ತವೆ. ಇಲ್ಲಿನ ಜನರು ವಾರಕ್ಕೊಮ್ಮೆ ಚಿತ್ರದುರ್ಗದ ಸಂತೆಗೆ ಹೋಗಿ ತಮಗೆ ಅವಶ್ಯಕವಾದ ವಸ್ತುಗಳನ್ನು ಖರೀದಿಸಿಕೊಂಡು ಬರುತ್ತಾರೆ. ವಾರದ ಮಧ್ಯದ ದಿನಗಳಲ್ಲಿ ಖಾಲಿಯಾದ, ತಮಗೆ ಅಗತ್ಯವಾದ ವಸ್ತುಗಳನ್ನು ಇಲ್ಲಿಯೇ ಖರೀದಿಸುತ್ತಾರೆ.

ಇಲ್ಲಿ ಬರುವ ಅಂಗಡಿಗಳ ಕೆಲವು ಹೆಸರುಗಳು ಈ ಕೆಳಗಿನಂತಿವೆ.

* ರವಿ ಅಂಗಡಿ
* ವೇದಮೂರ್ತಿ ಅಂಗಡಿ (ಅಂಜನಮೂರ್ತಿ)
* ಗಿರಿಜಮ್ಮನ ಅಂಗಡಿ
* ಮೋಹನ್‌ರಾಜ್ ಅಂಗಡಿ
* ವನಜಮ್ಮನ ಅಂಗಡಿ
* ಬಸಮ್ಮನ ಅಂಗಡಿ

* ಕಲಾವತಿ ಅಂಗಡಿ

* ಗಿರಿಜಮ್ಮನ ಅಂಗಡಿ

* ಸುಮಾನ ಅಂಗಡಿ

* ಬಡ್ಡಿ ನಾಗಣ್ಣನ ಅಂಗಡಿ

* ಲತಾಮ್ಮನ ಅಂಗಡಿ

* ಸಿ.ಹನುಮಂತಪ್ಪನ ಅಂಗಡಿ

ಈ ಅಂಗಡಿಯನ್ನು ಹೊಂದಿರುವವರು ಕೇವಲ ಅಂಗಡಿಯನ್ನು ಮಾತ್ರ ನೋಡಿಕೊಳ್ಳದೆ ಹೊಲದ ಕೆಲಸಗಳಿಗೂ ಹೋಗುತ್ತಾರೆ. ಮತ್ತೆ ಕೆಲವರು ಹೋಟೆಲ್‌ಗಳನ್ನು ಸಹ ನಡೆಸಿಕೊಂಡು ಹೋಗುತ್ತಾರೆ. ಇಲ್ಲಿನ ಕೆಲವು ಹೋಟೆಲ್‌ಗಳೆಂದರೆ,

* ಯೋಗೇಶ ಹೋಟೆಲ್

* ಶಿವಮೂರ್ತಿ ಹೋಟೆಲ್

* ಗಗನ ಹೋಟೆಲ್

* ಬಸವರಾಜ್ ಹೋಟೆಲ್

* ಭಾಗ್ಯಮ್ಮ ಹೋಟೆಲ್ ಇವೆ.

ತಮಟಕಲ್ಲಿನ ನಾಯಕ ಸಮುದಾಯದ ೩-೪ ಮನೆಗಳು ಹಿಂದಿನಿಂದಲೂ ಆಂಜನೇಯ ಉದ್ಭವಮೂರ್ತಿ ಸಿಕ್ಕಾಗಿನಿಂದಲೂ ಅದರ ಪೂಜೆ ಮಾಡಿಕೊಂಡು ಬರುತ್ತಿದ್ದಾರೆ. ಇನ್ನು ಕೆಲವರು ಗಾರೆ ಕೆಲಸಗಳಿಗೆಂದು ಸಮೀಪದ ಜಿಲ್ಲಾ ಕೇಂದ್ರವಾದ ಚಿತ್ರದುರ್ಗಕ್ಕೆ ಹೋಗುತ್ತಾರೆ. ಹೀಗೆ ಹೊಲ ಮನೆಕೆಲಸ, ಹೋಟೆಲ್, ಅಂಗಡಿಗಳನ್ನು ನೆಡೆಸಿಕೊಂಡು,ಹಾಲು ಮೊಸರು ಮಾರುತ್ತಾ, ದೇವರ ಪೂಜೆ ಮಾಡಿಕೊಂಡು, ಗಾರೆ ಕೆಲಸ ಮಾಡಿಕೊಳ್ಳುವ ಮೂಲಕ ತಮ್ಮ ಜೀವನೋಪಾಯ ಮಾರ್ಗಗಳನ್ನು ಕಂಡುಕೊಂಡಿದ್ದಾರೆ.

**೨.೫. ಗ್ರಾಮದ ಸಾಮಾಜಿಕ ಜೀವನ :**

ಮನುಷ್ಯ ಏಕಾಂಗಿ ಆಗಿ ಬದುಕಲು ಸಾಧ್ಯವಿಲ್ಲ. 'ಮಾನವ ಸಂಘಜೀವಿ, ಸಮಾಜಜೀವಿ' ಎಂಬ ಅರಿಸ್ಟಾಟಲ್‌ನ ಮಾತು ತುಂಬ ಮಾರ್ಮಿಕವಾದದ್ದು. ಮಾನವ ಹಾಗೂ ಸಮಾಜ ಒಂದನ್ನು ಬಿಟ್ಟು ಮತ್ತೊಂದಿಲ್ಲ. ಮಾನವ ಸಾಮಾಜಿಕ ಚರಿತ್ರೆ ತುಂಬಾ ದೀರ್ಘವಾದದ್ದು. ಒಂದು ಕಾಲದ ಅನಾಗರಿಕ ಮಾನವ ಸಮುದಾಯವು ಬೆಳೆದು ಇಂದು ಆಧುನೀಕರಣಗೊಂಡಿದೆ. ಮಾನವ ಕಾಡಿನಿಂದ ನಾಡಿಗೆ ಬರುವ ಮುಂಚೆ ಕಾಡಿನಲ್ಲಿ ಗುಂಪು ಗುಂಪಾಗಿಯೇ ಇರುತ್ತಿದ್ದ. ಕ್ರಮೇಣ ಅಲೆಮಾರಿಯಾದಾಗಲೂ ಕೂಡ ಗುಂಪುಗಳು ಚದುರಲಿಲ್ಲ. ಎಲ್ಲಿ ನೀರು, ಮೇವು,

ಹಣ್ಣು, ಹಂಪಲು ಯಥೇಚ್ಚವಾಗಿ ದೊರೆಯುತ್ತಿತ್ತೋ ಅಲ್ಲೆಲ್ಲ ನೆಲೆನಿಂತ ಗುಂಪುಗಳೇ ಇಂದು ಹಳ್ಳಿಗಳಾಗಿ ಜನ್ಮ ತಾಳಿವೆ. ಅಲ್ಲಿ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಹುಟ್ಟಿಕೊಂಡವು.

ಸಾಮಾಜಿಕ, ಭೌತಿಕ ಹಾಗೂ ಭಾವನಾತ್ಮಕ ಅವಶ್ಯಕತೆಗಳಿಗನುಗುಣವಾಗಿಯೇ ಸಮಾಜ ರಚನೆ ಮಾಡಿಕೊಂಡಿರುತ್ತಾರೆ. ಈ ಸಾಮಾಜಿಕ ರಚನೆಗಳು ಹಂತ ಹಂತವಾಗಿಯೇ ಬೆಳವಣಿಗೆ ಹೊಂದುತ್ತಾ ಬಂದು ಬೃಹತ್ ಸಮಾಜವಾಗಿ ಮಾರ್ಪಡುತ್ತದೆ. ಇಂತಹ ಸಮಾಜದಲ್ಲಿಯೇ ಮಾನವ ಜೀವಿಸುತ್ತಾನೆ. ಮನುಷ್ಯನ ಸುತ್ತಲೂ ಹಲವು ಸಮೂಹಗಳು ಸಮಾಜದಲ್ಲಿ ರಚನೆಗೊಂಡಿರುವುದರಿಂದ ಮಾನವ ಸಮಾಜದ ಹೊರತಾಗಿ ಏನು ಮಾಡುವಂತಿಲ್ಲ. ಏಕೆಂದರೆ ಅವನು ಸಮಾಜದ ಒಂದು ಭಾಗವೇ ಆಗಿರುವುದರಿಂದ ಮನುಷ್ಯ ಅವನ ಕುಟುಂಬದ ರಚನೆ, ವ್ಯವಹಾರಿಕ ಸಂಬಂಧ ಇತ್ಯಾದಿ ಚಟುವಟಿಕೆಗಳಲ್ಲಿ ಶುದ್ಧ ಭಾವನೆಗಳಿಂದ ಕೂಡಿದ ಸಂಬಂಧ ಏರ್ಪಡಿಸಿಕೊಂಡಿರುತ್ತಾನೆ.

ಯಾವುದೇ ಒಂದು ಸಮಾಜ, ಸಮುದಾಯ ಸಂಕೀರ್ಣವಾದ ಸಾಮಾಜಿಕ ಸ್ವರೂಪಗಳನ್ನು ಹೊಂದಿರುತ್ತದೆ. ವ್ಯವಸ್ಥೆಯೊಳಗೆ ಸುಭದ್ರತೆ ಕಾಯ್ದುಕೊಳ್ಳುವುದಕ್ಕಾಗಿ ಸಾಮಾಜಿಕ ಜೀವನದಲ್ಲಿ ತನ್ನದೇ ಆದ ವರ್ಗ ಕುಟುಂಬ ಪದ್ಧತಿ, ಮನೆ ನಿರ್ಮಾಣ, ಆಹಾರ ಪದ್ಧತಿ, ಉಡುಗೆ-ತೊಡುಗೆ, ಜಾತಿ ಬಹಿಷ್ಕಾರ, ಅತಿಥಿ ಸತ್ಕಾರ ಮುಂತಾದವುಗಳನ್ನು ಹೊಂದಿದೆ. ಯಾವುದೇ ಒಂದು ಸಮುದಾಯವು ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೇ ಬೆಳೆಯುವುದಿಲ್ಲ. ಅದರ ನಡುವೆ ವಿವಿಧ ಸಮುದಾಯಗಳ ಸಂಬಂಧವು ಮುಖ್ಯವಾಗಿರುವುದಿಲ್ಲ.

ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಇರುವಂತೆ ತಮಟಕಲ್ಲು ಗ್ರಾಮದಲ್ಲಿ ವಿವಿಧ ವರ್ಗಗಳ ಜನ ವಾಸವಾಗಿದ್ದಾರೆ. ಹಿಂದೆ ಜನರು ಮಾಡುವ ಕೆಲಸಗಳಿಂದ ಅವರ ಸಮುದಾಯವನ್ನು ನಿರ್ಧರಿಸಲಾಗುತ್ತಿತ್ತು. ಇದರಿಂದಾಗಿಯೇ ವರ್ಣವ್ಯವಸ್ಥೆ ಜಾರಿಗೆ ಬಂದಿತು. ಈ ವರ್ಣವ್ಯವಸ್ಥೆಯೇ ಕ್ರಮೇಣ ಸಮುದಾಯಗಳಾಗಿ ಮಾರ್ಪಡಾಗಿ ಭಾರತೀಯರಲ್ಲಂತು ಈ ಸಮುದಾಯದ ಪದ್ಧತಿ ಬಲಿಷ್ಠವಾಗಿ ಬೇರೂರಿವೆ. ಈ ಸಮುದಾಯಗಳು ತಮ್ಮ ಸಮುದಾಯದ ವ್ಯಕ್ತಿಗಳನ್ನು ನಿಯಂತ್ರಿಸುವ, ದಂಡಿಸುವ ಹಲವಾರು ಸಾಂಸ್ಕೃತಿಕ ಅಂಶಗಳನ್ನು ನಿರ್ಮಿಸುವ ವಿಶೇಷತೆಯನ್ನು ಸಮುದಾಯಗಳು ಹೊಂದಿರುತ್ತವೆ. ಪ್ರತಿಯೊಂದು ಸಮುದಾಯಗಳು ತುಂಬ ಬಲಿಷ್ಠತೆಯಿಂದ ಕೂಡಿರುತ್ತವೆ.

ತಮಟಕಲ್ಲು ಗ್ರಾಮದಲ್ಲಿ ಬರುವ ಸಮುದಾಯಗಳೆಂದರೆ ನಾಯಕ, ಆದಿಕರ್ನಾಟಕ, ಆದಿ ದ್ರಾವಿಡ, ಲಿಂಗಾಯತ, ಕುಂಬಾರ, ಬಣಜಿಗ, ಕ್ಷೌರಿಕ, ರೆಡ್ಡಿ, ಭೋವಿ, ಅಕ್ಕಸಾಲಿಗ ಸಮುದಾಯದ ಜನರು ವಾಸವಾಗಿದ್ದಾರೆ. ಇವರ ಸಂಕ್ಷಿಪ್ತ ಮಾಹಿತಿಯನ್ನು ಈ ಕೆಳಗೆ ನೀಡಲಾಗಿದೆ.

ಸಮುದಾಯ ಪದ್ಧತಿ ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ. ರಿಸ್ಲೆಯವರ ಪ್ರಕಾರ ಸಮುದಾಯವೆಂದರೆ ಒಬ್ಬ ಐತಿಹಾಸಿಕ ವ್ಯಕ್ತಿ ಅಥವಾ ದೈವಸಂಭೂತನೆನ್ನಲಾದ ಕಾಲ್ಪನಿಕ ಪೂರ್ವಜನಿಂದ ತಮ್ಮ ವಂಶವನ್ನು ಗುರುತಿಸುವ ಕೆಲವು ಕುಟುಂಬಗಳ ಒಂದು ಸಂಕಲನ ಅಥವಾ ಕುಟುಂಬಗಳ ಸಮೂಹ. ವಿವಾಹ ಸಂಬಂಧಗಳು ಜಾಗತಿಕ ಪರಿಮಿತಿಯಿಂದಲೇ ನಡೆಯುತ್ತಿವೆ. ಸಮುದಾಯ ಬಹುಮಟ್ಟಿಗೆ ಪಾರಂಪರಿಕವಾಗಿ ಬಂದ ಒಂದು ವೃತ್ತಿಯನ್ನು ಅನುಸರಿಸುವುದಾದರೂ ಇತ್ತೀಚಿನ ಆಹಾರಾಭ್ಯಾಸಗಳು ಮುಂತಾದ ಧಾರ್ಮಿಕ ವಿಚಾರಗಳು, ರೂಢಿ ಪದ್ಧತಿಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿವೆ. ಪ್ರತಿಯೊಂದು ಸಮುದಾಯಗಳು ತಮ್ಮದೇ ಆದ ಮಾತೃಭಾಷೆಯನ್ನು ಹೊಂದಿರುತ್ತವೆ.

**ನಾಯಕರು** : ಇವರನ್ನು ವಾಲ್ಮೀಕಿ, ಬೇಡರು, ನಾಯಕರು ಎಂದು ಸಹ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಬೇಡರ ಮೂಲ ವೃತ್ತಿ ಬೇಟೆಯಾಗಿದ್ದು, ಇತ್ತೀಚಿನ ದಿನಗಳಲ್ಲಿ ಬೇಟೆ ಕಸುಬನ್ನು ಬಿಟ್ಟು ಕೃಷಿ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಮತ್ತೆ ಕೆಲವರು ಸರ್ಕಾರಿ ನೌಕರಿಗಳಿಗೂ ಸಹ ಸೇರಿದ್ದಾರೆ. ಬಿಡುವಿನ ದಿನಗಳಲ್ಲಿ ಹವ್ಯಾಸಕ್ಕೆ ಮಾತ್ರ ಬೇಟೆಯನ್ನು ಆಡುತ್ತಾರೆ. ನಾಯಕ ಸಮುದಾಯದಲ್ಲಿ ಹಲವಾರು ಬೆಡಗುಗಳು ಬರುತ್ತವೆ. ಅವುಗಳೆಂದರೆ ಎನ್ನುಲರು, ಮಂದಾಲರು, ಕಾಮಗೇತಲರು, ಪೂವಲರು, ಪಟ್‌ಪೂವಲರು, ಮಾರಮ್ಮ ಬುಟುಕಲರು, ಪಮಾಡಲರು. ಒಂದೇ ಬೆಡಗಿನಲ್ಲಿ ಅಥವಾ ಸ್ವಗೋತ್ರದಲ್ಲಿ ವಿವಾಹವಾಗುವ ಸಂಪ್ರದಾಯವಿಲ್ಲ. ಅಕ್ಕ, ಸೋದರ ಮಾವನ ಮಕ್ಕಳನ್ನು ವಿವಾಹ ಆಗಬಹುದು. ಹೆಚ್ಚಾಗಿ ಸೋದರಮಾವ ಅಥವಾ ಸೋದರ ಅತ್ತೆಯ ಮಕ್ಕಳನ್ನು ವಿವಾಹವಾಗುತ್ತಾರೆ. ಬೇಡರು ತಮ್ಮದೆ ಆದ ನ್ಯಾಯಪಂಚಾಯ್ತಿ ಮಾಡಿಕೊಂಡಿದ್ದರು. ಅದಕ್ಕೆ ಕಟ್ಟೆಮನೆ ಎಂದು ಕರೆದುಕೊಂಡಿದ್ದಾರೆ. ಬೇಡರಲ್ಲಿ ಮ್ಯಾಸ ಬೇಡರು ಮತ್ತು ಊರು ಬೇಡರು ಎಂದು ಎರಡು ರೀತಿಯಲ್ಲಿ ಬೇಡರು ಕಂಡುಬರುತ್ತಾರೆ. ಚಿತ್ರದುರ್ಗ ಜಿಲ್ಲೆ ಕಡೆ ಸಾಮಾನ್ಯವಾಗಿ ಮ್ಯಾಸಬೇಡರು ಹೆಚ್ಚಾಗಿ ಕಂಡುಬರುತ್ತಾರೆ.

**ಆದಿ ಕರ್ನಾಟಕ** : ಇವರನ್ನು ಹರಿಜನರು ಎಂದು ಸಹ ಕರೆಯುತ್ತಾರೆ. ಇವರ ಮೂಲ ವೃತ್ತಿ ಚಮ್ಮಾರಿಕೆಯ ಕೆಲಸವಾಗಿತ್ತು. ಇಂದು ಈ ಸಮುದಾಯದಲ್ಲಿ ಚಮ್ಮಾರಿಕೆಯ ಕೆಲಸ ಮಾಡುವವರಿದ್ದಾರೆ. ಆದರೆ ಬೆರಳೆಣಿಕೆಯಷ್ಟು ಜನ ಮಾತ್ರ. ಉಳಿದ ಜನ ಕೃಷಿ ಕೆಲಸ, ಕೂಲಿ,ಹಮಾಲಿ ಕೆಲಸ ಮಾಡುತ್ತಾರೆ. ಈ ಸಮುದಾಯದವರು ಆರ್ಥಿಕವಾಗಿ ಹಿಂದುಳಿದವರಾಗಿದ್ದಾರೆ. ಸರ್ಕಾರ ಇವರ ಏಳಿಗೆಗಾಗಿ ಅನೇಕ ಅನುದಾನ, ಯೋಜನೆಗಳು, ಸವಲತ್ತುಗಳನ್ನು ನೀಡಿದರು. ಇವು ಇವರ ಕೈ ಸೇರದೆ ಎಸ್‌ಸಿಯಲ್ಲಿ ಇರುವ ಇತರ ಸಮುದಾಯದವರಿಗೆ ದೊರಕುತ್ತವೆ. ಕೆಲವೇ ಜನರು ಸರ್ಕಾರಿ ನೌಕರಿಯಲ್ಲಿದ್ದಾರೆ. ಕೆಲವರು ಸ್ವ ಉದ್ಯೋಗ ಮಾಡುತ್ತಿದ್ದಾರೆ. ಇವರು ಇನ್ನೂ ಸಾಮಾಜಿಕವಾಗಿ. ಧಾರ್ಮಿಕವಾಗಿ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಇವರಿಗೆ ಈಗಲೂ ಸಹ ಬೇರೆ ಸಮುದಾಯದವರ ಮನೆಯ ಒಳಗಡೆ ಪ್ರವೇಶವಿಲ್ಲ. ಇವರಲ್ಲಿ ಅನೇಕ

ಬೆಡಗುಗಳು ಕಂಡುಬರುತ್ತವೆ. ಗಾಣಿಗರು, ಛತ್ರಿಯರು, ಐಹೊಳೆಯರು, ಓಗೆಲರು, ಕುರಿಯರು, ಶಡಪೋತಲ್ಲರು, ಮುಚ್ಚಿಲ್ಲರು, ಎಡಗತ್ತಲ್ಲರು, ಹೆಗ್ಗಡೆರು, ಮಿನುಗಲರು, ಬಸವಲರು, ಬೇರೆಲರು, ಅಂಕೆಲರು, ಮಾಗರು, ಮಲ್ಲರು, ಗೊಜ್ಜಲರು. ಈ ಸಮುದಾಯದಲ್ಲಿ ಸಹ ಸ್ವಗೋತ್ರದಲ್ಲಿ ವಿವಾಹ ನಿಷಿದ್ಧ.

**ಆದಿ ದ್ರಾವಿಡ** : ಇವರನ್ನು ಹೊಲೆಯರು ಎಂದು ಸಹ ಕರೆಯುತ್ತಾರೆ. ಇವರು ಎಸ್.ಸಿ. ಸಮುದಾಯದಲ್ಲೇ ಬರುವ ಉಪಸಮುದಾಯದವರು. ಇವರ ಮೂಲ ವೃತ್ತಿ ಮದುವೆಗಳಲ್ಲಿ ಬ್ಯಾಂಡ್ ಬಾರಿಸುವ, ತುತ್ತೂರಿ ಊದುವ ಕೆಲಸವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಇವರು ಸಹ ವಿದ್ಯಾಭ್ಯಾಸ ಕಲಿತು ನೌಕರಿ ಸೇರಿದ್ದಾರೆ. ಮತ್ತೆ ಕೆಲವರು ಕೃಷಿ, ಕೂಲಿ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಸಮುದಾಯದ ಕೆಲವರು ಪಾರಂಪರಿಕ ಕುಲಕಸುಬನ್ನು ಮಾಡುತ್ತಾ ಅದನ್ನು ಉಳಿಸಿಕೊಂಡು ಬಂದಿದ್ದಾರೆ. ಇವರಲ್ಲಿ ಬರುವ ಬೆಡಗುಗಳು ಗಂಜಿಗುಟ್ಟರು, ಹರ್ತೆಯರು, ಬೆಳೆಗೆರರು, ಮಳೆಲರು, ಕೋಟೆಕೆರೆರು, ಗೋಸಿಕೆರೆರು, ಮೀನುಗಲರು ಮುಂತಾದ ಬೆಡಗುಗಳು ಬರುತ್ತವೆ.

**ಕುಂಬಾರ** : ಇವರ ಮೂಲ ವೃತ್ತಿ ಮಡಿಕೆ-ಕುಡಿಕೆಗಳನ್ನು ಮಾಡುವುದಾಗಿದ್ದು ಈಗ ಇವರು ಈ ಕೆಲಸವನ್ನು ಮಾಡದೇ ಪೇಟೆಯಿಂದ ತಂದು ಮಾರುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಸಮುದಾಯದವರು ಸಹ ವಿದ್ಯಾಭ್ಯಾಸ ಕಲಿತು ನೌಕರಿ ಸೇರಿದ್ದಾರೆ. ಮತ್ತೆ ಕೆಲವರು ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಇವರಲ್ಲಿ ಮೋಪುರಿ, ಬೂದಾಳರು, ಗೋಸಿಕೆರೆರು, ಹಳಪರು ಮುಂತಾದ ಬೆಡಗುಗಳು ಬರುತ್ತವೆ.

**ಲಿಂಗಾಯತರು** : ಗ್ರಾಮದಲ್ಲಿ ಲಿಂಗಾಯತರ ಸಂಖ್ಯೆ ಕಡಿಮೆ ಇದೆ. ಇವರಲ್ಲಿಯೇ ಹಲವಾರು ಪಂಗಡಗಳಿವೆ. ಪಂಚಾಚಾರ್ಯ, ಸಾದಲಿಂಗಾಯಿತ, ನೋಣಂಬ ಲಿಂಗಾಯಿತ, ರೆಡ್ಡಿ ಲಿಂಗಾಯಿತರು, ಕುಂಚಿಗ ಒಕ್ಕಲಿಗರು, ಗಾಣಿಗ ಲಿಂಗಾಯಿತರು, ಕುಂಬಾರ ಲಿಂಗಾಯಿತರು, ಕ್ಷೌರಿಕ ಲಿಂಗಾಯಿತರು ಎಂಬ ಪಂಗಡಗಳಿವೆ. ಇವರು ಸಹ ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಇವರು ಸರ್ಕಾರಿ ನೌಕರಿಯಲ್ಲಿಯೂ ಸಾಕಷ್ಟು ಜನ ಇದ್ದು ಸಾಮಾಜಿಕವಾಗಿ, ಧಾರ್ಮಿಕವಾಗಿ ತುಂಬ ಮುಂದುವರೆದಿದ್ದು ತಮಟಕಲ್ಲು ಗ್ರಾಮದಲ್ಲಿ ಈ ಸಮುದಾಯದವರ ೪-೫ ಮನೆಗಳಿವೆ.

**ಬಣಜಿಗ** : ೩ರಿಂದ ೪ ಮನೆಗಳನ್ನು ಹೊಂದಿರುವ ಬಣಜಿಗ ಸಮುದಾಯವನ್ನು ಗ್ರಾಮದಲ್ಲಿ ಶೆಟ್ಟರು ಎಂದು ಗುರುತಿಸಲಾಗುತ್ತದೆ. ಬಣಜಿಗರ ಮೂಲವೃತ್ತಿ ವ್ಯಾಪಾರ. ಇವರಲ್ಲಿ ಕೆಲವರು ವ್ಯಾಪಾರ ಮಾಡುತ್ತಾ, ಮತ್ತೆ ಕೆಲವರು ಸರ್ಕಾರಿ ನೌಕರಿ ಜೊತೆ ವ್ಯವಸಾಯ ಮಾಡುತ್ತಾರೆ. ಸರ್ವಜ್ಞ ಕವಿ ಹೇಳುವ ಹಾಗೆ

ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ
ಕಳ್ಳ ತಳವಾರ ಬಲ್ಲ। ಬಣಜಿಗ
ಎಲ್ಲವನು ಬಲ್ಲ ॥ಸರ್ವಜ್ಞ॥

ಅಂದರೆ ಇವರು ತುಂಬಾ ಜಾಣರು ಎಂಬುದು ವ್ಯಕ್ತವಾಗಿದೆ. ಇವರು ಪ್ರಾಚೀನ ಕಾಲದಿಂದಲೂ ವರ್ತಕರ ಸಂಘವನ್ನು ಕಟ್ಟಿಕೊಂಡು ವ್ಯಾಪಾರ ಮಾಡುತ್ತಿದ್ದರು. ಬಣಜಿಗ ಎಂಬ ಪದವು ವಣಜಿಗ ಎಂಬ ಪದದಿಂದ ಬಂದಿದೆ.

**ರೆಡ್ಡಿ ಸಮುದಾಯ** : ಒಕ್ಕಲುತನ ಮಾಡುವ ಒಂದು ವರ್ಗ. ಇವರನ್ನು ಒಕ್ಕಲಿಗರೆಂದು ಕರೆಯುವರು. ಏಕೆಂದರೆ ಇವರ ಸಾಂಪ್ರದಾಯಿಕ ಉದ್ಯೋಗ ಒಕ್ಕಲುತನ. ಆದರೂ ಇತರ ಉದ್ಯೋಗಗಳಾದ ವ್ಯಾಪಾರ, ಸರ್ಕಾರಿ ನೌಕರಿಗಳಲ್ಲೂ ತೊಡಗಿರುತ್ತಾರೆ. ಇವರು ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಇವರಲ್ಲಿ ಕಮ್ಮರೆಡ್ಡಿ ಮತ್ತು ಎಲೇಟ್ ರೆಡ್ಡಿ ,ನಾಯ್ಡು ಪಾಕನತ್‌ರೆಡ್ಡಿ, ಭೂಮರೆಡ್ಡಿ, ಟೆಡಿಕೇಟ್‌ರೆಡ್ಡಿ, ರೆಡ್ಡಿ ಒಕ್ಕಲಿಗ ಎಂದು ಬೆಡಗುಗಳಿವೆ. ಇವರ ಮನೆದೇವರು ಸಾಮಾನ್ಯವಾಗಿ ತಿರುಪತಿ ತಿಮ್ಮಪ್ಪ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣರು ನೆರವೇರಿಸುತ್ತಾರೆ. ಇವರು ಶವ ಸಂಸ್ಕಾರವನ್ನು ಸುಡುವ ಮೂಲಕ ನೆರವೇರಿಸುತ್ತಾರೆ.

**ಭೋವಿ** : ಒಡ್ಡರು ಎಂತಲೂ ಕರೆಸಿಕೊಳ್ಳುವ ಈ ಸಮುದಾಯದಲ್ಲಿ ಕಲ್ಲು ಒಡ್ಡರು, ಮಣ್ಣು ಒಡ್ಡರು ಎಂಬ ಪಂಗಡಗಳಿವೆ. ಇವರ ವೃತ್ತಿ ಕಲ್ಲು, ಬಂಡೆಯನ್ನು ಒಡೆಯುವುದು ಅಥವಾ ಅರೆಯುವುದು. ಇದರ ಜೊತೆಯಲ್ಲಿ ರಸ್ತೆ ನಿರ್ಮಾಣ ಮಾಡುವುದು, ಮನೆ ಕಟ್ಟುವುದು, ಕೃಷಿ ಮುಂತಾದ ಉದ್ಯೋಗ ಮಾಡುತ್ತಾರೆ. ಇವರು ಮಾತನಾಡುವ ಭಾಷೆ ತೆಲುಗು. ಇವರು ಮಾಂಸಹಾರಿಗಳು. ಇವರಲ್ಲಿ ಸಾವಲಂತರು ಮಲ್ಲೇವರು ಬೆಡಗುಗಳಿವೆ.

ಒಂದೇ ಬೆಡಗಿನವರ ಜೊತೆಗೆ ವಿವಾಹ ಮಾಡುವುದಿಲ್ಲ. ವಿವಾಹ ಹಾಗೂ ಧಾರ್ಮಿಕ ಸಮಾರಂಭಗಳನ್ನು ಲಿಂಗಾಯತ, ಜಂಗಮರು ನೆರವೇರಿಸಿಕೊಡುತ್ತಾರೆ.

**ಕ್ಷೌರಿಕ** : ಇವರನ್ನು ಹಡಪಿಗ, ಹಜಾಮ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈಚೆಗೆ ಹಲವರು ಕೃಷಿ ಮತ್ತಿತರ ಉದ್ಯೋಗಗಳಲ್ಲೂ ತೊಡಗಿರುತ್ತಾರೆ. ಇವರು ಹಡಪದ ಅಪ್ಪಣ್ಣ ಎಂಬ ವಚನಕಾರರನ್ನು ಗೌರವಿಸುತ್ತಾರೆ. ೨-೩ ಮನೆಗಳನ್ನು ಹೊಂದಿರುವ ಕ್ಷೌರಿಕ ಸಮುದಾಯವು ಕ್ಷೌರಿಕ ವೃತ್ತಿಯನ್ನೇ ತನ್ನ ಮೂಲ ವೃತ್ತಿಯನ್ನಾಗಿಸಿದೆ. ಹಿಂದೆ ಕ್ಷೌರಿಕರು ಸಹ ಅದೇ ವೃತ್ತಿ ಮಾಡುತ್ತಿದ್ದರು. ಅಂದರೆ ವರ್ಷವಿಡೀ ಮನೆಯವರೆಲ್ಲರ ಕ್ಷೌರವನ್ನು ಮಾಡಿದರೆ ರೈತ ಸುಗ್ಗಿಯ ಸಮಯದಲ್ಲಿ ತಾನು ಬೆಳೆದ ಎಲ್ಲಾ ಬೆಳೆಗಳ ಫಸಲುಗಳಲ್ಲಿ ನಿರ್ದಿಷ್ಟ ಪ್ರಮಾಣದಲ್ಲಿ ಕ್ಷೌರಿಕನಿಗೆ ಕೊಡುತ್ತಿದ್ದನು. ಇದು ಪರಸ್ಪರ ಅವಲಂಬನ ಸಹಕಾರ ಹಾಗೂ ಬಾಂಧವ್ಯದ ಕೊಂಡಿಯಾಗಿತ್ತು. ಆದರೆ ಆಧುನಿಕ ಕಾಲಘಟ್ಟದಲ್ಲಿ ಅದು ಇಲ್ಲವಾಗಿದೆ. ಆದರೂ ಗ್ರಾಮದಲ್ಲಿ ಕೆಲವು ಮನೆತನಗಳಲ್ಲಿ

ಆಯಾ ಪದ್ಧತಿ ಕಂಡುಬರುತ್ತದೆ. ಇವರಲ್ಲಿ ಬರುವ ಬೆಡಗುಗಳು ಶೀಲವಂತ, ಹಡಪದ, ಬಂಡಾರು, ಕಾಯಕ.

**೨.೬. ಕುಟುಂಬ ವ್ಯವಸ್ಥೆ :**

ಕುಟುಂಬವೇ ಸಮಾಜದ ಮೂಲ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ತಂದುಕೊಡುವುದು ಕುಟುಂಬ, ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವ ಮೊದಲ ಸಂಸ್ಥೆ ಎಂದರೆ ಕುಟುಂಬವೆನ್ನಬಹುದು. ಇದು ಚಿಕ್ಕದಾದ ಸಾಮಾಜಿಕ ಘಟಕವಾಗಿದ್ದು ತಂದೆ ತಾಯಿ ಮತ್ತು ಮಕ್ಕಳಿಂದ ಕೇಂದ್ರೀಕೃತವಾಗಿರುತ್ತದೆ. ಈಲಿಯಟ್ ಮತ್ತು ಮೆರಿಟ್‌ರವರ ಪ್ರಕಾರ 'ಕುಟುಂಬವು ಜೈವಿಕ ಘಟಕವಾಗಿದ್ದು ಗಂಡ ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ. ಅಂದರೆ ಕುಟುಂಬವು ಒಂದು ಚಿಕ್ಕ ಘಟಕವಾಗಿದ್ದು, ಸಾಂಸಾರಿಕ ರೂಪದಲ್ಲಿ ಗಂಡ ಹೆಂಡತಿಯರಲ್ಲಿ ವಂಶಾಭಿವೃದ್ಧಿಯ ಜೊತೆಗೆ ಲೈಂಗಿಕ ಬಾಂಧವ್ಯಗಳಲ್ಲಿ ರೂಪಿಸುವ ಗುಣ ಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲ ಪ್ರಕಾರಗಳಲ್ಲಿ ಒಂದು ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ. (ಎಚ್.ಎಸ್. ಗುರುಪ್ರಸಾದ್ ೨೦೦೭-೦೮)

ಅಧ್ಯಯನದ ಅನುಕೂಲಕ್ಕಾಗಿ ಕುಟುಂಬಗಳನ್ನು ವಿಂಗಡಿಸಿ ನೋಡಿದಾಗ ಈ ರೀತಿಯ ಕುಟುಂಬದ ಹಲವು ಪ್ರಕಾರಗಳು ಕಂಡುಬರುತ್ತವೆ.

ಅವಿಭಕ್ತ ಕುಟುಂಬ, ವಿಭಕ್ತ ಕುಟಂಬ, ಮಾತೃ ಮೂಲ ಕುಟುಂಬ, ಪಿತೃಪ್ರಧಾನ ಕುಟುಂಬ, ಏಕಪತ್ನಿ ಕುಟುಂಬ, ಬಹುಪತ್ನಿ ಕುಟುಂಬ ಹೀಗೆ ಕುಟುಂಬಗಳ ವಿವಿಧ ಪ್ರಕಾರಗಳಿದ್ದರೂ ಪ್ರಸ್ತುತ ತಮಟಕಲ್ಲು ಪರಿಸರದಲ್ಲಿನ ಕುಟುಂಬ ವ್ಯವಸ್ಥೆಯನ್ನು ಪರಿಶೀಲಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

ತಮಟಕಲ್ಲು ಒಂದು ಚಿಕ್ಕ ಗ್ರಾಮವಾಗಿದೆ. ಕೃಷಿಯೇ ಮೂಲ ಉದ್ಯೋಗವಾಗಿದೆ. ಈ ಹಿನ್ನೆಲೆಯಲ್ಲಿ ಮೊದಲು ಅವಿಭಕ್ತ ಕುಟುಂಬಗಳು ಅಸ್ತಿತ್ವದಲ್ಲಿದ್ದು, ಇತ್ತೀಚಿನ ದಿನಗಳಲ್ಲಿ ಜನ ಆಧುನೀಕರಣದ ಪ್ರಭಾವದಿಂದ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡು ಜಾಗತೀಕರಣ, ಕೈಗಾರೀಕರಣ, ನಗರೀಕರಣ, ಶಿಕ್ಷಣ ಪ್ರಭಾವಕ್ಕೆ ಒಳಗಾಗಿ ನಿರ್ದಿಷ್ಟ ಸ್ಥಳದಲ್ಲಿ ವಾಸಿಸಲು ಸಾಧ್ಯವಾಗದೇ ತಮಗೆ ಅನುಕೂಲವೆನಿಸುವ ಸ್ಥಳಗಳಿಗೆ ಹೋಗಿ ಜೀವಿಸಲು ಪ್ರಾರಂಭಿಸುವುದರಿಂದ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಹೊಂದಿವೆ. ಅಷ್ಟೇ ಅಲ್ಲ ಸರ್ಕಾರದಿಂದ ಸಿಗುವ ಹಲವಾರು ಸವಲತ್ತುಗಳನ್ನು ಪಡೆಯುವ ಉದ್ದೇಶದಿಂದಲೂ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಹರಿದು ಹಂಚಿಹೋಗಿವೆ.

ಆಧುನಿಕ ಜೀವನ ಶೈಲಿ, ಯಾಂತ್ರಿಕ ಜೀವನದಿಂದಾಗಿ ಆಧುನಿಕ ಸ್ಥಿತ್ಯಂತರಗಳ ಪ್ರಭಾವದಿಂದಾಗಿ ಕೂಡಿ ಬಾಳುವ, ಬದುಕುವ ಮನೋಧೋರಣೆ ಕಡಿಮೆಯಾಗಿದೆ. ವ್ಯವಸಾಯ ಮತ್ತು ಗೃಹ

ಕೈಗಾರಿಕೆಗಳ ಕ್ಷೀಣಿಸುವಿಕೆ, ಸ್ತ್ರೀಯರ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ, ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವ, ಪ್ರಜಾಪ್ರಭುತ್ವ, ಆಧುನಿಕ ಕಾಯಿದೆಗಳು ಈ ಮುಂತಾದ ಅಂಶಗಳಿಂದ ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿ ನಿರ್ದಿಷ್ಟವಾಗಿ ಗಂಡ-ಹೆಂಡತಿ ಮತ್ತು ಅವರ ಮಕ್ಕಳು ಒಂದು ಮನೆಯಲ್ಲಿ ವಾಸಿಸುವ ಮೂಲಕ ಸರಳ ಕುಟುಂಬವಾಗಿದೆ. ಮಕ್ಕಳ ಮದುವೆ ಆಗುವವರೆಗೂ ಅದು ಅವಿಭಕ್ತ ಕುಟುಂಬವಾಗಿರುತ್ತದೆ. ೩-೪ ಜನ ಅಣ್ಣ ತಮ್ಮಂದಿರಿರುವ ಕುಟುಂಬ ಅವರ ಮದುವೆ ಆಗುವವರೆಗೂ ಕೂಡಿಯೇ ಇರುತ್ತಾರೆ. ಮದುವೆಯಾದ ಮೇಲೆ ಅಣ್ಣ ತಮ್ಮಂದಿರು ಹಲವಾರು ಕಾರಣಗಳಿಂದ ಬೇರೆ ಬೇರೆ ವಾಸಿಸುತ್ತಾರೆ. ಹೀಗೆ ಕುಟುಂಬ ವಿಭಕ್ತ ಕುಟುಂಬವಾಗಿ ಸಾಮಾನ್ಯವಾಗಿ ತಂದೆ-ತಾಯಿಗಳು, ಚಿಕ್ಕ ಮಗನ ಹತ್ತಿರ ಅಥವಾ ದೊಡ್ಡ ಮಗನ ಬಳಿ ಇರುವುದು ಸಾಮಾನ್ಯವಾಗಿದೆ. ಹೀಗೆ ಅವಿಭಕ್ತ ಕುಟುಂಬ ವಿಭಕ್ತವಾದರು ಸಹ ಹಬ್ಬ-ಹರಿದಿನ, ಜಾತ್ರೆ, ಮದುವೆ ಮುಂತಾದ ಸಂದರ್ಭಗಳಲ್ಲಿ ಒಗ್ಗಟ್ಟಾಗಿರುತ್ತಾರೆ. ಯಾರಾದರು ತಮ್ಮ ಮನೆತನದ ಯಾವುದೇ ಕುಟುಂಬದ ವ್ಯಕ್ತಿಯ ಜೊತೆ ಜಗಳವಾಡಿದರೆ ಆ ಮನೆತನದ ಎಲ್ಲಾ ಕುಟುಂಬಗಳು ಒಗ್ಗಟ್ಟಾಗುತ್ತವೆ.

ಪ್ರಸ್ತುತ ಪ್ರದೇಶದಲ್ಲಿ ಪಿತೃಪ್ರಧಾನ ಕುಟುಂಬ ಬಹುಮಟ್ಟಿಗೆ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ನಮ್ಮ ದೇಶದ ಬಹುತೇಕ ಹಳ್ಳಿಗಳಲ್ಲಿ ಇರುವಂತೆ ಇಲ್ಲಿಯೂ ಸಹ ಪಿತೃಪ್ರಧಾನ ಕುಟುಂಬ ಅಸ್ತಿತ್ವದಲ್ಲಿದ್ದು ತಂದೆ, ಮನೆಯ ಹಿರಿಯ ವ್ಯಕ್ತಿ ಯಜಮಾನನಾಗಿರುತ್ತಾನೆ. ಅವನ ಹೆಂಡತಿ, ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು ಎಲ್ಲರೂ ಅವನಿಗೆ ಅನುವರ್ತಿಗಳಾಗಿ ನಡೆದುಕೊಳ್ಳುತ್ತಾರೆ. ಯಜಮಾನ ನಿರಂಕುಶ ಪ್ರಭು, ಸರ್ವಾಧಿಕಾರಿಯಾಗಿದ್ದಾನೆ. ತನಗೆ ಇಷ್ಟ ಬಂದ ರೀತಿಯಲ್ಲಿ ನಡೆದುಕೊಳ್ಳುವ ಹಕ್ಕು ಆತನಿಗೆ ಇದೆ. ಕುಟುಂಬಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿ ಅವನದು ಅಂತಿಮ ತೀರ್ಮಾನ. ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಆತನಿಗೆ ಸ್ವತಂತ್ರವಾದ ಅಧಿಕಾರವಿರುತ್ತದೆ. ಹಾಗೆಂದ ಮಾತ್ರಕ್ಕೆ ಇಲ್ಲಿನ ಕುಟುಂಬಗಳಲ್ಲಿ ಮನೆಯ ಯಜಮಾನ ತನ್ನ ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುತ್ತಾರೆ ಎಂದಲ್ಲ. ಕೆಲವು ವಿಷಯಗಳಲ್ಲಿ ಮಹಿಳೆಯರ ತೀರ್ಮಾನಗಳಿಗೂ ಮಾನ್ಯತೆ ಇರುತ್ತದೆ. ಕೆಲವು ಮನೆಯ ಪುರುಷರು ದುಶ್ಚಟಗಳಿಗೆ ಅಥವಾ ದುರ್ನಡತೆಯಿಂದ ನಡೆದುಕೊಂಡಾಗ ಅಧಿಕಾರವನ್ನು ಮಹಿಳೆಯರು ವಹಿಸಿಕೊಂಡು ಮನೆಯ ಎಲ್ಲ ಜವಾಬ್ದಾರಿ, ಆಗು-ಹೋಗುಗಳನ್ನು, ನಿರ್ಧಾರ ತೆಗೆದುಕೊಳ್ಳುವ ಹಕ್ಕು ಮಹಿಳೆಗೆ ಇರುತ್ತದೆ. ಪಿತೃಪ್ರಧಾನ ಕುಟುಂಬಗಳು ಇದ್ದರು ಕೇವಲ ನಾಮಕಾವಸ್ಥೆಗೆ ಮಾತ್ರ ತಂದೆ ಯಜಮಾನನಾಗಿರುತ್ತಾನೆ. ಮಹಿಳೆಯ ನಿರ್ಧಾರಗಳೇ ಅಂತಿಮ ತೀರ್ಮಾನವಾಗಿರುತ್ತವೆ. ಇನ್ನು ಕೆಲವು ಪುರುಷರು ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳಲು ಮಹಿಳೆಯರಿಗೆ ಯಜಮಾನಿಕೆ, ಮನೆಯ ಜವಾಬ್ದಾರಿಗಳನ್ನು ಬಿಟ್ಟುಕೊಟ್ಟು ಕೇವಲ ತಾವು ದುಡಿದ ಹಣವನ್ನು ಮಹಿಳೆಯರ ಕೈಗೆ ಕೊಡುವವರು ಇದ್ದಾರೆ. ಮತ್ತೆ ಕೆಲವು ಪುರುಷರು ದುಡಿಯುವುದಕ್ಕೂ ಹೋಗದೆ ಸೋಮಾರಿಗಳಾಗಿ ಊರಿನಲ್ಲಿ ತಿರುಗಿಕೊಂಡು ಇರುತ್ತಾರೆ.

ಇಂತಹ ಸಂದರ್ಭದಲ್ಲಿ ಮಹಿಳೆಯರೇ ಮನೆಯ ಎಲ್ಲಾ ಕೆಲಸಗಳನ್ನು ಅಂದರೆ ಮನೆಯಲ್ಲಿ ಮಕ್ಕಳ ಲಾಲನೆ, ಪೋಷಣೆ, ಹಬ್ಬ-ಹರಿದಿನ, ಬಿಡಿ ದಿನಗಳಲ್ಲಿ ಮನೆಗೆ ಬೇಕಾಗುವ ವಸ್ತುಗಳನ್ನು ತರುವುದು, ಮಕ್ಕಳಿಗೆ ಬಟ್ಟೆ ತರುವುದು ಮನೆಯಲ್ಲಿ ಅಡುಗೆ ಮಾಡುವ ಅಷ್ಟೇ ಅಲ್ಲದೆ, ಹೊಲದಲ್ಲಿ ಬಿತ್ತನೆ ಮಾಡುವ, ಕಳೆ ಕೀಳುವ, ಫಸಲನ್ನು ಕಟಾವು ಮಾಡುವ ಜವಾಬ್ದಾರಿಗಳನ್ನು ಮಹಿಳೆಯರಿಗೆ ಬಿಟ್ಟಿರುತ್ತಾರೆ. ಆದರೆ ವರ್ಷವಿಡೀ ಹೊಲದಲ್ಲಿ ಕೆಲಸ ಮಾಡಿ, ದುಡಿದು ಫಸಲು ಕಟಾವು ಆದ ನಂತರ ಮಾರುಕಟ್ಟೆಗೆ ಹಾಕಿಕೊಂಡು ಹೋಗುವವನು ಪುರುಷನೇ ಆಗಿರುತ್ತಾನೆ. ಇದರಿಂದ ಬಂದ ಹಣವನ್ನು ಕೆಲವರು ಹೆಂಡತಿಗೆ ಕೊಡುತ್ತಾರೆ. ಕೆಲವರು ಕೊಡದೆ ತಾವೇ ಕುಡಿದು ಖರ್ಚು ಮಾಡುತ್ತಾರೆ. ಈ ರೀತಿಯಾಗಿ ಮಾಡಿದಾಗ ಮಹಿಳೆ ಗಂಡನಿಗೆ ವಿರೋಧಿಸಿದರೆ ಅವಳ ಮೇಲೆಯೇ ದೌರ್ಜನ್ಯ ಮಾಡುತ್ತಾನೆ. ಇದು ನನ್ನ ಹೊಲ ನನ್ನ ಹೊಲದಲ್ಲಿ ಬೆಳೆದ ಬೆಳೆ, ನನ್ನ ಹೊಲ, ಇಲ್ಲ ಎಂದರೆ ಬೆಳೆ ಹೇಗೆ ಬೆಳೆಯುತ್ತಿದ್ದೆ, ಎಂದೆಲ್ಲ ಪ್ರಶ್ನಿಸಿ ಅವಳ ಬಾಯಿ ಮುಚ್ಚಿಸುತ್ತಾನೆ. ಆದರೆ ಮಹಿಳೆ ಈ ಎಲ್ಲ ದೌರ್ಜನ್ಯವನ್ನು ಸಹಿಸಿಕೊಂಡು ಮನೆಯನ್ನು ನಡೆಸಿಕೊಂಡು ಹೋಗುವ ಪರಿಸ್ಥಿತಿಗಳು ಇವೆ. ಮತ್ತೆ ಕೆಲವು ಪುರುಷರು ತಾವು ಆರಾಮಾಗಿ ಇರಲು ಮನೆಯ ಎಲ್ಲ ಜವಾಬ್ದಾರಿಗಳನ್ನು ಮಹಿಳೆಯರ ಮೇಲೆ ಹಾಕುತ್ತಾರೆ. ಆದರೆ ಮಕ್ಕಳ ವಿವಾಹ, ವಿದ್ಯಾಭ್ಯಾಸ ಇತ್ಯಾದಿ ವಿಷಯಗಳ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ಅಂತಿಮ ತೀರ್ಮಾನ ಪುರುಷರದ್ದೇ ಆಗಿರುತ್ತದೆ. ಎಲ್ಲ ಮನೆಗಳಲ್ಲಿಯೂ ಇದೆ ರೀತಿ ಇರುವುದಿಲ್ಲ. ಪುರುಷರೇ ದುಡಿದು ಪುರುಷರೇ ಮನೆಯ ಎಲ್ಲ ಖರ್ಚು-ವೆಚ್ಚಗಳನ್ನು ನೋಡಿಕೊಳ್ಳುವುದರ ಜೊತೆಗೆ ಎಲ್ಲ ವಿಷಯಗಳಲ್ಲಿ ಅಂತಿಮ ನಿರ್ಧಾರ ಪುರುಷರದ್ದೇ ಆಗಿರುತ್ತದೆ. ಕುಟುಂಬದ ನಿರ್ವಹಣೆಯಲ್ಲಿ ಎಡವಿದಾಗ ಮನೆಯ ಯಜಮಾನಿಯಾಗಿ, ಹೆಂಡತಿಯಾಗಿ, ತಾಯಿಯಾಗಿ, ಈ ಕುಟುಂಬದ ಜವಾಬ್ದಾರಿಯನ್ನು ಮಹಿಳೆಯರು ವಹಿಸಿಕೊಂಡು ಹೋಗಿರುವುದು ಕಂಡುಬರುತ್ತದೆ.

ಪಿತೃಪ್ರಧಾನ ಕುಟುಂಬಗಳಲ್ಲಿ ಮಕ್ಕಳು ತಂದೆಯ ವಂಶಕ್ಕೆ ಸೇರುತ್ತಾರೆ. ಆದ ಕಾರಣ ಮಕ್ಕಳು ಹುಟ್ಟಿದ ನಂತರ ತಮ್ಮ ತಂದೆಯ ಮನೆತನದಲ್ಲಿ ಹೆಸರಿಡುವುದು ಇಲ್ಲಿ ಎಂದಿಗೂ ಉಳಿದು ಬಂದಿದೆ. ಕುಟುಂಬದ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಮಾತ್ರ ಪಾಲು ಪಡೆಯುವ ಹಕ್ಕು ಇತ್ತು. ಇತ್ತೀಚಿನ ದಿನಗಳಲ್ಲಿ ನ್ಯಾಯಾಲಯವು ನೀಡಿರುವ ತೀರ್ಪಿನ ಪ್ರಕಾರ ಹೆಣ್ಣುಮಕ್ಕಳಿಗೂ ಆಸ್ತಿಯಲ್ಲಿ ಹಕ್ಕಿದೆ. ಆದರೆ ಹೆಚ್ಚು ಗಂಡು ಮಕ್ಕಳ ಕಡೆಗೆ ಒಲವಿರುವುದು ಮತ್ತು ಅನುವಂಶೀಯ ಅಧಿಕಾರ ಮತ್ತು ಸ್ಥಾನಮಾನಗಳು ಗಂಡು ಸಂತತಿಗೆ ಮೀಸಲಾಗಿರುವುದರಿಂದ ಪಿತೃಪ್ರಧಾನ ಕುಟುಂಬಗಳು ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಒಟ್ಟಾರೆ ಇಲ್ಲಿನ ಕುಟುಂಬ ಪದ್ಧತಿ ಹಿಂದೂ ಸಮಾಜದ ಪುರುಷ ಪ್ರಧಾನ ಕುಟುಂಬದ ಎಲ್ಲಾ ಲಕ್ಷಣಗಳನ್ನು ಹೊಂದಿದೆ ಎಂದು ಹೇಳಬಹುದು. ಅವರ ಈ ಬಂಧುತ್ವ ವ್ಯವಸ್ಥೆ ಅವರ ಹಲವು ಸಂಪ್ರದಾಯ, ನಡವಳಿಕೆಗಳಲ್ಲಿ ಪರಿಣಾಮಕಾರಿಯಾಗಿ ಪ್ರಭಾವ ಬೀರಿರುವುದನ್ನು ಇಲ್ಲಿ ಗುರುತಿಸಬಹುದು.

### ೨.೬.೧. ಕುಟುಂಬದಲ್ಲಿ ಮಹಿಳೆ ನಿರ್ವಚನ :

ಬಹುತೇಕ ಕುಟುಂಬದ ಸ್ವರೂಪದಲ್ಲಿ ಲಿಂಗಭೇದ ಕಂಡುಬರುವಂತೆ ಕೌಟುಂಬಿಕ ವಲಯದಲ್ಲೂ ಲಿಂಗ ತಾರತಮ್ಯದ ಕೆಲವು ಎಳೆಗಳು ಸೇರಿಕೊಂಡಿರುವುದು ಗೋಚರವಾಗುತ್ತದೆ. ಹೀಗೆ ಕಂಡುಬರುವ ಲಿಂಗ ಭೇದದ ಸ್ವರೂಪ ಯಾವ ರೀತಿಯಾಗಿರುತ್ತದೆ ಎಂಬುದನ್ನು ಕೃಷಿ, ಕೂಲಿ ಕುಟುಂಬದೊಳಗಿನ ಕೆಲವು ದೈನಂದಿನ ಸಂಗತಿಗಳಿಂದ ವಿವರಿಸುವ ಮತ್ತು ಆ ಮೂಲಕ ಮಹಿಳೆಗೆ ಕುಟುಂಬದೊಳಗೆ ಸಿಗುವ ಸ್ಥಾನಮಾನ ಯಾವ ರೀತಿಯದು ಎಂಬುದನ್ನು ಇಲ್ಲಿ ಗಮನಿಸಲಾಗಿದೆ. ಬಹುಪಾಲು ಮಹಿಳೆಯರು ಪುರುಷನಿಗೆ ಅಧೀನವಾಗಿಯೇ ಜೀವನ ಸಾಗಿಸುವುದು ತಿಳಿದುಬರುತ್ತದೆ. ಉದಾ:- ಶೋಭಾ ಇವರು ಗೃಹಿಣಿಯಾಗಿದ್ದು ಮನೆಯ ಎಲ್ಲ ವ್ಯವಹಾರ, ಜವಾಬ್ದಾರಿ, ನಿರ್ಧಾರಗಳನ್ನು ತೆಗೆದುಕೊಳ್ಳುವುದು ನನ್ನ ಗಂಡನದು ಅಂತಿಮ ತೀರ್ಮಾನವಾಗಿದೆ. ನನ್ನ ಮನೆಯವರು ಕಡಲೆ ಬಟ್ಟಿಗೆ ಹೋಗುತ್ತಾರೆ. ಒಂದು ದಿನಕ್ಕೆ ೫೦೦ರೂ ಕೂಲಿ ಕೊಡುತ್ತಾರೆ. ವಾರದ ಕೊನೆಯಲ್ಲಿ ಬಂದ ಕೂಲಿ ಹಣದಲ್ಲಿ ಮನೆಗೆ ಬೇಕಾದ ಅಗತ್ಯ ವಸ್ತುಗಳನ್ನು ತೆಗೆದುಕೊಂಡು ಬಂದು ಉಳಿದ ಹಣವನ್ನು ಬ್ಯಾಂಕ್ ಖಾತೆಗೆ ಹಾಕಿಕೊಳ್ಳುತ್ತಾರೆ. ಹೆಂಡತಿಯಾನ್ನಾಗಲೀ, ತಾನಾಗಾಲೀ ಯಾವುದೇ ಸಂಘಕ್ಕೆ ಸೇರಿಲ್ಲ. ಶೋಭಾ ಮನೆ ಕೆಲಸ, ಮಗು ನೋಡಿಕೊಳ್ಳುವುದು ಮಾತ್ರ ಮಾಡಬೇಕು. ನನಗೆ ಕೆಲಸಕ್ಕೆ ಹೋಗಬೇಕೆನ್ನುವ ಆಸೆ. ಆದರೆ ಯಾವ ಕೆಲಸಕ್ಕೂ ಕಳುಹಿಸುವುದಿಲ್ಲ. ಹಬ್ಬ ಹರಿದಿನಗಳಲ್ಲಿ ಸಂತೆ ಮಾಡುವುದು, ಬಟ್ಟೆ ತರುವುದು ಎಲ್ಲ ನಮ್ಮ ಯಜಮಾನರೇ ತರುತ್ತಾರೆ! ನನಗೆ ಏನೇ ಆಸೆ-ಆಕಾಂಕ್ಷೆಗಳಿದ್ದರು ಮನಸ್ಸಿನಲ್ಲಿ ಅದುಮಿಟ್ಟುಕೊಳ್ಳಬೇಕು. ಇಷ್ಟೇ ನನ್ನ ಜೀವನ ಎಂದು ಹೇಳಿದರು.

ಇನ್ನು ಮಹಂತಮ್ಮ : ನನಗೀಗ ೬೦ ವರ್ಷ. ೨೫ ವರ್ಷದಿಂದ ಹಾಲು ಮೊಸರು ಮಾರಿ ಕೆಲಸ ಮಾಡುವುದಾಗಿ ಮತ್ತು ಎಮ್ಮೆ ಮೇಯಿಸುವುದು, ಹಾಲು ಕರೆಯುವುದು, ಸಗಣಿ ಹೊಡೆಯುವುದು ಎಲ್ಲವು ನಾನೇ ಮಾಡುತ್ತಿದ್ದೆ. ಆದರೆ ನನ್ನ ಅನಾರೋಗ್ಯದ ಕಾರಣದಿಂದ ಈ ಎಲ್ಲ ಕೆಲಸಗಳನ್ನು ನಮ್ಮ ಯಜಮಾನರೇ ಮಾಡುತ್ತಾರೆ. ನಾನು ಮನೆಗೆಲಸ ಮಾಡುತ್ತೇನೆ. ಮನೆ ಖರ್ಚಿಗೆ ಬಂದಿರುವ ಹಣ ಸರಿ ಹೋಗುತ್ತದೆ. ಮನೆಯ ಎಲ್ಲ ವ್ಯವಹಾರ, ಜವಾಬ್ದಾರಿ ನಮ್ಮ ಯಜಮಾನರದೇ. ನನ್ನ ಕೈಗೆ ಒಂದು ರೂಪಾಯಿಯೂ ಸಹ ಕೊಡುವುದಿಲ್ಲ. ನಮ್ಮ ಯಜಮಾನರಿಗೆ ಕುಡಿತದ ಚಟವಿಲ್ಲ. ಮತ್ತೊಂದು ಚಟವು ಸಹ ಇಲ್ಲ. ನಮಗೆ ತಾನೇ ಖರ್ಚು ಮಾಡುವುದು. ಆದ್ದರಿಂದ ಒಂದು ದಿನಕ್ಕೂ ನಾನು ಮನೆಯ ಜವಾಬ್ದಾರಿಯನ್ನು ನಿಭಾಯಿಸುತ್ತೇನೆ ಎಂದು ಕೇಳಲಿಲ್ಲ, ಕೇಳುವುದು ಇಲ್ಲ,

ಕುಟುಂದೊಳಗೆ ಮಹಿಳೆ ಗಂಡಿಗೆ ತಗ್ಗಿ ಬಗ್ಗಿ ನಡೆಯಬೇಕು. ಗಂಡಿಗೆ ಎದುರಾಡಬಾರದು. ಒಟ್ಟಿನಲ್ಲಿ ಗಂಡಿಗೆ ಹೆಣ್ಣು ಗೌರವ ಕೊಡಬೇಕು ಎನ್ನುವ ನಿರೀಕ್ಷೆಗಳು ಇರುತ್ತವೆ. ಅದಕ್ಕೆ ಇರಬೇಕು 'ಹಿರಿಯರು ತಳಿ ನೋಡಿ ದನ ತರಬೇಕು ಗುಣ ನೋಡಿ ಹೆಣ್ಣು ತರಬೇಕು' ಎಂದು

ಹೇಳುತ್ತಿದ್ದುದು. ಅಂದರೆ ಹೇಳಿದಂತೆ ಕೇಳಿಕೊಂಡು ನಡೆಯುವ ಸ್ವಭಾವ, ಮನೆಯ ಮರ್ಯಾದೆಯನ್ನು ಕಾಯ್ದುಕೊಂಡು ಹೋಗುವ ಗುಣ ಆ ಹೆಣ್ಣಿನಲ್ಲಿರಬೇಕು ಅಂತಹವಳನ್ನು ಮಾತ್ರ ಮನೆಯ ಸೊಸೆಯಾಗಿ ತರಲು ಅಪೇಕ್ಷಿಸುತ್ತಿದ್ದರು. ಈ ಪ್ರವೃತ್ತಿ ಈಗಲೂ ಇದೆ. ಇವತ್ತಿಗೂ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಗಂಡಸಿಗೆ ಸರಿಸಮವಾಗಿ ಕುಳಿತುಕೊಳ್ಳುವ ಅವಕಾಶ ಮಹಿಳೆಯರಿಗಿರುವುದಿಲ್ಲ. ಮನೆಯ ಕೆಲವು ಜಾಗದಲ್ಲಿ ಅವಳ ಪ್ರವೇಶ ತೀರಾ ವಿರಳವಾಗಿರುತ್ತದೆ. ಹೆಚ್ಚಾಗಿ ಮನೆಯಲ್ಲಿ ಇವಳ ಆಪ್ತ ವಲಯಗಳೆಂದರೆ ಅಡುಗೆ ಮನೆ. ಮತ್ತು ಹಿತ್ತಲು ಮಾತ್ರ ಅಡುಗೆ ಮನೆ ಮತ್ತು ಹಿತ್ತಲಿನಲ್ಲಿ ಮುಕ್ತವಾಗಿ ಓಡಾಡಿದಂತೆ ಆ ಮಹಿಳೆಗೆ ಮನೆಯ ಪಡಸಾಲೆ ಅಥವಾ ನಡುಮನೆಯಲ್ಲಿ ಓಡಾಡುವ, ಮನೆಯ ಹೊರಗಿನ ಜಗುಲಿಯ ಮೇಲೆ ಅರಾಮವಾಗಿ ಕುಳಿತುಕೊಳ್ಳುವ ಅವಕಾಶವಿಲ್ಲ. ಒಂದು ವೇಳೆ ಆ ಜಾಗದಲ್ಲಿ ಮಹಿಳೆಯ ಪ್ರವೇಶವಾಗುವುದಾದರೆ ಅದು ಮನೆಯಲ್ಲಿ ಪುರುಷರಾರು ಇಲ್ಲದ ಸಮಯದಲ್ಲಿ ಮಾತ್ರ. ಏಕೆಂದರೆ ಮನೆಯ ಯಜಮಾನ ಭಾವಂದಿರು, ಗಂಡ ಮೈದುನಗಳಿರುವ ಕುಟುಂಬಗಳ ಮನೆಯಲ್ಲಿ ಇವರೆಲ್ಲ ಇದ್ದಾಗ ಅವಳು ಹೊರಗೆ ಬರುವುದೇ ಅಪರೂಪ. ಆಗ ಅವಳ ವಾಸ್ತವ್ಯವೇನಿದ್ದರೂ ಅಡುಗೆ ಮನೆಯೊಂದಕ್ಕೆ ಸೀಮಿತವಾಗಿರುತ್ತದೆ. ಹಾಗೇನಾದರೂ ಒಳ, ಹೊರಗೆ ಓಡಾಡುವ ಸಂದರ್ಭಗಳಿದ್ದಾಗ ಹೆಣ್ಣು ಮಕ್ಕಳು ತಲೆಯ ಮೇಲೆ ಸೆರಗು ಹಾಕಿಕೊಂಡು ತಲೆತಗ್ಗಿಸಿ ನಡೆಯುತ್ತಾರೆ. ಒಂದರ್ಥದಲ್ಲಿ ಮನೆಯ ಪುರುಷರಿಗೆ ಆ ಮಹಿಳೆ ಕೊಡುವ ಗೌರವದ ಪ್ರತೀಕವಾಗಿದೆ. ಅಲ್ಲದೆ ಇದು ಕೃಷಿಯ ಕೌಟುಂಬಿಕ ಆವರಣದಲ್ಲಿ ಹೆಣ್ಣು ಪುರುಷನಿಗೆ ಅಂಜಿ ನಡೆಯುವ ಪ್ರತೀಕವೂ ಆಗಿದೆ. ಮನೆಯ ಸೊಸೆಯಂದಿರ ವಿಷಯದಲ್ಲಿ ಈ ಕಟ್ಟುಪಾಡುಗಳು ಬಿಗಿಯಾಗಿರುತ್ತದೆ. ಮನೆಯ ಹೆಣ್ಣು ಮಕ್ಕಳ ವಿಷಯಕ್ಕೆ ಬಂದಾಗ ಈ ನಿಯಮಗಳಲ್ಲಿ ಸ್ವಲ್ಪ ಸಡಿಲತೆ ಇರುವುದು ಕಂಡುಬರುತ್ತದೆ. ಕುರ್ಚಿ ಸಂಸ್ಕೃತಿ ನಮ್ಮಲ್ಲಿ ಬೆಳೆದು ಬಂದಿದ್ದು, ಬಹಳ ಇತ್ತೀಚೆಗಾದರೂ ಮನೆಯಲ್ಲಿ ಆ ಕುರ್ಚಿಯ ಮೇಲೆ ಯಾರು ಕುಳಿತುಕೊಳ್ಳಬೇಕು? ಯಾರೂ ಕುಳಿತುಕೊಳ್ಳಬಾರದು? ಎಂಬ ಅಲಿಖಿತ ನಿಯಮಗಳು ರೂಢಿಯಲ್ಲಿವೆ. ಮನೆಯಲ್ಲಿ ಆ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಹಕ್ಕು ಮನೆಯ ಪುರುಷರಿಗೂ, ಮನೆ ಮಕ್ಕಳಿಗೂ ಇದ್ದಷ್ಟು ಆ ಮನೆಯ ಸೊಸೆಯಂದಿರಿಗಿರದು. ತುಂಬಾ ಅಪರೂಪಕ್ಕೆ ಮನೆಯ ಗಂಡಸರ್‍ಯಾರು ಇಲ್ಲದಿದ್ದಾಗ ಆ ಕುರ್ಚಿಗಳು ಅವಳಾದಾಗುತ್ತವಷ್ಟೇ. ಹಾಗೇನಾದರೂ ಮನೆಯ ಗಂಡಸರೆದುರು ಅಥವಾ ಗಂಡಸರಿಗೆ ಸರಿಸಮಾನವಾಗಿ ಹೆಣ್ಣು ಕುರ್ಚಿಯ ಮೇಲೆ ಕುಳಿತಿರುವುದು ತಿಳಿದು ಬಂದರೆ ಅದು ಬೇಡ ಆ ಹೆಣ್ಣಿನ ಸೊಕ್ಕು, ದರ್ಪ, ದುರಹಂಕಾರ ಎಂದು ವ್ಯಾಖ್ಯಾನಕ್ಕೊಳಗಾಗುತ್ತದೆ. ಅಲ್ಲದೆ ಅದು ಗಂಡಿಗೆ ತೋರುವ ಅಗೌರವವೆಂದು ಭಾವಿಸಲಾಗುತ್ತದೆ.

"ಮಳೆ ಬಂದರೆ ಕೆಟ್ಟಿಲ್ಲ ಮಗ ಉಂಡರೆ ಕೆಟ್ಟಿಲ್ಲ" ಎನ್ನುವ ಗಾದೆ ಮಾತೊಂದಿದೆ. ಅಂದರೆ ಗಂಡಸು ದುಡಿತಾನೆ ಅವನು ಏನು ಮಾಡಿದರೂ ಸರಿಯೇ ಎನ್ನುವ ತಾತ್ವಿಕತೆ ಈ ಗಾದೆಯದು.

ಈಗಲೂ ಕೂಡ ಗಂಡಸರು ದುಡಿಯುತ್ತಾನೆ ಎನ್ನುವ ಕಾರಣಕ್ಕೆ ಕುಟುಂಬದಲ್ಲಿ ಅವನಿಗೆ ಸಿಗುವ ಗೌರವಾಧಾರಗಳೇ ಬೇರೆ. ಊಟದ ಸಂಗತಿಯ ಬಗೆಗೆ ಹೇಳುವುದಾದರೆ ಗಂಡಸಿನ ಊಟದ ನಂತರವೇ ಮನೆಯ ಹೆಂಗಸರು ಊಟ ಮಾಡುವ ರೂಢಿಯನ್ನು ಬೆಳಸಿಕೊಂಡು ಬಂದಿರುವುದನ್ನು ನಾವು ಗಮನಿಸಬಹುದು.

"ಅತ್ತೆಯ ಮನಿಯಾಗ ಮುತ್ತಾಗಿ ಇರಬೇಕು.
ಹೊತ್ತಾಗಿ ನೀಡಿದರೆ ಉಣಬೇಕು .
ಮಗಳ ತವರೀಗಿ ಹೆಸರ ತರಬೇಕು"
(ಸುಮಂಗಲ ಅತ್ತಿಗೇರಿ ೨೦೧೦, ಪುಟ –೧೩೪).

ಅಂದರೆ ಮನೆಯಲ್ಲಿ ಊಟದ ವಿಷಯದಲ್ಲಿ ಪುರುಷನಿಗಿದ್ದಷ್ಟು ಪ್ರಾಶಸ್ತ್ಯ ಮಹಿಳೆಗಿದ್ದಂತಿಲ್ಲ ಎಷ್ಟೊತ್ತಿದ್ದರೂ ಸರಿಯೇ ಮನೆಯರೆಲ್ಲಾ ಊಟ ಮಾಡಿದ ಮೇಲೆ ಮಹಿಳೆಯರು ಊಟ ಮಾಡುವ ಕ್ರಮ ನಮ್ಮಲ್ಲಿದೆ. ಅಲ್ಲದೆ ದುಡಿಯುವ ಗಂಡಸು ಎಂದು ಅವರಿಗೆ ಪೌಷ್ಟಿಕಾಂಶವಿರುವ ತಿಂಡಿ, ತಿನಿಸು ಮತ್ತು ಅಡುಗೆ ಪದಾರ್ಥಗಳನ್ನು ರುಚಿರುಚಿಯಾಗಿ ಮಾಡಿ ಹಾಕಲಾಗುತ್ತದೆ. ಅಂತೆಯೇ ಏನಾದರೂ ತಿನ್ನುವ ಪದಾರ್ಥಗಳನ್ನು ಹಂಚುವ ವಿಷಯದಲ್ಲಿ ಅಷ್ಟೆ ಗಂಡಸರಿಗೆ ಹೆಚ್ಚಿನ ಭಾಗವನ್ನು ಕೊಟ್ಟು ಉಳಿದುದರಲ್ಲಿ ಮಹಿಳೆ ಹಂಚಿಕೊಳ್ಳುವುದನ್ನು ನೋಡುತ್ತೇವೆ. ಹೀಗೆ ಇನ್ನೊಂದು ನಿದರ್ಶನವನ್ನು ನೋಡೋಣ. ಕೃಷಿ ಕುಟುಂಬ ಎಂದರೆ ಸಾಮಾನ್ಯವಾಗಿ ಆ ಮನೆಯಲ್ಲಿ ಹೈನು ಇದ್ದೆ ಇರುತ್ತದೆ. ನಾವು ಗಮನಿಸಬೇಕಾದ ಸಂಗತಿ ಎಂದರೆ ಆ ಹೈನಿನ ಬಹುಪಾಲು ಲಾಭ ಯಾರಿಗೆ ತಲುಪುವುದು ಎಂಬ ಅಂಶವನ್ನು ಗಮನಿಸದಾಗ, ಗಂಡಸು ದುಡಿತಾನೆ ಎನ್ನುವ ಕಾರಣಕ್ಕೆ ಸಾಮಾನ್ಯವಾಗಿ ಅವರಿಗೆ ಕೆನೆ ಮೊಸರನ್ನು, ಗಟ್ಟಿ ಮೊಸರನ್ನು, ಹಾಲಿನ ಕೆನೆಯ ಭಾಗವನ್ನು, ತುಪ್ಪ, ಬೆಣ್ಣೆಯನ್ನು ಹೆಚ್ಚು ಬಡಿಸುವುದು ಕಂಡುಬರುತ್ತದೆ. ಬಹುಶಃ ಆಹಾರದ ಈ ಅಸಮಾನ ಹಂಚಿಕೆಯಿಂದ ಪೋಷಕಾಂಶದ ಕೊರತೆ ಉಂಟಾಗಿ ಮಹಿಳೆಯರ ದೈಹಿಕ ದುರ್ಬಲತೆಗೆ ಅನಾರೋಗ್ಯಕ್ಕೆ ಕಾರಣವಾಗಬಹುದು.

ಮನೆಯಲ್ಲಿ ಊಟದ ವಿಷಯದಲ್ಲಿ ಪುರುಷರಿಗೆ ಹೆಚ್ಚು ಪ್ರಾಶಸ್ತ್ಯ ನೀಡುವುದರ ಕುರಿತು ವಂದನಾಶಿವ ಈ ರೀತಿ ಹೇಳಿದ್ದಾರೆ "ಜಮೀನಿನಿಂದ ತಟ್ಟೆಗೆ ಆಹಾರ ವರ್ಗಾವಣೆಯಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸಿದರೂ ಅವರಿಗೆ ಸಲ್ಲಬೇಕಾದ ನ್ಯಾಯಯುತ ಪಾಲು ಸಿಗುತ್ತಿಲ್ಲ. ಬಹುಪಾಲು ಕೃಷಿ ಕೆಲಸ ಮಾಡುವ ಅವರು ಮನೆಯಲ್ಲಿ ಕೊನೆಗೆ ಉಣ್ಣುತ್ತಾರೆ. ಕನಿಷ್ಟ ಪ್ರಮಾಣದಲ್ಲಿ ಉಣ್ಣುತ್ತಾರೆ"ಎಂದು ಹೇಳಿ ವಿಷಯ ಕುರಿತಂತೆ ನಡೆದ ಅಧ್ಯಯನವನ್ನು ಹೀಗೆ ಸೂಚಿಸಿದ್ದಾರೆ. (ಯೋಜನಾ ಪತ್ರಿಕೆ ಮಾಸಿಕ ಜುಲೈ ೨೦೦೭ ಪುಟ ೧೬–೧೭).

ಬೋರಿ ಹೋರೋಮಿಟ್ಸ್ ಮತ್ತು ಮಧುಕೇಶ್ವರ ಪಂಜಾಬ್‌ನ ಹಳ್ಳಿಗಳ ಜಾಟ್ ಕುಟುಂಬಗಳಲ್ಲಿ ನಡೆಸಿದ ಅಧ್ಯಯನದ ಪ್ರಕಾರ ೧೪ ಕುಟುಂಗಳಲ್ಲಿ ೧೨ ರಲ್ಲಿ ಎಲ್ಲರೂ ಊಟ ಮುಗಿಸಿದ ನಂತರ ಮಹಿಳೆಯರು ಊಟಕ್ಕೆ ಕೂರುತ್ತಿದ್ದರು. ಜಮೀನಿನಲ್ಲಿ ಹೆಚ್ಚು ಕೆಲಸ ಇದ್ದಾಗ ಅವರು ೧೫ ಘಂಟೆ ಕೆಲಸ ಮಾಡುವುದು ಇದೆ. ಆದರೆ ಪುರುಷನಿಗೆ ಹೋಲಿಸಿದರೆ (೩೧೧೨ ಕ್ಯಾಲೋರಿ) ಅವರಿಗೆ ಸಿಗುವ ೨೧೬೯ ಕ್ಯಾಲೋರಿ ಮಾತ್ರ ಎಂದು ಆ ಅಧ್ಯಯನದ ವಿವರಗಳನ್ನು ಹೇಳಿರುವರು. (ವಂದನಾ ಶಿವ, ಬತ್ತದ ಚಿಲುಮೆ (ಅನು) ಮಾದವ ಐತಾಳ, ೨೦೦೫ ಪುಟ ೨೩). ಇದಕ್ಕೆ ತಮಟಕಲ್ಲು ಮಹಿಳೆಯರು ಹೊರತಾಗಿಲ್ಲ. ಇವರು ಸಹ ಮನೆಯ ಎಲ್ಲ ಕೆಲಸ ಕಾರ್ಯಗಳನ್ನು ಮುಗಿಸಿ ಕೆಲವರು ಹಾಲು ಮೊಸರು ಮಾರಿ ಬಂದು ೧೧ ಗಂಟೆಗೆ ಊಟ ಮಾಡುವವರು ಇದ್ದಾರೆ. ಇನ್ನು ಕೆಲವರು ಹೊಲಕ್ಕೆ ಬುತ್ತಿ ತೆಗೆದುಕೊಂಡು ಹೋಗಿ ಹೊಲದಲ್ಲಿ ಎಲ್ಲರು ಊಟ ಮಾಡಿದ ನಂತರ ಅವಳು ಊಟ ಮಾಡುವುದನ್ನು ಹೇಳಬಹುದು.

ಹೀಗೆ ಮನೆಯ ಒಳಗೂ ಹೊರಗೂ ಮಹಿಳೆ ದುಡಿದರೂ ಕುಟುಂಬದಲ್ಲಿ ಅವಳು ಹೇಗೆ ನಿರ್ಲಕ್ಷ್ಯಕ್ಕೆ ಒಳಪಟ್ಟಿದ್ದಾಳೆ ಮತ್ತು ತನ್ನನ್ನು ತಾನೇ ಮಹಿಳೆ ಹಾಗೇ ನಿರ್ಲಕ್ಷ್ಯಕ್ಕೆ ಒಳಪಡಿಸಿಕೊಂಡು ಬಂದಿದ್ದಾಳೆ ಎಂಬುದು ಈ ರೀತಿಯ ಕೆಲವು ಸಂಗತಿಗಳಿಂದ ತಿಳಿದುಬರುತ್ತದೆ;. ಒಟ್ಟಾರೆಯಾಗಿ ಪುರುಷನಿಗೆ ಹೆಣ್ಣು ಪ್ರಾಶಸ್ತ್ಯ ನೀಡಿರುವುದು ಕಂಡುಬರುತ್ತದೆ. ಮೇಲೆ ಚರ್ಚಿಸಿದ ವಿಷಯಗಳು ಮೇಲ್ನೋಟಕ್ಕೆ ಸಣ್ಣಪುಟ್ಟ ವಿಷಯಗಳೆನಿಸಬಹುದು. ಅದರೆ ಅವುಗಳನ್ನು ನೋಡಿದರೆ ಒಂದು ಕೃಷಿ ಕುಟುಂಬದಲ್ಲಿ ಕೃಷಿ ಮಹಿಳೆಯರ ಸ್ಥಾನಮಾನ ಯಾವ ರೀತಿಯಾಗಿದೆ ಎಂಬುದು ತಿಳಿದುಬರುತ್ತದೆ. ಪುರುಷ ಹಿತಾಸಕ್ತಿಯು ಆಶಯಗಳನ್ನು ಹೊಂದಿದ ಕೃಷಿ ಕೌಟುಂಬಿಕ ನೆಲೆಯಲ್ಲಿ ಮಹಿಳೆಯರಿಗೆ ಹೆಚ್ಚು ಸ್ವಾಯತ್ತತೆ ಇಲ್ಲೆಂಬುದನ್ನು ಈ ಅಂಶಗಳು ಸ್ಪಷ್ಟಪಡಿಸುತ್ತವೆ.

ಇನ್ನು ಕೃಷಿ ಕೂಲಿ ಮಹಿಳೆಯಾಗಿದ್ದರೆ ಅವಳಿಗೆ ಕುಟುಂಬದಲ್ಲಿ ಅಂತಹ ಕಟ್ಟುಪಾಡುಗಳೇನು ಇರುವುದಿಲ್ಲ. ಕುಟುಂಬದ ವ್ಯವಹಾರಗಳಲ್ಲಿ ಅವಳಿಗೆ ಸಾಕಷ್ಟು ಸ್ವಾಯತ್ತತೆ ಇರುತ್ತದೆ. ಕುಟುಂಬದೊಳಗೆ ಗಂಡ ಹೆಂಡಿರಿಬ್ಬರು ಕೂಡಿ ದುಡಿಯುವುದರಿಂದ ಹೊಲಗದ್ದೆಗಳಲ್ಲಿ ದುಡಿದು ಹೈರಣಾದ ಇವರು ಮನೆಯೊಳಗೆ ಅನ್ಯೋನ್ಯವಾಗಿರುತ್ತಾರೆ. ಆದರೂ ಕೌಟುಂಬಿಕ ಜೀವನದಲ್ಲಿ ಬಡತನ ಕಾಡುವ ಸಮಸ್ಯೆಯಾಗಿರುತ್ತದೆ. "ಆತ ಬಡವ ನಾನು ಬಡವಿ ಒಲವೆ ನಮ್ಮ ಬದುಕು" ಎನ್ನುವ ಬೇಂದ್ರೆ ಗೀತೆಯ ಸಾರದಂತೆ ಕೆಲವರು ಬಡ ಜೀವಿಯಾಗಿ ಇದ್ದುದರಲ್ಲಿಯೇ ತೃಪ್ತಿ ಪಟ್ಟುಕೊಂಡು ಬದುಕು ಸಾಗಿಸುತ್ತಾರೆ. ಆದರೆ ಕೂಲಿ ಮಾಡಿ ಬದುಕುವ ಕೆಲವು ಕುಟುಂಬಗಳಲ್ಲಿ ಕುಡಿಯುವ ಚಟವಿದ್ದ ಗಂಡಸಿದ್ದರೆ ಆ ಮಹಿಳೆಯ ಬಾಳು ಗೋಳೇ ಸರಿ. ಏಕೆಂದರೆ ಹೊಲದಲ್ಲಿ ಮನೆಯಲ್ಲಿ ದುಡಿಯುವುದಲ್ಲದೆ ಕುಡುಕ ಗಂಡನ ಹೊಡೆತ, ಬಡಿತಗಳನ್ನು ಅವಳು ಸಹಿಸಿಕೊಳ್ಳಬೇಕಾಗುತ್ತದೆ. ಆದರೆ ಕೇವಲ ಕೂಲಿ ಕಾರ್ಮಿಕ ವರ್ಗದವರಲ್ಲಿ ಮಾತ್ರ ಕುಡಿತದ ಚಟವಿರುವ ಗಂಡಸರಿದ್ದಾರೆ

ಎಂದಲ್ಲ. ಮಧ್ಯಮ, ಮೇಲ್ಮಧ್ಯಮ ಮತ್ತು ಮೇಲ್ವರ್ಗದವರಲ್ಲೂ ಕುಡಿಯುವವರಿದ್ದಾರೆ. ಆದರೆ ಕೆಲವರು ಹವ್ಯಾಸಕ್ಕಾಗಿ ಕುಡಿದರೆ ಕೆಲವರು ತಮ್ಮೊಳಗಿನ ಅಸಮಾಧಾನಗಳನ್ನು, ನೋವುಗಳನ್ನು ಮೊದಲಾದವುಗಳನ್ನು ಮರೆಯುವುದಕ್ಕಾಗಿ ಕುಡಿಯುತ್ತಾರೆ. ಹೀಗೆ ಕುಡಿದ ವೇಳೆಯಲ್ಲಿ ಕೆಲವರು ತಮ್ಮ ಪಾಡಿಗೆ ತಾವು ನಿರ್ಲಿಪ್ತವಾಗಿದ್ದರೆ, ಇನ್ನು ಕೆಲವರು ಆ ಮತ್ತಿನ ಸ್ಥಿತಿಯಲ್ಲಿ ಹೆಂಡತಿ ಮಕ್ಕಳೊಂದಿಗೆ ಜಗಳಕ್ಕಿಳಿಯುವುದು ಕಂಡುಬರುತ್ತದೆ. ಮಧ್ಯಮ ಮತ್ತು ಮೇಲ್ವರ್ಗದವರಲ್ಲಿ ಗಂಡಸು ಕುಡಿದು ತನ್ನ ಹೆಂಡತಿಯನ್ನು ಹೊಡೆದರೆ ಅದು ಕುಟುಂಬದ ಮರ್ಯಾದೆಗೆ ಧಕ್ಕೆ ತರುವ ವಿಷಯವೆಂದು ಭಾವಿಸಲಾಗಿದ್ದುದರಿಂದ ಹೊಡೆಸಿಕೊಂಡ ಹೆಂಗಸು ಅದನ್ನು ಬಹಿರಂಗಪಡಿಸದೆ ಸಹಿಸಿಕೊಳ್ಳುವುದನ್ನು ಕಾಣುತ್ತೇವೆ. ಆದರೆ ಕೂಲಿ ಮಾಡುವ ವರ್ಗದಲ್ಲಿ ಈ ರೀತಿಯ ಘಟನೆಗಳು ಕಣ್ಣಿಗೆ ಕಾಣುವಂತೆ ನಡೆಯುತ್ತಿರುತ್ತವೆ. ಮತ್ತು ಈ ವರ್ಗದ ಹೆಂಗಸರು ತಮ್ಮ ಕೌಟುಂಬಿಕ ಸಮಸ್ಯೆಗಳನ್ನು ಮುಕ್ತವಾಗಿ ಇತರರೊಂದಿಗೆ ಹಂಚಿಕೊಳ್ಳುವುದನ್ನು ಅಥವಾ ಅಭಿವ್ಯಕ್ತಿಸಿಕೊಳ್ಳುವುದನ್ನು ಕಾಣುತ್ತೇವೆ.

ನಮ್ಮಲ್ಲಿ ಮಹಿಳೆ ದುಡಿದರೆ ಆರ್ಥಿಕವಾಗಿ ಸ್ವಾವಲಂಬಿಯಾಗುತ್ತಾಳೆ ಎನ್ನುವ ಸಾರ್ವತ್ರಿಕ ವಿಚಾರ ಒಂದಿದೆ. ಆದರೆ ದುಡಿಯುವ ಎಲ್ಲಾ ಮಹಿಳೆಯರಿಗೂ ಆರ್ಥಿಕವಾಗಿ ಸ್ವಾವಲಂಬಿಗಳಾಗುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ದುಡಿಯುವ ಎಷ್ಟೋ ಮಹಿಳೆಯರಿಗೆ ತಮ್ಮ ದುಡಿಮೆಯಿಂದ ಬಂದ ಹಣವನ್ನು ಖರ್ಚು ಮಾಡುವ ಸ್ವಾತಂತ್ರ್ಯ ಇರುವುದಿಲ್ಲ. ತಮ್ಮ ದುಡಿಮೆಯ ಹಣವನ್ನು ಮನೆಯಲ್ಲಿ ಗಂಡನ ಕೈಗೆ ತಂದುಕೊಡುವ ಉದಾಹರಣೆಗಳು ನಮ್ಮಲ್ಲಿ ಹಲವಾರು ಇವೆ. ಅಂದರೆ ತನ್ನ ದುಡಿಮೆಯ ಹಣವನ್ನು ಖರ್ಚು ಮಾಡುವ ಅಧಿಕಾರ ಮಹಿಳೆಗೆ ಇರುವುದಿಲ್ಲ. ಹಾಗೊಂದು ವೇಳೆ ಅವಳಿಗೆ ಖರ್ಚು ಮಾಡುವ ಅವಕಾಶವಿದ್ದಾಗಲೂ ಅವಳು ತನ್ನ ದುಡಿಮೆಯ ಹಣವನ್ನು ಕುಟುಂಬದ ಹಿತಾಸಕ್ತಿಗಾಗಿ ಮನೆಯ ನಿರ್ವಹಣೆಗಾಗಿ ಬಳಸುತ್ತಾಳೆಯೇ ಹೊರತು ಸ್ವಹಿತಕ್ಕಾಗಿ ಬಳಸಿಕೊಳ್ಳುವುದಿಲ್ಲ. ಹಾಗೊಂದು ವೇಳೆ ತನ್ನ ಸ್ವಹಿತಕ್ಕಾಗಿ ಉಪಯೋಗ ಮಾಡಿಕೊಂಡಿದ್ದರೂ ಅದರ ಪ್ರಮಾಣ ಅತ್ಯಲ್ಪವಾಗಿರುತ್ತದೆ. ಹೀಗೆ ಬಹುಪಾಲು ಬಡ ಕೃಷಿ ಕೂಲಿ ಮಹಿಳೆಯರು ತಮ್ಮ ಕೂಲಿಯ ಹಣವನ್ನು ಗಂಡನ ಕುಡಿತದ ಚಟಕ್ಕೂ ಮಕ್ಕಳ ಲಾಲನೆ, ಪಾಲನೆಗೂ, ಮನೆಯ ನಿರ್ವಹಣೆಗೂ ವ್ಯಯಿಸುತ್ತಿರುವುದು ಕಂಡುಬರುತ್ತದೆ.

ಕೆಲವು ಕೃಷಿ ಕುಟುಂಬದಲ್ಲಿ ಪುರುಷನಿದ್ದಾಗ್ಯೂ ಕುಟುಂಬದ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರವಹಿಸಿ ಗಂಡ ಹಿನ್ನೆಲೆಯಲ್ಲಿದ್ದರೆ ಅಥವಾ ಹೆಣ್ಣನ್ನು ಸಮಾನತೆಯಿಂದ ಕಂಡು ಅವಳಿಗೆ ಕುಟುಂಬದಲ್ಲಿ ಮುಕ್ತ ಅವಕಾಶ ನೀಡಿದರೆ ಅದನ್ನು ಅಕ್ಕ-ಪಕ್ಕದವರು ಇಷ್ಟಪಡುವುದಿಲ್ಲ. ಅಂತಹ ಪುರುಷನನ್ನು ಹೆಂಡತಿಯ ಗುಲಾಮ ಎಂದೋ, ಹೆಂಡತಿಯ ಛೇಲಾ ಎಂದೋ, ಹೆಂಡತಿ ಸೆರಗಿನ ಹಿಂದೆ ಅಡ್ಡಾಡುವವನೆಂದು ಕರೆದು ಆ ಪುರುಷನನ್ನು ಅವಮಾನಗೊಳಿಸಲಾಗುತ್ತದೆ.

ಅಂದರೆ ಅವರ ಈ ಮನೋಭಾವದ ಹಿಂದೆ ಮಹಿಳೆಗೆ ಕಲ್ಪಿಸುವ ಸಮಾನತೆಯನ್ನು ಹತ್ತಿಕ್ಕುವ ಹುನ್ನಾರ ಅಡಗಿರುತ್ತದೆ. ಮಹಿಳೆಯರು ವ್ಯವಸ್ಥೆಯ ಭಾಗವಾಗಿರುವುದರಿಂದ ವ್ಯವಸ್ಥೆಯ ಮೌಲ್ಯಗಳನ್ನೆಲ್ಲ ಒಪ್ಪಿಕೊಂಡವರಾಗಿದ್ದು ಅವರು ತಾಳುವ ನಿಲುವುಗಳು ಮತ್ತು ಆಲೋಚನಾ ಕ್ರಮ ಕೂಡ ಪುರುಷನಿಷ್ಠವಾಗಿಯೇ ಇರುತ್ತವೆ. ಹೀಗೆ ಕುಟುಂಬದಲ್ಲಿ ಪ್ರತಿನಿತ್ಯವು ಮಹಿಳೆ ಪುರುಷನಿಗೆ ಅಧೀನವಾಗಿಯೇ ಇರಬೇಕೆಂದು ನಿರೀಕ್ಷೆಗಳಿರುತ್ತವೆ. ಆ ಕಾರಣಕ್ಕಾಗಿಯೇ ಮಹಿಳೆ ಪುರುಷನಂತೆ ಸಮಾನವಾಗಿ ಬದುಕುವುದನ್ನು ಅವರು ಸಹಿಸುವುದಿಲ್ಲ. ಹಾಗೆ ಮಹಿಳೆ ಮುನ್ನಡೆಗೆ ಬಂದ ಸಂದರ್ಭಗಳಲ್ಲಿ ಮಹಿಳೆ ಗಂಡು ಬೀರಿಯಾಗಿಯೋ ಗಯ್ಯಾಳಿಯಾಗಿಯೋ ಕರೆಯಲ್ಪಡುತ್ತಾಳೆ. ಒಟ್ಟಿನಲ್ಲಿ ಕುಟುಂಬದಲ್ಲಿ ಪುರುಷನಿಗೆ ಪ್ರಾಶಸ್ತ್ಯವಿದ್ದಷ್ಟು ಮಹಿಳೆಗೆ ಇದ್ದಂತಿಲ್ಲ. ಕುಟುಂಬದಲ್ಲಿ ಮಹಿಳೆ ಮತ್ತು ಪುರುಷರ ನಡುವೆ ಭಿನ್ನತೆಗಳಿರುವುದು ಕಂಡುಬರುತ್ತದೆ. ಈ ಎಲ್ಲಾ ಅಂಶಗಳಿಂದ ಕೌಟುಂಬಿಕ ವಲಯದಲ್ಲಿ ಮಹಿಳೆ ಹೆಚ್ಚು ಸ್ವಾಯತ್ತತೆ ಮತ್ತು ಸಮಾನತೆಗಳಿಲ್ಲದಿರುವುದು ಸ್ಪಷ್ಟವಾಗುತ್ತದೆ.

**೨.೭. ಮನೆಯ ಮಾದರಿ :**

ತಮಟಕಲ್ಲು ಗ್ರಾಮವು ಗುಡ್ಡ-ಬೆಟ್ಟಗಳಿಂದ, ಹೊಲ, ತೋಟಗಳಿಂದ ಸುತ್ತುವರೆದಿದ್ದು, ಗ್ರಾಮದಲ್ಲಿ ಮನೆಗಳು ಒಂದರ ಪಕ್ಕದಲ್ಲಿ ಒಂದನ್ನು ವ್ಯವಸ್ಥಿತವಾಗಿ ಕಟ್ಟಲಾಗಿದೆ. ಈ ಪ್ರದೇಶದಲ್ಲಿ ವಿವಿಧ ಬಗೆಯ ಮನೆಗಳನ್ನು ಕಾಣಬಹುದಾಗಿದೆ. ಹಿಂದೆ ಇರುವ ಹಾಗೇ ಈಗ ಗುಡಿಸಲುಗಳನ್ನು ಕಾಣಲು ಸಾಧ್ಯವಿಲ್ಲ. ಕಾರಣ ನಗರ ಪ್ರದೇಶಗಳ ಪ್ರಭಾವ ಮತ್ತು ಆಧುನಿಕತೆಯಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಬದಲಾವಣೆ ಕಂಡುಬರುತ್ತಿದೆ. ಗ್ರಾಮದಲ್ಲಿನ ಗೃಹಗಳನ್ನು ನಿರ್ಮಿಸುವಾಗ ಯಾವುದೇ ಯೋಜನೆ, ಶುಚಿತ್ವಕ್ಕೆ ಮಹತ್ವವನ್ನು ನೀಡುವುದು ಬಹಳ ಅಪರೂಪ. ಗ್ರಾಮದಲ್ಲಿ ಮನೆಗಳು ಸಾಮಾನ್ಯವಾಗಿ ಕಡಪಾ ಕಲ್ಲಿನ, ಮಣ್ಣಿನ, ಕೆಂಪು ಹೆಂಚಿನ ಮೇಲ್ಛಾವಣೆಯನ್ನು ಹೊಂದಿರುವ ಸಗಣಿಯಿಂದ ಸಾರಿಸಿದ ನೆಲ, ಸಿಮೆಂಟಿನ ನೆಲ, ಕಲ್ಲಿನ ನೆಲ ಹೊಂದಿರುವ ಮಾಳಿಗೆ ಮನೆಗಳನ್ನು ಹೆಚ್ಚಾಗಿ ಕಾಣಬಹುದು.

ಮನೆಯ ಕಟ್ಟಡವು ಬಹಳ ಮಟ್ಟಿಗೆ ಜನರ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿದೆ. ಆರ್ಥಿಕವಾಗಿ ಸಬಲರಾಗಿರುವ ಶ್ರೀಮಂತರು ಮನೆಗಳ ನಿರ್ಮಾಣದಲ್ಲಿ ಆರ್.ಸಿ.ಸಿ. ಮನೆಗಳನ್ನು ವೈಭವ ಪೂರ್ಣವಾಗಿ ಅಲಂಕಾರಗಳು ಸಹಜವಾಗಿ ಕಂಡುಬರುತ್ತವೆ. ಮನೆಯನ್ನು ನಗರ ಪ್ರದೇಶಗಳಲ್ಲಿ ಕಟ್ಟಿಸುವಂತೆ ವ್ಯವಸ್ಥಿತವಾಗಿ ಮನೆಯ ಒಳಗೆ ಅಡುಗೆ ಮನೆ, ದೇವರ ಮನೆ, ಒಂದು ವಿಶೇಷ ಕೋಣೆ, ಒಂದು ವಿಶಾಲವಾದ ಹಜಾರ, ಬಚ್ಚಲ ಕೋಣೆಯನ್ನು ಕಟ್ಟಿಸಿಕೊಂಡಿರುತ್ತಾರೆ. ಹಳ್ಳಿಯಲ್ಲಿ ಎಷ್ಟೇ ಶ್ರೀಮಂತರಿದ್ದರು ಶೌಚಾಲಯವನ್ನು ಮಾತ್ರ ಮನೆಯ ಒಳಗಡೆ ಕಟ್ಟಿಸುವುದಿಲ್ಲ. ಮನೆಯ ಹೊರಗಡೆಯೇ ಕಟ್ಟಿಸುತ್ತಾರೆ. ಮನೆಯ ಒಳಗಡೆ ದೇವರ ಮನೆ ಇರುತ್ತದೆ. ಗಲೀಜನ್ನು ಮಾಡಲು ಮನೆಯ ಒಳಗಡೆ ಏಕೆ ಕಟ್ಟಿಸಬೇಕು ಎಂದೆಲ್ಲ

ಯೋಚನೆ ಮಾಡಿ ಹೊರಗಡೆಯೇ ಕಟ್ಟಿಸುತ್ತಾರೆ. ಇನ್ನು ಮಧ್ಯಮ ವರ್ಗದವರು ಸರ್ಕಾರದಿಂದ ಸಿಗುವ ಅನುದಾನಗಳಡಿ ಚಿಕ್ಕದಾಗಿ ಒಂದು ಅಡುಗೆ ಮನೆ, ಒಂದು ಹಜಾರ, ಮನೆಯ ಹೊರಗಡೆ ಸ್ನಾನದ ಕೊಠಡಿ, ಶೌಚಾಲಯವನ್ನು ಕಟ್ಟಿಸಿಕೊಳ್ಳುತ್ತಾರೆ. ಗ್ರಾಮದಲ್ಲಿ ಮಾಳಿಗೆ ಮನೆಗಳು, ಕೆಂಪು ಹೆಂಚಿನ ಮನೆಗಳು, ಶೀಟಿನ ಮನೆಗಳು ಹೆಚ್ಚಾಗಿ ಕಂಡುಬರುತ್ತವೆ. ಕಲ್ಲಿನ ಗೋಡೆಗಳಿಗೆ ಬದಲಾಗಿ ಸಿಮೆಂಟಿನ ಕಲ್ಲು ಅಥವಾ ಇಟ್ಟಿಗೆಯಿಂದ ಗೋಡೆಗಳನ್ನು ಕಟ್ಟುತ್ತಾರೆ.

ಗ್ರಾಮ ಪಂಚಾಯಿತಿಯ ವತಿಯಿಂದ ಇಂದಿರಾ ಆವಾಸ ಯೋಜನೆಯ ಮೂಲಕ ಮನೆ ಇಲ್ಲದ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಒಂದು ಲಕ್ಷದ ಅರವತ್ತು ಸಾವಿರ ರೂಗಳನ್ನು ಅನುದಾನ ನೀಡಲಾಗುತ್ತಿದೆ. ಈ ಯೋಜನೆ ಅಡಿಯಲ್ಲಿ ಎಲ್ಲಾ ಮನೆಗಳಿಗೂ ಸಿಮೆಂಟಿನ ಶೀಟುಗಳಿಂದ ಮತ್ತು ಸಿಮೆಂಟಿನ ಕಲ್ಲಿನಿಂದ ನಿರ್ಮಾಣ ಮಾಡಿದ ಮನೆಗಳೇ ಹೆಚ್ಚಾಗಿವೆ. ಇಂದಿರಾ ಆವಾಸ ಯೋಜನೆ ಮಾತ್ರವಲ್ಲದೆ, ಅಂಬೇಡ್ಕರ್ ವಸತಿ ಯೋಜನೆಯಡಿ ಒಂದು ಲಕ್ಷದ ಎಂಭತ್ತು ಸಾವಿರ, ಬಸವ ವಸತಿ ಯೋಜನೆಯಡಿ ಒಂದು ಲಕ್ಷದ ಎಂಭತ್ತು ಸಾವಿರ, ವಾಲ್ಮೀಕಿ ಯೋಜನೆಯಡಿ ಒಂದು ಲಕ್ಷದ ಅರವತ್ತು ಸಾವಿರ ಅನುದಾನ ನೀಡುವ ಮೂಲಕ ಗ್ರಾಮ ಪಂಚಾಯಿತಿಯ ವತಿಯಿಂದ ಗ್ರಾಮದ ನೈರ್ಮಲ್ಯದ ವತಿಯಿಂದ ಎಲ್ಲರಿಗೂ ಮನೆಗಳು ಮತ್ತು ಸುಲಭ ಶೌಚಾಲಯದ ವ್ಯವಸ್ಥೆಯನ್ನು ಒದಗಿಸಿದ್ದಾರೆ. ಮತ್ತು ಇತ್ತೀಚಿಗೆ ಮೋದಿ ಸರ್ಕಾರದ ಸ್ವಚ್ಛ ಭಾರತ ಅಭಿಯಾನದ ಅಡಿ ಶೌಚಾಲಯಗಳನ್ನು ನಿರ್ಮಿಸುವವರಿಗೆ ಎಸ್.ಸಿ. ಎಸ್.ಟಿಗೆ ೧೫ ಸಾವಿರ ಜನರಲ್ ಕ್ಯಾಸ್ಟಿಗೆ ೧೨ ಸಾವಿರ ಅನುದಾನ ನೀಡಿದರೂ ಇನ್ನೂ ಜನ ಬಯಲು ಶೌಚಾಲಯವನ್ನು ಆಶ್ರಯಿಸುತ್ತಾರೆ.

ಈ ರೀತಿಯಾಗಿ ಸರ್ಕಾರ ಹಲವು ಯೋಜನೆಗಳ ಮೂಲಕ ಗ್ರಾಮೀಣ ಜನರಿಗೆ ಮನೆಯನ್ನು ಕಟ್ಟಿಸಿಕೊಳ್ಳಲು ಸವಲತ್ತುಗಳನ್ನು ಒದಗಿಸಿಕೊಟ್ಟಿರುವುದರಿಂದ ಹಿಂದೆ ಕಲ್ಲು ಮತ್ತು ಮಣ್ಣಿನ ಗೋಡೆಗಳಿಂದ ಕಟ್ಟುತ್ತಿದ್ದ, ಬಿದಿರಿನ, ಬೇವಿನ ಮರವನ್ನು ಉಪಯೋಗಿಸಿ ಮೇಲ್ಛಾವಣಿ ಹಾಕುತ್ತಿದ್ದ ಮನೆಗಳ ಬದಲಾಗಿ ಸಿಮೆಂಟಿನಿಂದ ಕಟ್ಟಿದ ಗೋಡೆಗಳು ಅಚ್ಚಾದ ಇಟ್ಟಿಗೆಗಳನ್ನು ಉಪಯೋಗಿಸಿದ ಮನೆ, ಸಿಮೆಂಟಿನಿಂದ ಮಾಡಿದ ಸೀಟುಗಳನ್ನು (ತಗಡು) ಮನೆಯ ಮೇಲ್ಛಾವಣಿಗೆ ಬಳಸುವ ಮನೆಗಳು ಹೆಚ್ಚಾಗಿವೆ. ಕಾರಣ ಇದು ಕೆಲಸವು ಬೇಗ ಮುಗಿಯುತ್ತದೆ, ಬಾಳಿಕೆ ಬರುತ್ತದೆ.

ಹಿಂದಿನ ಕಾಲದಲ್ಲಿ ಒಂದೊಂದು ಸಮುದಾಯದ ಜನರು ಒಂದೊಂದು ಪ್ರತ್ಯೇಕ ಬೀದಿಗಳಲ್ಲಿ ವಾಸಿಸುತ್ತಿದ್ದರು. ಆದರೆ ಇಂದು ಅಂತಹ ಪರಿಸ್ಥಿತಿ ಬದಲಾಗಿದೆ. ಪರಿಶಿಷ್ಟರ ಬೀದಿಗಳು ಊರ ಹೊರಗೆ ಇರುತ್ತಿದ್ದವು. ಈಗ ಎಲ್ಲ ಮನೆಗಳು ಅಕ್ಕಪಕ್ಕದಲ್ಲಿ ನಿರ್ಮಾಣಗೊಂಡಿವೆ. ಇದು ಬದಲಾವಣೆಯತ್ತ ಸಾಗುತ್ತಿರುವ ಸೂಚನೆಯಾದರೂ ತಮಟಕಲ್ಲಿನಲ್ಲಿ ಪ್ರಸ್ತುತ ದಿನದಲ್ಲಿಯೂ ಸಹ ಪರಿಶಿಷ್ಟ ಜಾತಿಯವರು ಊರಿನ ಹೊರಭಾಗದಲ್ಲಿಯೇ ಮನೆಗಳನ್ನು ಕಟ್ಟಿಕೊಂಡಿರುವುದನ್ನು

ಕಾಣಬಹುದು. ಏನೇ ಬದಲಾವಣೆಯಾದರೂ ಮನುಷ್ಯನ ಸ್ಥಿತಿ ಮಾತ್ರ ಬದಲಾವಣೆ ಆಗದೇ ಇರುವುದನ್ನು ನೋಡಬಹುದು. ಇವರು ನಮ್ಮ ಸಮಾನರು ಎಂದು ಒಪ್ಪಿಕೊಳ್ಳುವ ಮನಃಸ್ಥಿತಿ ಮಿಕ್ಕ ಸಮುದಾಯಕ್ಕೆ ಇಲ್ಲ. ಇವರು ನಮಗಿಂತ ಕೀಳು, ನಮ್ಮ ಹಿಡಿತದಲ್ಲಿ ಇರಬೇಕು ಎನ್ನುವ ಮನೋಧೋರಣೆಯೇ ಇಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

**ಆಹಾರ ಪದ್ಧತಿ :**

'ಹುಟ್ಟಿಸಿದ ದೇವರು ಹುಲ್ಲು ಮೇಯಿಸೊಲ್ಲ' ಎನ್ನುವ ಜನಪದರ ನಾಣ್ನುಡಿಯಂತೆ ಹುಟ್ಟಿದ ಪ್ರತಿಯೊಬ್ಬ ಮನುಷ್ಯನಿಗೆ ಆಹಾರ ಅಗತ್ಯ. ಹಸಿವೆಯನ್ನು ನಿವಾರಿಸಿಕೊಳ್ಳಲು ಆಹಾರ ಸೇವಿಸುತ್ತಾನೆ. ಭೂಮಿಯ ಮೇಲೆ ಮನುಷ್ಯ ವಾಸಿಸಲು ಗಾಳಿ, ನೀರು, ಬೆಳಕು ಹೇಗೆ ಅವಶ್ಯವೋ ಹಾಗೇ ಆಹಾರವು ಅತಿ ಮುಖ್ಯವಾಗಿ ಬೇಕು. ಸರ್ವಜ್ಞ ಕವಿ ಹೇಳುವ ಹಾಗೆ "ಅನ್ನ ದೇವರ ಮುಂದೆ ಇನ್ನು ದೇವರಿಲ್ಲ" ಅನ್ನವು ಇರುವ ತನಕ ಪ್ರಾಣವು ಜಗದೊಳಗೆ ಅನ್ನವೇ ದೈವ ಸರ್ವಜ್ಞ ಎಂದಿದ್ದಾರೆ. ಮಾನವ ಬೆಂಕಿಯ ಅವಿಷ್ಕಾರ ಮಾಡುವುದಕ್ಕೂ ಮೊದಲು ಹಸಿಯಾದ ಆಹಾರ ಪದಾರ್ಥಗಳನ್ನು ಸೇವಿಸುತ್ತಿದ್ದ ಬೆಂಕಿಯ ಆವಿಷ್ಕಾರದ ಮೇಲೆ ರುಚಿಯ ಬೆನ್ನು ಹತ್ತಿ ಬಗೆ ಬಗೆಯ ಅಡುಗೆ ಮಾಡಿಕೊಳ್ಳುತ್ತಾ ವಿವಿಧ ರೀತಿಯ ಅಡುಗೆ ಪದಾರ್ಥಗಳನ್ನು ಕಂಡುಹಿಡಿದು ಬೇಯಿಸಿಕೊಂಡು ತಿನ್ನುವುದನ್ನು ಕಲಿತ. ಹೀಗೆ ಅಡುಗೆ ಅಥವಾ ಆಹಾರ ವ್ಯವಸ್ಥೆ ವ್ಯಕ್ತಿಯಿಂದ ವ್ಯಕ್ತಿಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತಾ ವಿವಿಧ ಆಹಾರ ಪದಾರ್ಥಗಳು ಬೆಳಕಿಗೆ ಬಂದಿವೆ.

ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಮುದ್ದೆ, ಅನ್ನ, ಸಾಂಬಾರು ಆಹಾರ ಪದ್ಧತಿಯಾಗಿದೆ. ಪ್ರಸ್ತುತ ಅಧ್ಯಯನಕ್ಕೊಳಪಡಿಸಿರುವ ಪ್ರದೇಶವು ದಕ್ಷಿಣ ಕರ್ನಾಟಕಕ್ಕೆ ಸೇರಿರುವುದರಿಂದ ಇಲ್ಲಿಯೂ ಸಹ ಪ್ರತಿ ದಿನ ಮುದ್ದೆ, ಅನ್ನ ಹೆಚ್ಚಾಗಿ ಮಾಡುವುದನ್ನು ನೋಡಬಹುದು. ಮತ್ತು ಇಲ್ಲಿ ರಾಗಿ, ಜೋಳ, ಗೋದಿ, ಈರುಳ್ಳಿ, ಮೆಕ್ಕೆಜೋಳ ಹೆಚ್ಚಾಗಿ ಬೆಳೆಯುವ ಬೆಳೆಯಾಗಿದ್ದು, ರಾಗಿ ಮುದ್ದೆ, ಚಪಾತಿಗಳನ್ನು ಹೆಚ್ಚಾಗಿ ಆಹಾರ ಪದಾರ್ಥವಾಗಿ ಉಪಯೋಗಿಸುತ್ತಾರೆ. ಬಡವ–ಬಲ್ಲಿದ, ನಗರ–ಗ್ರಾಮಗಳೆಂಬ ತಾರತಮ್ಯತೆಗಳಿಲ್ಲದೆ ಎಲ್ಲಾ ಕಾಲದಲ್ಲೂ ಎಲ್ಲಾ ಸಂದರ್ಭದಲ್ಲೂ ಬಳಸುವ ಆಹಾರ ಮತ್ತು ಆರೋಗ್ಯಕ್ಕೆ ಉತ್ತಮವಾದದ್ದು. ಪ್ರಸ್ತುತ ಪ್ರದೇಶದಲ್ಲಿ ಸಸ್ಯಹಾರ ಪದ್ಧತಿ ಮತ್ತು ಮಾಂಸಹಾರ ಪದ್ಧತಿ ಎರಡು ಕಂಡುಬರುತ್ತದೆ. ದಿನನಿತ್ಯ ರಾಗಿಮುದ್ದೆ ಜೊತೆ ಸಾಂಬಾರು ಮಾಡಲು ಉಪಯೋಗಿಸುವ ಧಾನ್ಯಗಳೆಂದರೆ ಹುರುಳಿಕಾಳು, ಕಡಲೆಕಾಳು, ತೊಗರಿಬೇಳೆ, ಅಲಸಂದಿ ಮುಂತಾದ ದ್ವಿದಳ ಧಾನ್ಯಗಳ ಜೊತೆಗೆ ತಾವೇ ಸ್ವತಃ ಹೊಲಗಳಲ್ಲಿ ಬೆಳೆಗಳ ಮಧ್ಯೆ ಹಾಕಿದ ತರಕಾರಿಗಳನ್ನು ಬದನೆಕಾಯಿ, ಮೆಣಸಿನ ಕಾಯಿ, ಟೊಮೊಟೋ, ಪಡವಲಕಾಯಿ, ಚುಕ್ಕಡಿಕಾಯಿ, ಹಾಗಲಕಾಯಿ, ಬೀಟ್‌ರೂಟ್, ಪಾಲಕ್‌ಸೊಪ್ಪು, ಮೆಂತೆ, ಸಬ್ಬಕ್ಕಿಸೊಪ್ಪು, ಬೆರಿಕೆ ಸೊಪ್ಪು ಮುಂತಾದ ತರಕಾರಿಗಳನ್ನು ಸಾಂಬಾರು ಮಾಡಲು ಉಪಯೋಗಿಸುತ್ತಾರೆ. ಇಲ್ಲಿ

ಜನಪದರು ತಮ್ಮ ಹೊಲದಲ್ಲಿ ಬೆಳೆ ಇರುವ ಸಂದರ್ಭದಲ್ಲಿ ಎಲ್ಲ ತರಕಾರಿಗಳನ್ನು ಉಪಯೋಗಿಸುತ್ತಾರೆ. ಬೇಸಿಗೆಯಲ್ಲಿ ಬೆಳೆ ಇರದೇ ಇರುವ ಸಂದರ್ಭದಲ್ಲಿ ದ್ವಿದಳ ಕಾಳುಗಳನ್ನು ನೆನೆಸಿ ಮೊಳಕೆ ಬರಿಸಿ ಸಾಂಬಾರು ಮಾಡಿಕೊಳ್ಳುವುದರ ಜೊತೆಗೆ, ವಾರಕ್ಕೊಮ್ಮೆ ಸಂತೆ ಮಾಡುತ್ತಾರೆ. ಸಂಜೆ ಸಮಯ ಕೆಲವರು ಮತ್ತೆ ಮುದ್ದೆ ಮಾಡಿದರೆ ಮತ್ತೆ ಕೆಲವರು ಚಪಾತಿ, ಶೇಂಗಾ, ಚಟ್ನಿಯನ್ನು ಅಥವಾ ಬೆಳಗ್ಗೆ ಮಾಡಿದ ಸಾಂಬಾರನ್ನೇ ರಾತ್ರಿ ಬಳಸುತ್ತಾರೆ.

ತಮಟಕಲ್ಲು ಪರಿಸರದಲ್ಲಿ ದಿನನಿತ್ಯ ಮಾಡುವ ಅಡುಗೆಗಳಿಗಿಂತಲೂ ವಿಶೇಷ ಸಂದರ್ಭಗಳಲ್ಲಿ ಹಬ್ಬ-ಹರಿದಿನಗಳಲ್ಲಿ, ಮದುವೆ, ತಿಥಿಗಳಲ್ಲಿ, ನಾಮಕರಣ ಮುಂತಾದ ಸಂದರ್ಭದಲ್ಲಿ ವಿಶೇಷವಾಗಿ ಅಡುಗೆ ತಯಾರು ಮಾಡುತ್ತಾರೆ. ಈ ಸಂದರ್ಭಗಳಲ್ಲಿ ಮಾಂಸಹಾರಿ ಮತ್ತು ಸಸ್ಯಹಾರಿ ಎರಡೂ ಬಗೆಯ ಅಡುಗೆಗಳನ್ನು ಮಾಡುತ್ತಾರೆ. ಯುಗಾದಿ, ಸಂಕ್ರಾಂತಿ, ದೀಪಾವಳಿ, ಶಿವರಾತ್ರಿ, ಮಾರಮ್ಮ, ಶ್ರಾವಣಮಾಸ ಮುಂತಾದ ಸಾಂಪ್ರದಾಯಿಕ ಹಬ್ಬಗಳಲ್ಲಿ ಸಿಹಿ ಅಡುಗೆಯ ಜೊತೆಗೆ ಮಾಂಸದ ಅಡುಗೆಯನ್ನು ಮಾಡುತ್ತಾರೆ.

**ಸಿಹಿ ಅಡುಗೆಗಳು :**

ಹಬ್ಬದ ಸಂದರ್ಭದಲ್ಲಿ ಮನೆಯಲ್ಲಿ ನಡೆಯುವ ಜೀವನಾವರ್ತನ ಆಚರಣೆ ಸಂದರ್ಭದಲ್ಲಿ ಸಸ್ಯಹಾರ ಮತ್ತು ಮಾಂಸಹಾರದ ಅಡುಗೆಗಳನ್ನು ತಯಾರು ಮಾಡುತ್ತಾರೆ. ಮೊದಲ ದಿನ ಸಸ್ಯಹಾರವನ್ನು ಮಾಡಿದರೆ ಮಾರನೆಯ ದಿನ ಮಾಂಸಹಾರವನ್ನು ಮಾಡುತ್ತಾರೆ. ವಿಶೇಷ ದಿನಗಳಲ್ಲಿ ಸಿಹಿ ಅಡಿಗೆ ಭೋಜನ ಸಾಮಾನ್ಯವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಹೋಳಿಗೆ, ಪಾಯಸ, ಶ್ಯಾವಿಗೆ ಪಾಯಸ, ಬೂಂದಿ ಮೊದಲಾದ ಸಿಹಿ ತಿಂಡಿಗಳನ್ನು ಮಾಡುತ್ತಾರೆ. ಹೋಳಿಗೆ, ಪಾಯಸ, ಹಾಲು, ಬಾಳೆಹಣ್ಣು, ಸಿಹಿ ಅಡುಗೆಗಳಲ್ಲಿ ಸಾಮಾನ್ಯವಾಗಿರುತ್ತದೆ.

ಇತ್ತೀಚಿನ ದಿನಗಳಲ್ಲಿ ನಾಗರೀಕತೆಯು ಬೆಳೆದಂತೆಲ್ಲಾ ನಗರಗಳ ಪ್ರಭಾವದಿಂದ ಊಟ ತಿಂಡಿಗಳಲ್ಲಿ ಬದಲಾವಣೆಗಳಾಗುತ್ತಿವೆ. ಹಿಂದೆ ಹಳ್ಳಿಗಳಲ್ಲಿ ವರ್ಷವಿಡೀ ರಾಗಿ ಮುದ್ದೆ, ನವಣಕ್ಕಿ, ಅನ್ನ, ಸಾಂಬಾರು ದಿನನಿತ್ಯದ ಆಹಾರವಾಗಿತ್ತು. ಆದ್ದರಿಂದ ಜನಪದರು ಹಬ್ಬ-ಹರಿದಿನಗಳಲ್ಲಾದರು ವಿಶೇಷವಾಗಿ ತಿಂಡಿ ಮಾಡಿಕೊಂಡು ರುಚಿಯಾಗಿ ತಿನ್ನುವ ಉದ್ದೇಶದಿಂದ ಹಬ್ಬಗಳಲ್ಲಿ ವಿಶೇಷವಾಗಿ ತಿಂಡಿ-ಸಿಹಿ ಅಡುಗೆಯನ್ನು ಮಾಡಲು ಪ್ರಾರಂಭಿಸಿದರು. ಉಳ್ಳವರು ಮಾತ್ರ ತಿಂಡಿ ತಿನ್ನಿಸು, ಮಾಡಿಕೊಳ್ಳುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಹಳ್ಳಿಯ ಜನರು ಸಹ ತಮಗೆ ಬೇಕೆನಿಸಿದ ತಿಂಡಿ ತಿನಿಸುಗಳನ್ನು ಮಾಡಿಕೊಂಡು ತಿನ್ನುತ್ತಾರೆ. ಆಧುನಿಕ ಮತ್ತು ನಗರ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಹಬ್ಬಕ್ಕೋಸ್ಕರವೇ ಕಾಯುವ ಅಗತ್ಯವಿಲ್ಲ. ಇರುವವರೆಗೆ ನಮಗೆ ಹೇಗೆ ಇರಬೇಕೆನಿಸುವುದೋ ಹಾಗೇ ಇರೋಣ ಎನ್ನುವ ಮನೋಧೋರಣೆ ಈಗಿನ ಜನಪದರದು. ದಾಸರು ಹೇಳುವ ಹಾಗೆ ಉದರ ಪೋಷಣೆಗಾಗಿ ವಿಶೇಷ ವೇಷಮಂ. ಎಲ್ಲರು ಮಾಡ್ರುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎನ್ನುವಂತೆ ನಾವು ದುಡಿಯುವುದು ಹೊಟ್ಟೆಗಾಗಿ ಸತ್ತಾಗ ಏನು ಹೊತ್ತುಕೊಂಡು ಹೋಗುವುದಿಲ್ಲ ಎನ್ನುವ ಧೋರಣೆ ಹೊಂದಿರುತ್ತಾರೆ.

ತಮಟಕಲ್ಲು ಜನಪದರು ಹಬ್ಬ-ಹರಿದಿನ, ಜಾತ್ರೆಗಳ ಸಂದರ್ಭದಲ್ಲಿ ಸಿಹಿ ಅಡುಗೆಯಾದ ಮಾರನೆ ದಿನ ಸಿಹಿ ತಿಂದು ನಾಲಿಗೆಯನ್ನು ಸರಿಪಡಿಸಿಕೊಳ್ಳಲು ಕಾರ ತಿನ್ನುವ ಉದ್ದೇಶದಿಂದ ಮಾಂಸದೂಟವನ್ನು ಮಾಡುತ್ತಾರೆ. ತಿಂಗಳಿಗೊಮ್ಮೆಯಾದರು ಮಾಂಸದೂಟವನ್ನು ಮಾಡುತ್ತಾರೆ. ಲಿಂಗಾಯಿತರನ್ನು ಬಿಟ್ಟು ಮಿಕ್ಕ ಎಲ್ಲ ಸಮುದಾಯದವರು ಮಾಂಸಹಾರವನ್ನು ಸೇವಿಸುತ್ತಾರೆ. ಸೋಮವಾರ, ಶನಿವಾರ ಮತ್ತು ತಮ್ಮ ಮನೆದೇವರ ವಾರದಂದು ಜನ ಮಾಂಸವನ್ನು ಭಕ್ಷಿಸುವುದಿಲ್ಲ. ಕೆಲವರು ಎಲ್ಲ ವಾರಗಳಲ್ಲೂ ಮಾಂಸ ತಿನ್ನುತ್ತಾರೆ. ಪ್ರಾಣಿಗಳಾದ ಕುರಿ, ಮೇಕೆ, ಕೋಳಿ, ಹಸು, ಮೊಲ, ಮೀನು, ಕಾಡುಹಂದಿ, ಕೆಲವು ಪಕ್ಷಿಗಳನ್ನು ಸಹ ಮಾಂಸಕ್ಕಾಗಿ ಉಪಯೋಗಿಸುತ್ತಾರೆ. ಈ ಪ್ರದೇಶದಲ್ಲಿ ನಾಯಕ ಸಮುದಾಯದವರ ಮನೆಗಳಲ್ಲಿ ಇನ್ನು ಸಹ ಕೋಳಿಯನ್ನು ಸಾಕುವುದಾಗಲೀ, ಆಹಾರಕ್ಕೂ ಸಹ ಉಪಯೋಗಿಸುವುದಿಲ್ಲ. ತಲೆ ಕಾಲು ಸಾರು ಇಲ್ಲಿನ ಜನರಿಗೆ ತುಂಬ ಪ್ರಿಯವಾದ ಆಹಾರವಾಗಿದೆ.

**ಉಡುಗೆ-ತೊಡುಗೆ :**

ಸಾಂಪ್ರದಾಯಿಕವಾಗಿ ಗಂಡಸರಲ್ಲಿ ರೂಢಿಯಲ್ಲಿರುವ ಉಡುಪುಗಳೆಂದರೆ ಕಚ್ಚೆ ಪಂಚೆ, ನಿಲುವಂಗಿ ಹಾಗೂ ತಲೆಗೆ ರುಮಾಲು ಧರಿಸುತ್ತಾರೆ. ಹೊಲಗದ್ದೆಗಳಲ್ಲಿ ಕೆಲಸ ಮಾಡುವ ಗಂಡಸರು ಪಂಚೆ, ಅರ್ಧ ತೋಳಿನ ಅಂಗಿಯನ್ನು ಧರಿಸುತ್ತಾರೆ. ಯುವಕರು ಮತ್ತು ನೌಕರಿ ಮಾಡುವವರು ಪ್ಯಾಂಟ್ ಶರ್ಟ್‌ಗಳನ್ನು ಬರ್‌ಮೋಡ ಧರಿಸುತ್ತಾರೆ.

ಸ್ತ್ರೀಯರು ಸೀರೆ ಕುಪ್ಪಸಗಳನ್ನು ಧರಿಸುವುದು ಸಾಂಪ್ರದಾಯಿಕವಾಗಿ ರೂಢಿಯಲ್ಲಿದೆ. ವಿಶೇಷ ಸಂದರ್ಭದಲ್ಲಿ ರೇಷ್ಮೆ ಸೀರೆ ಉಡುವುದು ಸಹಜವಾಗಿದೆ. ಹುಡುಗಿಯರು ಬಹುತೇಕವಾಗಿ ಲಂಗ, ಕುಪ್ಪಸ ಧರಿಸುತ್ತಿದ್ದರು. ಆದರೆ ನಾಗರೀಕತೆಯ ಬೆಳವಣಿಗೆಯಿಂದ ಹಿಂದಿನ ಕಾಲಕ್ಕಿಂತ ಪ್ರಸ್ತುತದ ಉಡುಗೆ-ತೊಡುಗೆಗಳಲ್ಲಿ ಸಾಕಷ್ಟು ಬದಲಾವಣೆಯನ್ನು ಕಾಣಬಹುದಾಗಿದೆ. ಹುಡುಗಿಯರು ಮದುವೆಯಾಗುವವರೆಗೂ ಜೀನ್ಸ್‌ಪ್ಯಾಂಟ್, ಟೀಷರ್ಟ್, ಚೂಡಿದಾರ, ಲಂಗ, ಮಿಡಿ, ಫ್ರಾಕ್ ಧರಿಸುತ್ತಾರೆ. ನಂತರ ಸೀರೆ, ನೈಟಿ ಸಾಮಾನ್ಯವಾಗಿ ಧರಿಸುವುದನ್ನು ನೋಡಬಹುದು.

**೨.೮. ನ್ಯಾಯ ವ್ಯವಸ್ಥೆ :**

ಸಮಾಜದಲ್ಲಿ ಮನುಷ್ಯ ನ್ಯಾಯ ನೀತಿಯಿಂದ ಬದುಕಬೇಕು ಎಂದರೆ ನೀತಿ ನಿಯಮಗಳು ಅನಿವಾರ್ಯವಾಗಿ ಬೇಕಾಗುತ್ತದೆ. ಎಷ್ಟು ಕಾನೂನು ನಿಯಮಗಳು ಇದ್ದರೂ ಮನುಷ್ಯ ಒಬ್ಬರಿಗೊಬ್ಬರು ಮೋಸ, ವಂಚನೆ, ದೌರ್ಜನ್ಯ, ಕಳ್ಳತನ ಮಾಡುವುದನ್ನು ನಿಲ್ಲಿಸಿಲ್ಲ. ಆದ್ದರಿಂದ ಅವನಿಗೆ ಶಿಕ್ಷೆಯನ್ನು ಕೊಡುವ ಮೂಲಕ ವ್ಯಕ್ತಿಯನ್ನು ನ್ಯಾಯಯುತವಾಗಿ ಹತೋಟಿಯಲ್ಲಿಡಲು ನ್ಯಾಯ ವ್ಯವಸ್ಥೆ ಅಗತ್ಯವಾಗಿದೆ. ಹಿಂದೆಲ್ಲ ನ್ಯಾಯ ವ್ಯವಸ್ಥೆಯೆನ್ನುವುದು ಊರಿನ ಪಂಚರು ನ್ಯಾಯ ತೀರ್ಮಾನ ಮಾಡುತ್ತಿದ್ದರು. ಅವರು ನೀಡಿದ ತೀರ್ಪು ಅಂತಿಮವಾಗಿರುತ್ತಿತ್ತು. ಯಾರೊಬ್ಬರೂ

ಅದನ್ನು ಟೀಕಿಸುತ್ತಿರಲಿಲ್ಲ, ವಿರೋಧಿಸುತ್ತಿರಲಿಲ್ಲ. ಈ ನ್ಯಾಯ ತೀರ್ಮಾನ ಮಾಡುವ ಗುಂಪಿಗೆ ಅಥವಾ ಸದಸ್ಯರಿಗೆ ಪಂಚಾಯ್ತಿ ಕಟ್ಟೆಯವರು ಹಿರಿಯರು, ಪಂಚರು ಎಂದು ಕರೆಯುತ್ತಿದ್ದರು. ಗ್ರಾಮದಲ್ಲಿ ನ್ಯಾಯ ತೀರ್ಮಾನ ಮಾಡುವವರು ಆದಷ್ಟು ಮೇಲ್ವರ್ಗ, ಶ್ರೀಮಂತರು ಆಳುವ ವರ್ಗದವರು ಪಂಚರಾಗಿರುತ್ತಿದ್ದರು.

ಅಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ಬೇರೆ ಬೇರೆ ರೀತಿಯಲ್ಲಿ ವಿಧಿಸಲಾಗುತ್ತದೆ. ಕಳ್ಳತನ, ಜಮೀನು ವ್ಯಾಜ್ಯಕ್ಕೆ ಸಂಬಂಧಪಟ್ಟಂತೆ, ಹಲ್ಲೆ ಮುಂತಾದ ಅಪರಾಧಗೈದ ಸಂದರ್ಭಗಳಿಗಿಂತಲೂ ಹೆಣ್ಣುಮಕ್ಕಳ ಶೀಲಕ್ಕೆ ಸಂಬಂಧಿಸಿದ ಅಪರಾಧವನ್ನು ತೀವ್ರವಾಗಿ ಪರಿಗಣಿಸಲ್ಪಡುತ್ತಾರೆ. ಒಂದು ಕಡೆ ಊರಿನವರು ಮತ್ತೊಂದು ಕಡೆ ಕುಲವದರು ಎಲ್ಲರೂ ಸೇರಿ ಊರಿಂದ ಬಹಿಷ್ಕಾರ ಹಾಕುವುದು. ಜೊತೆಗೆ ದಂಡವನ್ನು ಸಹ ಕುಲದೇವರಿಗೆ ಕಟ್ಟಿಸಿಕೊಳ್ಳುತ್ತಿದ್ದರು. ಒಂದೇ ಕುಲದವರಾಗಿದ್ದಾರೆ ಪರಸ್ಪರ ಎರಡು ಕುಲದವರು ಒಪ್ಪಿಗೆ ಮೇರೆಗೆ ಮದುವೆ ಮಾಡಿಸುತ್ತಿದ್ದರು. ಆದರೆ ಬೇರೆ ಬೇರೆ ಸಮುದಾಯದವರಾಗಿದ್ದರೆ ಅವರಿಬ್ಬರನ್ನು ಬೇರೆ ಬೇರೆ ಮಾಡಿ ಅವರವರ ಕುಲದವರಿಗೆ ಮದುವೆ ಮಾಡಿಸುವ ಸನ್ನಿವೇಶಗಳನ್ನು ನೋಡಬಹುದು. ಹೆಣ್ಣಿನ ಮದುವೆಯ ಖರ್ಚಿಗೆ ಬೇಕಾಗುವಷ್ಟು ಹಣವನ್ನು ಅಪಾದಿತ ವ್ಯಕ್ತಿ ಕೊಡಬೇಕು. ಇಲ್ಲವೆ ನ್ಯಾಯಯುತವಾಗಿ ಬಗೆಹರಿಸಲು ಪ್ರಯತ್ನಿಸುತ್ತಿದ್ದರು.

ಗ್ರಾಮದ ನ್ಯಾಯ ಸಂಹಿತೆಯು ದಂಡ, ಶಿಕ್ಷೆ, ಬಹಿಷ್ಕಾರ ಈ ಮೂರು ಹಂತದಲ್ಲಿಯೂ ನಡೆಯುತ್ತದೆ. ಹಿರಿಯರಾದವರು ಬಹಳಷ್ಟು ವಿಚಾರವನ್ನು ವಿಚಾರ ಮಾಡಿ ತೀರ್ಪನ್ನು ಕೊಡುವಲ್ಲಿ ಬಹಳಷ್ಟು ಸಡಲಿಕೆ ಕಂಡು ಬರುತ್ತದೆ. ಆದಷ್ಟು ಹೊಂದಾಣಿಕೆ ಮಾಡುವ ಪ್ರಯತ್ನವನ್ನು ಇಲ್ಲಿ ಮಾಡುತ್ತಿದ್ದರು. ಸಣ್ಣ-ಪುಟ್ಟ ತಪ್ಪುಗಳನ್ನು ಮಾಡಿದರೆ ದೈವಕ್ಕೆ ಅಡ್ಡ ಬಿದ್ದು ದಂಡ ಕಟ್ಟಬೇಕಾಗಿತ್ತು. ಹಿಂದಿನಿಂದ ನಡೆದುಕೊಂಡು ಬಂದಿರುವ ನ್ಯಾಯ ತೀರ್ಮಾನ ಪದ್ಧತಿಯನ್ನು ಆಧುನಿಕ ಸಮಾಜದ ಜನ ನಂಬುತ್ತಿಲ್ಲ ಮತ್ತು ಒಪ್ಪುತ್ತಿಲ್ಲ. ಒಂದು ವೇಳೆ ಸಮುದಾಯಗಳಲ್ಲಿ ಕಲಹ ಮತ್ತೊಂದು ಬೇರೆ ವಿಷಯಗಳ ಬಗ್ಗೆ ಊರಿನ ಯಜಮಾನರು ಇಲ್ಲಿಯೇ ನ್ಯಾಯ ತೀರ್ಮಾನ ಮಾಡೋಣ. ಎಲ್ಲಿ ಮಾತನಾಡಿ ಎಂದು ಹೇಳಿದರೆ ಗಲಾಟೆ ಮಾಡಿಕೊಂಡ ವ್ಯಕ್ತಿ ಒಪ್ಪುವುದಿಲ್ಲ. ನಮಗೆ ಕೋರ್ಟ್ ಕಚೇರಿ, ಇದೆ. ಅಲ್ಲೇ ತೀರ್ಮಾನವಾಗಲಿ ಎನ್ನುವ ಮಾತು ಬರುತ್ತದೆ. ಎಷ್ಟು ಖರ್ಚು ಆದರೂ ಸರಿ ಹೊಲದ ಮಧ್ಯೆ ಜಾಗಕ್ಕೆ(ಬೋದ) ಹಾಕುವ ಎರಡು ಅಡಿ ಜಾಗದಲ್ಲಿ ಅಥವಾ ಎರಡು ಮನೆಯ ಮಧ್ಯೆ ಬಿಡುವ ಎರಡು ಅಡಿ ಜಾಗಕ್ಕೆ ಲಕ್ಷಗಟ್ಟಲೆ ಹಣ ಖರ್ಚು ಮಾಡಿಕೊಂಡರು ಕೋರ್ಟಿನಲ್ಲಿಯೇ ತೀರ್ಮಾನವಾಗಬೇಕು. ಇಂದಿನ ಜನರಿಗೆ ಮಾನಸಿಕ ತಾಳ್ಮೆ ಸ್ಥಿಮಿತತೆ ಇಲ್ಲದೆ ಇರುವ ಇಂದಿನ ಪೀಳಿಗೆ ಪರಂಪರೆಯ ಪರಧಿಯಿಂದ ಹೊರಬರುವ ಪ್ರಯತ್ನ ಮಾಡುತ್ತಿದ್ದಾರೆ.

ನ್ಯಾಯ ಇತ್ಯರ್ಥದ ಒಂದು ವ್ಯವಸ್ಥೆಯೇ ನ್ಯಾಯಪದ್ಧತಿ, ಇದು ಪಂಚಾಯಿತಿ ಪರಂಪರೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಉಳಿಸಿಕೊಂಡು ಬಂದಿದೆ.

ತಮಟಕಲ್ಲು ಗ್ರಾಮದಲ್ಲಿ ನ್ಯಾಯ ವ್ಯವಸ್ಥೆಯು ಹಿಂದಿನ ರೀತಿಯಲ್ಲಿ ಇಲ್ಲ. ಯಾವುದೇ ಗಲಾಟೆ, ಗದ್ದಲ, ಸಮಸ್ಯೆಗಳು ಬಂದರೂ ಚಿಕ್ಕ ವಿಷಯಕ್ಕೂ ಕೋರ್ಟ್ ಕಚೇರಿಗೆ ಹೋಗುತ್ತಾರೆ. ಆದರೆ ಹಿಂದೆ ಕುಟುಂಬದ ಯಾವುದೇ ಸಮಸ್ಯೆಯಿರಲಿ ಅಥವಾ ಹಲವಾರು ಕಾರಣಗಳಿಂದ ಉಂಟಾದ ಕಲಹವಿರಲಿ ಊರಿನ ಹಿರಿಯರು ಸಮುದಾಯ ಮುಖಂಡರು ವ್ಯವಸ್ಥೆಯ ಅಡಿಯಲ್ಲಿ ನ್ಯಾಯ ತೀರ್ಮಾನ ಮಾಡುತ್ತಿದ್ದರು. ಇದನ್ನು ಪಂಚಾಯ್ತಿ ನ್ಯಾಯ ಎನ್ನಬಹುದು. ಇಲ್ಲಿಗೆ ಬಂದ ದೂರುಗಳನ್ನು ಊರಿನವರೇ ಇತ್ಯರ್ಥ ಮಾಡುತ್ತಿದ್ದರು. ಆದರೆ ಈಗ ಈ ವ್ಯವಸ್ಥೆಯಲ್ಲಿ ಸಮುದಾಯಗಳಲ್ಲಿ ಬರುವ ವ್ಯಾಜ್ಯಗಳನ್ನು ಸಮುದಾಯದ ಹಿರಿಯರು, ಕಟ್ಟೆಮನೆಗಳ ಹಿರಿಯರು, ಮಧ್ಯಸ್ಥರು, ಕುಲಾಚಾರಗಳನ್ನು ಮತ್ತು ಸಮುದಾಯಗಳನ್ನು ಅನುಸರಿಸಿ ನ್ಯಾಯ ನಿರ್ಣಯ ಮಾಡುತ್ತಾರೆ. ಕಟ್ಟೆಮನೆಯ ಯಜಮಾನರು ಮಾಡುವ ಪಂಚಾಯಿತಿಗಳೆಂದರೆ ಅಂತರ್‌ಜಾತಿ ವಿವಾಹ, ಹಬ್ಬ, ಜಾತ್ರೆಗಳ ಬಗ್ಗೆ ಮಾತ್ರ. ಇನ್ನು ಭೂಮಿ, ಹಣಕಾಸು, ಸಣ್ಣಪುಟ್ಟ ಕಳ್ಳತನ, ಸ್ತ್ರೀ ಪುರುಷರ ಸಮಸ್ಯೆಗಳಿಗೆ ಎಲ್ಲರಂತೆ ಕೋರ್ಟಿಗೆ ಹೋಗುತ್ತಾರೆ. ಕಟ್ಟೆ ಮನೆಗಳಲ್ಲಿ ಇಂದಿಗೂ ಸಹ ಬಂದ ವ್ಯಾಜ್ಯಗಳನ್ನು ಪಂಚಾಯ್ತಿಯ ತೀರ್ಮಾನ ತೆಗೆದುಕೊಳ್ಳುವಾಗ ಅಲ್ಲಿ ಸೇರಿದ ಹಿರಿಯರೊಂದಿಗೆ ಕೂಲಂಕುಷವಾಗಿ ಚರ್ಚಿಸಿ ಅವರೂ ದೈವದವರ ಅಭಿಪ್ರಾಯದ ಮೇರೆಗೆ ಯಜಮಾನರು ನ್ಯಾಯ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಯಾರೇ ಆಗಲಿ ಪಂಚಾಯ್ತಿ ತೀರ್ಮಾನಕ್ಕೆ ಬದ್ಧರಾಗಿರಬೇಕಾಗುತ್ತದೆ. ಅಂತರ್‌ಜಾತಿಯ ವಿವಾಹವಾದಲ್ಲಿ ಕಟ್ಟೆಮನೆಯ ಯಜಮಾನರು ಸೇರಿ ಹುಡುಗಿ ಅಥವಾ ಹುಡುಗನ ತಂದೆ ತಾಯಿಯನ್ನು ತಮ್ಮ ಕುಲದಿಂದ ಹೊರ ಹಾಕುವ, ಇಲ್ಲವಾದರೆ ದಂಡ ಕಟ್ಟಿಸಿಕೊಳ್ಳುವ ಕೆಲಸಗಳು ಈಗಲೂ ನಡೆಯುತ್ತವೆ. ಹುಡುಗಿ ಅಥವಾ ಹುಡುಗ ಕೆಳ ಸಮುದಾಯದವರನ್ನು ವಿವಾಹವಾಗಿದ್ದಲ್ಲಿ ಅವರನ್ನು ತಮ್ಮ ಕುಲದಿಂದ ಸ್ವಲ್ಪ ದಿನಗಳ ಕಾಲ ಹೊರಗಿಡುವುದನ್ನು ನೋಡಬಹುದು. ಮತ್ತು ಊರಿನಿಂದ ಅಥವಾ ಜಾತಿಯಿಂದ ಬಹಿಷ್ಕಾರ ಹಾಕುವಂತಹ ಶಿಕ್ಷೆ ವಿಧಿಸುತ್ತಾರೆ. ಇಲ್ಲಿ ಬಗೆಹರಿಯದೆ ಹೋದರೆ ಪೋಲೀಸ್ ಅಥವಾ ಕೋರ್ಟ್ ಮೊದಲಾದ ಸಂದರ್ಭಗಳು ಬರುತ್ತವೆ.

**ಸಮುದಾಯ ಬಹಿಷ್ಕಾರ ಸಮುದಾಯಕ್ಕೆ ಸೇರಿಸಿಕೊಳ್ಳುವಿಕೆ :**

ಬಹಿಷ್ಕಾರವೆಂದರೆ ತಪ್ಪು ಮಾಡಿದವರನ್ನು ಸಮುದಾಯದಿಂದ ಅಥವಾ ಊರಿನಿಂದ ಸಮಾಜದಿಂದ ಹೊರಗಿಡುವುದು. ಇದು ಬಹು ಹಿಂದಿನಿಂದಲೂ ಬಂದ ಪದ್ಧತಿಯಾಗಿದ್ದು ತುಂಬ ಅವಮಾನೀಯವಾಗಿದೆ.

**೨.೯. ತಮಟಕಲ್ಲು ಗ್ರಾಮದ ದೇವಾಲಯಗಳು :**

**ರಂಗನಾಥ ಸ್ವಾಮಿ :**

ತಮಟಕಲ್ಲು ಗ್ರಾಮದ ಮಧ್ಯ ಭಾಗದಲ್ಲಿ ಪೂರ್ವಕ್ಕೆ ಅಭಿಮುಖವಾಗಿ ದೇವಾಲಯವಿದೆ. ಈ ದೇವಾಲಯದಲ್ಲಿ ಕುದುರೆಯ ಮೇಲೆ ರಂಗನಾಥ ಸ್ವಾಮಿ ಇರುವ ವಿಗ್ರಹವನ್ನು ನೋಡಬಹುದು ಮತ್ತು ಆಂಜನೇಯನ ಚಿಕ್ಕ ವಿಗ್ರಹ, ಕೆಂಪು ಭೂತಪ್ಪ, ಕಪ್ಪು ಭೂತನ ವಿಗ್ರಹಗಳು ಇಲ್ಲಿ ಪೂಜೆಗೆ ಒಳಪಟ್ಟಿವೆ. ಈ ದೇವಸ್ಥಾನದ ಪೂಜೆಯನ್ನು ೫೦ ವರ್ಷಗಳಿಂದ ಮಾಡುತ್ತಿರುವವರು ತಿಮ್ಮಣ್ಣ. ಈ ಹಿಂದೆ ಇವರ ತಂದೆ ಪೂಜೆ ಮಾಡುತ್ತಿದ್ದರು. ಆಂಜನೇಯ ಮತ್ತು ರಂಗನಾಥ ಸ್ವಾಮಿ ದೇವರ ಪೂಜಾರಿ ಒಬ್ಬರೇ ಆಗಿರುವುದರಿಂದ ಈ ದೇವರುಗಳ ಪೂಜೆ, ಜಾತ್ರೆಗಳು ಒಂದೇ ದಿನ ಪ್ರಾರಂಭವಾಗುತ್ತವೆ. ರಂಗನಾಥ ಸ್ವಾಮಿಯ ಜಾತ್ರೆಯನ್ನು ನಾಲ್ಕು ದಿನಗಳ ಕಾಲ ಮಾಡುತ್ತಾರೆ. ಯುಗಾದಿ ಅಮವಾಸ್ಯೆ ಮರುದಿನ ಬೆಳಗ್ಗಿನ ಜಾವ ೩ ಅಥವಾ ೩.೩೦ ರಿಂದ ದೇವರನ್ನು ಪಲ್ಲಕ್ಕಿಯಲ್ಲಿ ಕೂರಿಸುವುದು. ಹೂವಿನ ಹಾರ ಕಟ್ಟುವುದು. ಮಾಡಿದ ನಂತರ ಗಂಗಾ ಪೂಜೆಗೆ ಬೇಕಾದ ಸಾಮಗ್ರಿಗಳನ್ನು ತಯಾರಿ ಮಾಡಿಕೊಂಡು ಆಂಜನೇಯ ದೇವಸ್ಥಾನದ ಹಿಂದಿರುವ ಹೊಲದಲ್ಲಿ ಪಾಳೆಗಾರರ ಕಾಲದ ತುಂಬು ಬಾವಿ ಇದೆ. ಈ ಬಾವಿಗೆ ರಂಗನಾಥ ಸ್ವಾಮಿಯನ್ನು ಗಂಗಾ ಪೂಜೆಗೆ ಕರೆದುಕೊಂಡು ಹೋಗುತ್ತಾರೆ. ನಂತರ ಆಂಜನೇಯ ದೇವಸ್ಥಾನದ ಹತ್ತಿರ ಬಂದು ಪೂಜೆ ಮಾಡಿಕೊಂಡು ಊರಿನ ಒಳಗೆ ಇರುವ ಬಾವಿ ಹತ್ತಿರ ಬಂದಾಗ ಊರಿನ ಕೆಲವು ಮಹಿಳೆಯರೆಲ್ಲ ಆರತಿ ತೆಗೆದುಕೊಂಡು ಅಲ್ಲಿಗೆ ಬರುತ್ತಾರೆ. ಆಗ ಮೂರು ದೇವರನ್ನು ಪಲ್ಲಕ್ಕಿಯಲ್ಲಿ ಊರೆಲ್ಲ ಮೆರವಣಿಗೆ ಮಾಡುತ್ತಾ ರಂಗನಾಥ ಸ್ವಾಮಿ ಬೆಟ್ಟಕ್ಕೆ ಕರೆದುಕೊಂಡು ಹೋಗಿ ಬೆಳಗಿನಿಂದ ಸಂಜೆಯವರೆಗೆ ಅಲ್ಲಿಯೇ ಇರುತ್ತವೆ. ಆ ಸಮಯದಲ್ಲಿ ದಾಸೋಹ ನಡೆಸಲಾಗುತ್ತದೆ. ದಾಸಯ್ಯನವರನ್ನು ಕರೆದುಕೊಂಡು ಹೋಗಿ ಗೋವಿಂದ ಎನ್ನಿಸುತ್ತಾರೆ. ದೇವರನ್ನು ಬೆಟ್ಟದಿಂದ ಕೆಳಗಿಳಿಸಿ ಹೊಸದಾಗಿ ಕಟ್ಟಿರುವ ಉಡಸಲಮ್ಮನ ದೇವಸ್ಥಾನದ ಎದುರಿರುವ ಕೆಂಡದ ಗುಂಡಿಗೆ ಕಟ್ಟಿಗೆಗಳನ್ನು ತೆಗೆದುಕೊಂಡು ಹೋಗಿ ಹಾಕಿ ರಾತ್ರಿ ೯-೩೦ ಅಥವಾ ೧೦ ಗಂಟೆಗೆ ಕೆಂಡ ತುಳಿಯುತ್ತಾರೆ. ನಂತರ ದೇವರನ್ನು ಪಲ್ಲಕ್ಕಿಯಲ್ಲಿ ಆಂಜನೇಯ ದೇವಸ್ಥಾನದ ಹತ್ತಿರ ತೆಗೆದುಕೊಂಡು ಬಂದು ದೊಡ್ಡ ಎಡೆ ಎಂದು ಮಾಡುತ್ತಾರೆ. ಹಾಲು, ಮೊಸರು, ಬಾಳೆಹಣ್ಣು ಎಡೆಯಾಗಿ ಮಾಡಿ ಪೂಜಾರಿಗಳು ಬಾವಿಯಲ್ಲಿ ನೀರು ಸೇದಿ ಸ್ನಾನ ಮಾಡಿಕೊಂಡು ಬಂದು ಎಡೆಯನ್ನು ತಿನ್ನುತ್ತಾರೆ. ನಂತರ ಪವಾಡ. ಮರುದಿನ ಬೆಳಗ್ಗೆ ತಲೆಗೂದಲು ತೆಗೆಸುವವರು, ಉರುಳು ಸೇವೆ ಮಾಡುವವರು ಸೇವೆಯನ್ನು ಸಲ್ಲಿಸುತ್ತಾರೆ. ಆ ದಿನ ದಾಸೋಹ ಇರುತ್ತದೆ. ಮರುದಿನ ರಂಗನಾಥ ಸ್ವಾಮಿ ಉಚ್ಛಯವಾಗುತ್ತದೆ. ನಂತರ ಸಂಜೆ ೫ ಅಥವಾ ೬ ಗಂಟೆಗೆ ಆಂಜನೇಯನ ತೇರು ಆಗುತ್ತದೆ. ತದನಂತರ ದೇವರು ಪಾದಗಟ್ಟೆಯ ಹತ್ತಿರ ನಿಲ್ಲುತ್ತವೆ. ನಂತರ ಉಡಸಲಮ್ಮ ದೇವಸ್ಥಾನಕ್ಕೆ ದೇವರನ್ನು ಕರೆದುಕೊಂಡು ಹೋಗುತ್ತಾರೆ.

ಮರುದಿನ ತೇರಿನ ಸುತ್ತ ಕಸವನ್ನು ಹೊಡೆದು ನೀರು ಹಾಕಿ ಅನ್ನ, ಮೊಸರು, ಹಾಲು, ತುಪ್ಪ ತೇರಿನ ಎದುರಿಗೆ ಎಡೆ ಹಾಕುತ್ತಾರೆ. ಇದನ್ನು ಧೂಳ್ ಎಡೆ ಎನ್ನುತ್ತಾರೆ. ನಂತರ ಸಂಜೆ ಉಡಸಲಮ್ಮನ ದೇವಸ್ಥಾನದಲ್ಲಿ ಓಕುಳಿ ಮಾಡಿ ದೇವರನ್ನು ದೇವಸ್ಥಾನದ ಒಳಗೆ ಕೂರಿಸುತ್ತಾರೆ. ರಂಗನಾಥ ಸ್ವಾಮಿಯನ್ನು ವರ್ಷಕ್ಕೆ ಒಂದು ಸಾರಿ ಪೂಜೆಗೆ ಹೊರಡಿಸುತ್ತಾರೆ. ಇದು ಊರಿನ ಕೆಲವರ ಮನೆ ದೇವರು ಸಹ ಆಗಿದೆ. ಕಡೆ ಶ್ರಾವಣ, ಕಾರ್ತಿಕ ಮಾಸದಲ್ಲಿ ದೇವರನ್ನು ಪಲ್ಲಕ್ಕಿಯಲ್ಲಿ ಕರೆದುಕೊಂಡು ಹೋಗಿ ದೀಪ ಹಚ್ಚಿ ಪ್ರಸಾದ ಹಂಚಿ ಮತ್ತೆ ದೇವಸ್ಥಾನಕ್ಕೆ ವಾಪಸ್ಸು ಕರೆದುಕೊಂಡು ಬರುತ್ತಿದ್ದರು.

**ಭೈರ ಸಿದ್ದೇಶ್ವರ ಸ್ವಾಮಿ :**

ಇದು ತಮಟಕಲ್ಲು ಗ್ರಾಮದ ವಾಸಿಯಾದ ಕಲ್ಲೆಪ್ಪರು ಎಂಬ ವಂಶಕ್ಕೆ ಸೇರಿದ ದೇವಾಲಯವಾಗಿದೆ. ಇದು ಪೂರ್ವಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಇದರ ಪೂಜಾಕಾರ್ಯ ಕ್ರಮಗಳನ್ನು ಮತ್ತು ಉಸ್ತುವಾರಿಯನ್ನು ಈ ಕುಟುಂಬದವರೇ ನೋಡಿಕೊಳ್ಳುತ್ತಾರೆ. ಈ ದೇವರ ಪೂಜೆಯನ್ನು ಸಣ್ಣ ಸ್ವಾಮಿ ಎನ್ನುವವರು ಮಾಡುತ್ತಾರೆ. ಮೊದಲು ಈ ದೇವರನ್ನು ಒಂದೇ ಮನೆತನದ ಐದು ಜನ ಹೆಣ್ಣು ಮಕ್ಕಳನ್ನು ಇದೇ ಊರಿಗೆ ಕೊಟ್ಟಾಗ ಇವರು ತುಂಬ ಭಕ್ತಿಯಿಂದ ದೇವರಿಗೆ ನಡೆದುಕೊಳ್ಳುತ್ತಿದ್ದರು. ಅದೇ ರೀತಿಯಾಗಿ ಇವರ ಮಕ್ಕಳು, ಮೊಮ್ಮಕ್ಕಳು ಸಹ ಈ ದೇವರಿಗೆ ನಡೆದುಕೊಂಡು ಬರುತ್ತಿದ್ದಾರೆ. ಈ ಐದು ಅಜ್ಜಿಯ ಮಕ್ಕಳು ಭಕ್ತಿಯಿಂದ ವಿಜೃಂಭಣೆಯಿಂದ ಪೂಜೆ ಮುಂದುವರೆಸಿಕೊಂಡು ಬರುತ್ತಿದ್ದು ಈಗಲೂ ಇದು ಮುಂದುವರಿದಿದೆ.

ಇದು ಕೆಲವರ ಮನೆದೇವರಾಗಿದ್ದು ಪಾಪೇನಹಳ್ಳಿ, ಕುರುಬರಹಟ್ಟಿ, ನಂದಿಹಳ್ಳಿ, ಕಲ್ಲುಕಟ್ಟೆ, ಪಳಕಿಹಳ್ಳಿ, ಹಾಲು ಹುಣಿಸಿ, ಗಾರೆಹಟ್ಟಿ, ಬೇರೆ ಬೇರೆ ಕಡೆಯಿಂದ ಜನ ಈ ದೇವರಿಗೆ ನಡೆದುಕೊಳ್ಳುತ್ತಾರೆ. ಇದು ಪೂವಲರ ಬೆಡಗಿನ ಮನೆ ದೇವರು. ವರ್ಷಕ್ಕೆ ಒಂದು ಸಲ ಶಿವರಾತ್ರಿಯ ದಿನ ಜಾತ್ರೆಯನ್ನು ಸಹ ಮಾಡುತ್ತಾರೆ. ನವರಾತ್ರಿ ಕುಳಿತುಕೊಂಡು ನಂತರ ಹೊಳೆ ಪೂಜೆಗೆ ಹೋಗಿ ಬಂದು ಊರೆಲ್ಲ ಮೆರವಣಿಗೆ ಆಗುತ್ತದೆ. ನಂತರ ಗುಡಿ ತುಂಬಿದ ನಂತರ ಗುಗ್ಗುರಿ ಹಾಕುತ್ತಾರೆ. ಪ್ರಸಾದವನ್ನು ಸಾವಿರದ ಅನ್ನ ಎನ್ನುತ್ತಾರೆ. ಇದನ್ನು ಎಲ್ಲ ಭಕ್ತರಿಗೂ ಹಂಚುತ್ತಾರೆ.

ಪೆಟ್ಟಿಗೆಯಲ್ಲಿರುವ ದೇವರನ್ನು ಹೊರ ತೆಗೆದು ನೂರಾ ಒಂದು ಸಲ ಐನೋರಿಂದ ಪೂಜೆ ಮಾಡಿಸುತ್ತಾರೆ. ಪ್ರತಿ ಬಾರಿಯು ದೇವರನ್ನು ತೊಳೆದು ವಿಭೂತಿ, ಕುಂಕುಮ, ಹಚ್ಚಿ ಒಂದು ಹೂ ಇಟ್ಟು ನೀರು ಹಾಕಿ ತೊಳೆಯುತ್ತಾರೆ. ಇದನ್ನು ನೂರಾ ಒಂದು ಪೂಜೆ ಎನ್ನುತ್ತಾರೆ. ಈ ಸಂದರ್ಭದಲ್ಲಿ ಪ್ರತಿ ಬಾರಿ ಒಂದು ತೆಂಗಿನ ಕಾಯಿ ಒಡೆಯುತ್ತಾರೆ. ಈ ಸಮಯದಲ್ಲಿ ಪೂಜಾರಿಗೆ ಹೊಸ ಬಟ್ಟೆ, ದೇವರಿಗೆ ಹೊಸ ಬಟ್ಟೆ ತರುತ್ತಾರೆ.

ಬೇರೆ ಬೇರೆ ಸ್ಥಳಗಳಿಂದ ಶ್ರಾವಣ ಮಾಸದಲ್ಲಿ ಮನೆ ದೇವರ ಪೂಜೆಗೆ ಬರುತ್ತಾರೆ. ಆಗ ಬರಲು ಸಾಧ್ಯವಾಗದೇ ಹೋದರೆ ಬಿಡಿದಿನಗಳಲ್ಲಿ ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಮತ್ತು ಮದ್ಲುಗಿತ್ತಿ ಮತ್ತು ಮದುಮಗ ಮಾಡಿದಾಗ ಮನೆ ದೇವರ ಬಳಿ ಅರ್ನೆನೀರು ಹಾಕಿಸಿಕೊಂಡು ಹೋಗುತ್ತಾರೆ. ಮದ್ಲಿಗಿತ್ತಿಯ ಅತ್ತೆ ಮನೆ ದೇವರ ಪೂಜಾರಿ ಪೂಜೆ ಮಾಡಿಕೊಟ್ಟ ತಾಳಿಯನ್ನು ಹುಡುಗಿಯ ಕೊರಳಿಗೆ ಕಟ್ಟುತ್ತಾರೆ.

ಪ್ರತಿನಿತ್ಯವೂ ಭೈರಸಿದ್ದೇಶ್ವರ ಪೆಟ್ಟಿಗೆಯ ಬಳಿ ಇರುವ ತ್ರಿಶೂಲಕ್ಕೆ ಪೂಜೆ ಮಾಡುತ್ತಾರೆ. ವರ್ಷಕ್ಕೆ ಒಂದು ಸಲ ಪೆಟ್ಟಿಗೆಯಲ್ಲಿರುವ ದೇವರ ಪೂಜೆ ನಡೆಯುತ್ತದೆ.

**ಈಶ್ವರ ದೇವಾಲಯ :**

ಈ ದೇವಾಲಯವು ತಮಟಕಲ್ಲು ಗ್ರಾಮದ ಮಧ್ಯಭಾಗದಲ್ಲಿ ನಿರ್ಮಾಣವಾಗಿದೆ. ಇದು ದಕ್ಷಿಣಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಎಡೆಕಲ್ಲು ಬೆಟ್ಟದ ಮೇಲಿರುವ ನಂದಿಯ ವಿಗ್ರಹಕ್ಕೆ ಮುಖಮಾಡಿದೆ. ನೆಲದಿಂದ ೧೦ ಅಡಿ ಎತ್ತರದ ಕಟ್ಟಡ ನಿರ್ಮಾಣವಾಗಿದೆ. ದೇವಾಲಯದ ಒಳಗಡೆ ಮೂರು ಅಡಿ ಎತ್ತರದ ಶಿವಲಿಂಗಕ್ಕೆ ಪೂಜೆ ಮಾಡಲಾಗುತ್ತದೆ. ಶಿವಲಿಂಗದ ಸುತ್ತಲೂ ತಾಮ್ರದ ಹೊದಿಕೆಯನ್ನು ಇಡಲಾಗಿದೆ. ಹಾಗೆಯೇ ಶಿವಲಿಂಗದ ಪಕ್ಕದಲ್ಲಿ ನಾಗರಕಲ್ಲುಗಳನ್ನು ನೋಡಬಹುದು. ಹಾಗೆಯೇ ಶಿವಲಿಂಗದ ಎದುರು ನಂದಿಯ ವಿಗ್ರಹವನ್ನು ಕಾಣುತ್ತೇವೆ. ನಂದಿಯು ಕುಳಿತಿರುವ ಭಂಗಿಯಲ್ಲಿ ಇದೆ. ದೇವಸ್ಥಾನದ ಒಳಗಡೆ ಗೋಡೆಯ ಮೇಲೆ ಅಲಂಕಾರಿಕ ಚಿತ್ರಗಳನ್ನು ಕಾಣುತ್ತೇವೆ. ಶಿವರಾತ್ರಿಯಲ್ಲಿ ವಿಶೇಷವಾದ ಪೂಜೆಯು ನಡೆಯುವುದು ಈ ದೇವಾಲಯದ ವಿಶೇಷ.

**ಶೇಜಿ ದೇವರು ಮತ್ತು ಸೂರ್ಯಲಿಂಗೇಶ್ವರ :**

ಈ ಎರಡು ದೇವರುಗಳ ಪೂಜೆಯನ್ನು ಒಬ್ಬ ವ್ಯಕ್ತಿ ನಡೆಸಿಕೊಂಡು ಬರುತ್ತಾರೆ. ಪೂಜಾರಿ ಹನುಮಂತಪ್ಪ ಈ ದೇವರ ಪೂಜೆಯನ್ನು ಶನಿವಾರ ಮತ್ತು ಸೋಮವಾರ ಮಾತ್ರ ಮಾಡುತ್ತಾರೆ. ಈ ದೇವಾಲಯವು ತಮಟಕಲ್ಲು ಗ್ರಾಮದ ವಾಸಿಯಾದ ಕಡೂರು ವಂಶಸ್ಥರು ಎಂಬ ಮನೆತನಕ್ಕೆ ಸೇರಿದ ದೇವಾಲಯವಾಗಿದೆ. ಪೂರ್ವಕ್ಕೆ ಅಭಿಮುಖ ಮಾಡಿದ ದೇವಾಲಯವಾಗಿದೆ. ಸೂರ್ಯಲಿಂಗೇಶ್ವರ ದೇವರಿಗೆ ನಡೆದುಕೊಳ್ಳುವ ಈ ಮನೆತನದವರು ಜಗಳೂರು ಬಳಿ ಇರುವ ಕಾಮಗೇತಲಹಳ್ಳಿಗೆ ಹೋಗಬೇಕಾಗಿತ್ತು. ಅಷ್ಟು ದೂರ ಹೋಗಲು ಸಾಧ್ಯವಾಗದ ಕಾರಣ ಈ ಮನೆತನದವರು ತಮಟಕಲ್ಲು ಗ್ರಾಮದಲ್ಲಿ ಈ ದೇವರ ಪ್ರತಿಷ್ಠಾಪನೆ ಮಾಡಿಕೊಂಡಿದ್ದಾರೆ. ಹಿಂದೆ ನರಸಿಂಹ ಅಜ್ಜ ಎನ್ನುವವರಿಗೆ ಪಟ್ಟ (ಮುದ್ರೆ) ಮಾಡಲಾಗಿತ್ತು. ಇವರು ತೀರಿಕೊಂಡ ಬಳಿಕ ೧೦ ವರ್ಷಗಳ ಕಾಲ ಯಾರಿಗೂ ಪಟ್ಟ ಮಾಡದೆ ದೇವರು ಹಾಳು ಬಿದ್ದಿತ್ತು. ಏಕೆಂದರೆ ಈ ಅಜ್ಜನಿಗೆ ಗಂಡು ಮಕ್ಕಳಿರಲಿಲ್ಲ. ಪೂಜಾರಿ ಹನುಮಂತ ಮತ್ತು ನರಸಿಂಹ ಅಜ್ಜ ಇಬ್ಬರು

ಅಣ್ಣ ತಮ್ಮಂದಿರು. ಪೂಜೆ ಇಲ್ಲದೆ ದೇವರು ಹಾಳುಗೆಡುವುತ್ತದೆಂದು ಊರಿನ ಜನರೆಲ್ಲ ಸೇರಿ ಊರಿನ ಯಜಮಾನರನ್ನು ಸೇರಿಸಿ ಯಾರು ಪೂಜೆ ಮಾಡುವುದು ಎಂದು ಚರ್ಚೆ ನಡೆದಾಗ ಊರಿನ ಹಿರಿಯರು ಆಂಜನೇಯ ದೇವರ ಬಳಿ ಅಣ್ಣ ತಮ್ಮಂದಿರ ಮಕ್ಕಳ ಹೆಸರನ್ನು ಹೇಳಿ ಹೂವನ್ನು ಕೇಳಿದರು. ಯಾರಿಗೂ ಒಳ್ಳೆಯ ಹೂ ಕೊಡಲಿಲ್ಲ, ಪೂಜಾರಿ ಹನುಮಂತಪ್ಪನ ಚಿಕ್ಕಪ್ಪ ನಮ್ಮ ಅಣ್ಣನ ಮಗ ಒಬ್ಬ ಇದ್ದಾನೆಂದು ಪೂಜಾರಿ ಹನುಮಂತಪ್ಪನ ಹೆಸರನ್ನು ಸೂಚಿಸಿದರು. ಆಗ ದೇವರಲ್ಲಿ ಹೂ ಕೇಳಿಸಿದಾಗ ದೇವರು ಒಳ್ಳೆಯ ಹೂ ಕೊಟ್ಟಿತು. ಆಗ ನನಗೆ ಪಟ್ಟ ಮಾಡಿದರು. ಆಗಿನಿಂದ ಪೂಜೆ ಮಾಡಿಕೊಂಡು ಬರುವುದಾಗಿ ಹೇಳಿದರು. ಮದುವೆ ಆಗುವುದಕ್ಕಿಂತ ಮುಂಚೆ ಯಾವುದೇ ವ್ಯಕ್ತಿಗೆ ಪಟ್ಟ (ಮುದ್ರೆ) ಮಾಡಬಹುದು. ಮದುವೆ ಆದವರಿಗೆ ಪಟ್ಟ ಮಾಡಲು ಬರುವುದಿಲ್ಲ. ಮಾಂಸಹಾರಿ ಊಟವನ್ನು ಮಾಡಬಾರದು. ಮನೆಯ ಒಳಗಡೆ ಮಾಡುವುದಿಲ್ಲ. ಮನೆಯ ಹೊರಗಡೆ ಊಟ ಮಾಡಿ ಶುದ್ಧೀಕರಿಸಿಕೊಂಡು ಒಳಗೆ ಬರಬೇಕು. ಇದೇ ಊರಿನ ಎಂಟು ಮನೆಯವರು ಈ ದೇವರಿಗೆ ನಡೆದುಕೊಳ್ಳುತ್ತಾರೆ.

ಸೂರ್ಯಲಿಂಗೇಶ್ವರ ದೇವರನ್ನು ವರ್ಷಕ್ಕೆ ಒಂದು ಸಲ ಶಿವರಾತ್ರಿ ಜಾಗರಣೆಯ ಮರುದಿನ ಬೆಳಗ್ಗೆ ಹೊಳೆ ಪೂಜೆಗೆ ಹೋಗಿ ನಂತರ ಊರಿನಲ್ಲೆಲ್ಲ ಮೆರವಣಿಗೆ ನಂತರ ಗುಡಿ ತುಂಬುತ್ತದೆ. ನಂತರ ಸಂಜೆ ೪ ಗಂಟೆಗೆ ಗುಗ್ಗರಿ ಹಾಕುತ್ತಾರೆ (ಹುರುಳಿ ಕಾಳು). ನಂತರ ಸಾವಿರದೆಡೆ ಎಂದು ಮಾಡಿ ಅಣ್ಣ ತಮ್ಮಂದಿರಿಗೆ ಮಾತ್ರ ಹಂಚುತ್ತಾರೆ.

ಪೆಟ್ಟಿಗೆಯಲ್ಲಿರುವ ದೇವರನ್ನು ಹೊರ ತೆಗೆದು ತೊಳೆದು ನೂರಾ ಒಂದು ಪೂಜೆಯನ್ನು ಐನ್ನೋರಿಂದ ಮಾಡಿಸುತ್ತಾರೆ. ಪ್ರತಿ ಸಾರಿಯು ದೇವರನ್ನು ತೊಳೆದು ವಿಭೂತಿ ಕುಂಕುಮ ಹಚ್ಚಿ ಒಂದು ಹೂ, ಕರ್ಪೂರ ಹಚ್ಚಿ ತೆಂಗಿನಕಾಯಿ ಒಡೆದು ಪೂಜೆ ಸಲ್ಲಿಸುತ್ತಾರೆ. ಇದನ್ನು ನೂರಾ ಒಂದು ಪೂಜೆ ಎನ್ನುತ್ತಾರೆ. ಭೈರಸಿದ್ದಪ್ಪ ಮತ್ತು ಸೂರ್ಯಲಿಂಗೇಶ್ವರ ದೇವರುಗಳು ಒಂದೇ ದಿನ ಒಂದೇ ಹೊಳೆಗೆ ಗಂಗಾ ಪೂಜೆಗೆ ಹೋಗುತ್ತವೆ.

ಇನ್ನು ಶೇಜಿ ದೇವರ ಬಗ್ಗೆ ಹೇಳುವುದಾದರೆ ಚಿಕ್ಕ ಮಕ್ಕಳು ಹಾಲು ಕುಡಿಯದೆ ಹಠ ಮಾಡಿದಾಗ, ಆರೋಗ್ಯ ಸರಿಯಿಲ್ಲದಾಗ ಈ ದೇವರನ್ನು ಯಾರು ಬೇಕಾದರು ಅವರ ಮನೆಗೆ ಹೊರಡಿಸಿಕೊಂಡು ಹೋಗಿ ಪೂಜೆ ಮಾಡಿ ದೇವರ ಜೊತೆ ಸಂವಾದ ನಡೆಸುತ್ತಾರೆ. ಮಗುವಿಗೆ ಏನಾಗಿದೆ, ಏನು ಮಾಡಬೇಕು ಪೂಜೆ ಮಾಡಿಸಬೇಕಾ ಅಥವಾ ನಿಂಬೆಹಣ್ಣು ತುಳಿಯಬೇಕಾ, ಮೂರು ದಿನ ಓಕುಳಿ ತೆಗೆದುಹಾಕಲು, ಮೂರು ದಿನ ಅನ್ನ ತೆಗೆದು ಹಾಕಲು ಹೇಳುತ್ತಾರೆ.

**ಭೂತಪ್ಪನ ದೇವಾಲಯ :**

ಇದು ತಮಟಕಲ್ಲು ಗ್ರಾಮದಲ್ಲಿರುವ ರಂಗನಾಥ ಬೆಟ್ಟದ ಕೆಳಗೆ ಪೂರ್ವಕ್ಕೆ ಅಭಿಮುಖವಾಗಿರುವ ದೇವಾಲಯವಾಗಿದೆ. ಆದರೆ ಭೂತಪ್ಪಗಳನ್ನು ಇಲ್ಲಿ ಇಟ್ಟಿದ್ದಾರೆ. ಪೂಜೆ ನಡೆಯುವುದಿಲ್ಲ.

ರಂಗನಾಥ ಸ್ವಾಮಿಯ ದೇವಾಲಯದಲ್ಲಿ ಕೆಂಪು ಭೂತಪ್ಪ ಮತ್ತು ಕಪ್ಪು ಭೂತಪ್ಪ ಇಟ್ಟು ಪೂಜಿಸಲಾಗುತ್ತದೆ. ರಂಗನಾಥ ಸ್ವಾಮಿ ಜಾತ್ರೆಯ ದಿನ ಇಲ್ಲಿ ಪೂಜೆ ಮಾಡಲಾಗುತ್ತದೆ.

**ಲಕ್ಕವ್ವ ತುಳಸಮ್ಮ :**

ಇವು ರಂಗನಾಥ ಸ್ವಾಮಿ ಬೆಟ್ಟದ ಮೇಲಿವೆ. ಈ ದೇವರುಗಳಿಗೆ ಪೂಜೆಯನ್ನು ಶನಿವಾರ ಮಾತ್ರ ಮಾಡಿಕೊಂಡು ಬರುತ್ತಾರೆ. ಇಲ್ಲಿ ಪೂಜೆ ಆದ ನಂತರವೇ ಆಂಜನೇಯ ಸ್ವಾಮಿಯ ಪೂಜೆ ಆಗುವುದು. ವರ್ಷಕ್ಕೆ ಒಂದು ಸಲ ನಡೆಯುವ ರಂಗನಾಥಸ್ವಾಮಿ ಮತ್ತು ಆಂಜನೇಯ ಸ್ವಾಮಿ ಜಾತ್ರೆಯ ದಿನ ಬೆಟ್ಟ ಹತ್ತಿ ಪೂಜೆ ಮಾಡಿಕೊಂಡು ಬರುತ್ತಾರೆ.

**ಉಡಸಲಮ್ಮನ ಜಾತ್ರೆ :** 

ಭಾರತೀಯ ಸಂಸ್ಕೃತಿಯಲ್ಲಿ ಜನಪದ ಸಾಹಿತ್ಯ ಪರಂಪರೆ ಬಹು ಮಹತ್ವಪೂರ್ಣ ಅಂಗವಾಗಿದೆ. ಆದಿಮಾನವನ ಮೂಲ ನೆಲೆಯನ್ನು ತಿಳಿಸಿಕೊಡುವ ಜನಪದ ಸಾಹಿತ್ಯ, ಸಂಸ್ಕೃತಿಯು ಮನುಕುಲದ ಬೆಳೆವಣಿಗೆಯನ್ನು ವಿಸ್ತಾರವಾದ ನೆಲೆಯಲ್ಲಿ ತಿಳಿಸಿಕೊಡುವಲ್ಲಿ ತನ್ನದೆ ಆದ ವಿಶಿಷ್ಟತೆಯನ್ನು ಪಡೆದಿದೆ. ಜನಪದರಲ್ಲಿ ಹಬ್ಬ, ಆಚರಣೆ, ಜಾತ್ರೆ, ಸಂಪ್ರದಾಯ, ನಂಬಿಕೆ, ವಿಧಿ-ನಿಷೇಧ, ವಿಧಾನ, ಸಂಸ್ಕಾರ, ಕ್ರೀಡೆ ಮುಂತಾದ ಹಲವು ಬಗೆಯ ವಿಧಾನಗಳನ್ನು ಕಾಣಬಹುದು. ಜನ ಸಮ್ಮುಖವಾಗಿಯೇ ಇವರ ವಿಧಿ ವಿಧಾನಗಳು ಬೆಳೆದು ಬಂದಿರುವುದು ಗಮನಾರ್ಹ ಸಂಗತಿಯಾಗಿದೆ. ಜನಪದರಲ್ಲಿ ಅಚರಿಸಲ್ಪಡುವ ಪ್ರತಿಯೊಂದು ಆಚರಣೆಗೆ ಅದರದೇ ಆದ ವಿಶೇಷ ಸ್ಥಾನಮಾನಗಳು ಇವೆ. ಪ್ರತಿಯೊಂದು ಆಚರಣೆಯನ್ನು ಜನಪದರು ಅತ್ಯಂತ ವೈಭವದಿಂದ ತಮ್ಮ ಸಂಸ್ಕೃತಿಯನ್ನು ಬಿಂಬಿಸುವಂತೆ ಆಚರಿಸಲ್ಪಡುತ್ತಾರೆ. ನಂಬಿಕೆ ಸಂಪ್ರದಾಯದಂತಹ ವಿಚಾರಗಳಲ್ಲಿ ತಮ್ಮ ಪರಂಪರೆಯನ್ನು ಎಂದಿಗೂ ಬಿಟ್ಟು ಕೊಡುವುದಿಲ್ಲ. ಆ ಕಾರಣಕ್ಕಾಗಿಯೇ ಜನಪದರು ಆಚರಿಸುವ ಎಲ್ಲಾ ಆಚರಣೆಗಳು ವೈಶಿಷ್ಟ್ಯಪೂರ್ಣವಾಗಿವೆ. ಇಂತಹ ಆಚರಣೆಗಳಲ್ಲಿ ಜಾತ್ರೆಗಳು ಪ್ರತಿ ಹಂತದಲ್ಲಿ ವಿಶೇಷ ಮಹತ್ವವನ್ನು ಪಡೆದುಕೊಂಡಿವೆ. ಜನಪದರ ಸಾಂಸ್ಕೃತಿಕ ಪರಂಪರೆಗೆ ಜಾತ್ರೆಗಳು ಭದ್ರವಾದ ತಳಹದಿಯಾಗಿವೆ. ಇಂತಹ ಜನಪದರ ಆಚರಣೆಗಳಲ್ಲಿ ಜಾತ್ರೆಗಳು ಪ್ರತಿ ಹಂತದಲ್ಲಿ ವಿಶೇಷ ಮಹತ್ವವನ್ನು ಪಡೆದುಕೊಂಡಿವೆ. ಜಾತ್ರೆಗಳು ಅಯಾ ಪ್ರದೇಶದ ಜನ ಜೀವನದ ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಪ್ರತಿಯೊಂದು ವರ್ಗದ ಜನತೆಯು ಒಂದೆಡೆ ಸೇರಿ ಸಾಂಸ್ಕೃತಿಕ ಐಕ್ಯತೆಯನ್ನು ಪ್ರತಿಪಾದಿಸುವ ಕೇಂದ್ರ ಸ್ಥಳವಾಗಿ ಜಾತ್ರೆಗಳು ಕಂಡು ಬರುತ್ತವೆ. ಜಾತ್ರೆಗಳು ಜನಪದ ಜೀವನದ ಮೂಲದ್ರವ್ಯಗಳೇ ಆಗಿರುವುದರಿಂದ ಆಧುನಿಕ ಪರಿಸರದಲ್ಲಿ ಆಧುನಿಕ ಯುಗದ ಸಂದರ್ಭದಲ್ಲಿ ಜಾತ್ರೆಗಳ ಸ್ವರೂಪ ಹಲವು ಬದಲಾವಣೆಗೆ ಒಳಗಾಗಿರುವಂತೆ ಕಂಡು ಬಂದರೂ ಈ ಬದಲಾವಣೆ ಚಾತುರ್ವರ್ಣ ನೀತಿಯ ಕರ್ಮ ಸಿದ್ಧಾಂತದ ಚೌಕಟ್ಟಿನಲ್ಲಿ ಆದ ಚೌಕಾಸಿಯ ಹೊಂದಾಣಿಕೆಯೇ ಹೊರತು ಬದಲಾವಣೆಯಲ್ಲ. ಜಾತ್ರೆಯ ಕುರಿತಾಗಿ ಹಿರಿಯ ವಿದ್ವಾಂಸರಾದ ದೇ.ಜೆ.ಗೌ ಅವರು ತಮ್ಮ ಅಧ್ಯಯನದ ಮೂಲಕ

ಒಂದು ನಿರ್ದಿಷ್ಟ ಹೇಳಿಕೆಯನ್ನು ನೀಡುತ್ತಾರೆ. ಅದೇನೆಂದರೆ, 'ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತ್ಯ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟಿದವು'. ಪ್ರಾರಂಭದಲ್ಲಿ 'ಯಾತ್ರೆ' ಎಂದು ಪ್ರಸಿದ್ಧಿ ಪಡೆದ ಆಚರಣೆಯು ಬಹುಶ : ಪುಣ್ಯ ಕ್ಷೇತ್ರಗಳಲ್ಲಿ ನಡೆಯುತ್ತಿರುವಂತವುಗಳು ಎಂದು ಭಾವಿಸಲಾಗುತ್ತದೆ. ಪಾಪ ಪರಿಹಾರಾರ್ಥವಾಗಿ ವಿವಿಧ ಪ್ರದೇಶಗಳಿಂದ ಜನರು ಅಂತಹ ಕ್ಷೇತ್ರಗಳಿಗೆ ಬರುತ್ತಿದ್ದರು. ನಂತರ ಕೆಲವು ಹಳ್ಳಿಗಳಲ್ಲಿ ನಿಯತ ಅಥವಾ ಅನಿಯತ ಕಾಲಗಳಲ್ಲಿ ಅದ್ದೂರಿಯಿಂದ ಜರುಗುತ್ತಿದ್ದ ದೊಡ್ಡ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರ ಜೊತೆಗೆ ಶ್ರದ್ಧಾವಂತ ಜನರೂ ಬರಲಾರಂಭಿಸಿದರು. ದೇವರು ಪ್ರಭಾವಶಾಲಿಯಿದ್ದರಂತೂ ಜನರ ಗದ್ದಲವೂ ಅಧಿಕವಾಗಿರುತ್ತಿತ್ತು. ಒಂದು ದಿನದ ಹಬ್ಬ ಮೂರು ಅಥವಾ ಅದಕ್ಕಿಂತಲೂ ಹೆಚ್ಚು ದಿನಗಳಿಗೆ ಹೆಚ್ಚುತ್ತಾ ಕುಣಿತ ಬರವಣಿಗೆಗಳು ಸೇರಿಕೊಂಡು ಅತ್ಯಂತ ವೈಭವವಾಗಿ ಆಕರ್ಷಕವಾಗಿದ್ದು ಅಂಗಡಿ ಮುಗ್ಗಟ್ಟುಗಳು ಸೇರಿದ್ದು ಇದನ್ನು ನೋಡಿದ ಜನರು ಮಂಕಾಗಿ ಅದು ಜಾತ್ರೆ ಎಂಬ ನಾಮಕರಣಕ್ಕೆ ಯೋಗ್ಯವಾಯಿತು. ಕೊನೆಗೆ ರೈತನ ಜೀವನಾಡಿಯಂತಿರುವ ದನಗಳು ನೆಗೆಯುವ ಸಂದರ್ಭ ಬಂದಾಗ ಆ ಪದದ ಅರ್ಥ ತುಂಬಾ ವಿಶಾಲವಾಯಿತು.

ಧಾರ್ಮಿಕ ಸ್ವರೂಪ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ವಾಣಿಜ್ಯ ಮುಖವನ್ನು ರೂಢಿಸಿಕೊಂಡು ಜಾತ್ರೆಯಾಯಿತು (ದೇ ಜೆ.ಗೌ ಪು.೩೪೨). ಜನಪದರು ಸೃಷ್ಟಿಸಿದ ಆಚರಣೆಗಳಲ್ಲಿ ಜಾತ್ರೆಯು ಒಂದು ಜನಪದರ ಬದುಕಿನ ರೂಪಕ್ಕೆ ನಿರೀಕ್ಷೆಯಾಗಿ ಅವರು ರೂಢಿಸಿಕೊಂಡು ಬಂದಿರುವ ಇಂತಹ ಅನೇಕ ಕ್ರಿಯೆಗಳು ಜೀವಂತವಾಗಿರುವುದೇ ಆಗಿದೆ. ಜಾತ್ರೆಗಳು ಜನಪದ ಧಾರ್ಮಿಕ, ಆರ್ಥಿಕ ಸಾಮಾಜಿಕ ಬೆಳವಣಿಗೆಗಳ ಕೇಂದ್ರಬಿಂದು. ಜನಪದರಲ್ಲಿ ಕ್ರಾಂತಿಯನ್ನು ಮೂಡಿಸಿ ಪರಸ್ಪರ ಜನಸಾಮಾನ್ಯರಲ್ಲಿ ಒಗ್ಗಟ್ಟಿನ ಕಲ್ಪನೆಯನ್ನು ಬೆಳೆಸಿಕೊಂಡು ಬರುವಲ್ಲಿ ಪ್ರಮುಖವೆನಿಸುತ್ತಿದೆ. ಜಾತ್ರೆಗಳನ್ನು ಜನಪದರು ತಮ್ಮ ಬಿಡುವಿನ ವೇಳೆಯಲ್ಲಿ ಆಚರಿಸುವುದೇ ಹೆಚ್ಚು. ಮನೆಗಳಲ್ಲಿ ಮತ್ತು ಊರಲ್ಲಿ ಸುಗ್ಗಿಯ ಕಾಲವನ್ನು ಸಂಪೂರ್ಣವಾಗಿ ಮುಗಿಸಿಕೊಂಡು ವಿಶ್ರಾಂತಿ ಪಡೆಯುವ ಸಂದರ್ಭದಲ್ಲಿ ಮನಸ್ಸಿಗೆ ಮುದ ನೀಡುವ ಆಚರಣೆಗಾಗಿ ತಮ್ಮ ಬಂಧು-ಬಳಗವನ್ನೆಲ್ಲ ಕರೆಸಿಕೊಂಡು ಊರಿನ ಜನರೆಲ್ಲ ಸೇರಿ ಸಡಗರದಿಂದ ಆಚರಿಸುವ ಒಂದು ವಿಧಾನ. ಹೊಲದಲ್ಲಿರುವ ಬೆಳೆಯೆಲ್ಲ ಅಥವಾ ಫಸಲನ್ನು ಮನೆಗಳಿಗೆ ತಂದುಕೊಂಡು ಆ ವರ್ಷದ ಫಸಲನ್ನು ಸಮೃದ್ಧಿಯಾಗಿ ನೀಡಿದರ ಪ್ರತಿಫಲವಾಗಿ ದೇವರಿಗೆ ಕೃತಜ್ಞತೆ ಸಲ್ಲಿಸಲು, ದೇವರನ್ನು ಕೊಂಡಾಡಲು, ಹರಕೆ ತೀರಿಸಲು ಜನಪದರೆಲ್ಲ ಕೂಡಿ ಆಚರಿಸುವುದು ರೂಢಿ. ಜಾತ್ರೆ ಎಂದರೆ ಅಲ್ಲಿ ಆಟಗಳು, ಮನೋರಂಜನೆಗಾಗಿ ಹಾಡು, ಕುಣಿತ, ಭಜನೆ ನಾಟಕ ಮುಂತಾದ ಸಾಂಸ್ಕೃತಿಕ ಕಲೆಗಳ ಪ್ರದರ್ಶನಗಳು ಹೇರಳವಾಗಿರುತ್ತವೆ. ಜನಪದರಲ್ಲಿ ಧಾರ್ಮಿಕ ನಂಬಿಕೆಯನ್ನು ಗಟ್ಟಿಗೊಳಿಸುವಲ್ಲಿ ಜೀವನಕ್ಕೆ ಬೇಕಾಗುವಂತಹ ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳಲು ಜಾತ್ರೆಗಳು ಜನಪದರಿಗೆ ಸಾಕಷ್ಟು ನೆರವಾಗುತ್ತವೆ. ಬಡವ-ಬಲ್ಲಿದ, ಮಕ್ಕಳು-

ಮುದುಕರು, ಹೆಣ್ಣು–ಗಂಡು ಹೀಗೆಲ್ಲಾ ವಯೋಮಾನದವರು ಸೇರಿ ತಮ್ಮ ನೋವು–ನಲಿವುಗಳನ್ನು ಹಂಚಿಕೊಳ್ಳುವ ಸಂದರ್ಭವೇ ಜಾತ್ರೆಗಳಾಗಿವೆ.

ಜಾತ್ರೆಗಳು ಸಾಮಾನ್ಯವಾಗಿ ವಿಶಾಲವಾದ ಪ್ರದೇಶಗಳಲ್ಲಿ ನಡೆಯವುದು ಹೆಚ್ಚು ಅಲ್ಲಿ ಸೇರುವ ಭಕ್ತಾದಿಗಳು ಅಪಾರ ಸಂಖ್ಯೆಯಲ್ಲಿ ಸೇರುವುದರಿಂದ ಜಾತ್ರೆಗಳು ನಡೆಯುವ ಪ್ರದೇಶದಲ್ಲಿ ಅಗತ್ಯವಾದ ಮೂಲಭೂತ ಸೌಲಭ್ಯಗಳಿರಲೇಬೇಕು. ಜಾತ್ರೆ ನಡೆಯುವ ಸ್ಥಳಕ್ಕೆ ಸಂಚಾರ ಮಾರ್ಗವೂ ಸುಲಲಿತವಾಗಿದ್ದು ಬಂದು ಹೋಗುವವರಿಗೆ ಉಪಯುಕ್ತವಾಗುತ್ತದೆ. ವಾಹನಗಳಲ್ಲಿ, ಬಂಡಿಗಳಲ್ಲಿ ಸಾಮಾನು ಸರಂಜಾಮುಗಳನ್ನು ತರುವವರಿಗೆ ಅಂಗಡಿ ವ್ಯಾಪಾರಸ್ಥರಿಗೆ ತಮ್ಮ ವಸ್ತುಗಳನ್ನು ಸಾಗಿಸಲು ಸಂಪರ್ಕದಾರಿಯಿದ್ದರೆ ಅಲ್ಲಿ ಎಲ್ಲಾ ರೀತಿಯಿಂದಲೂ ಜಾತ್ರೆಗಳು ಯಶಸ್ವಿಯಾಗಿ ನಡೆಯಲು ಸಾಧ್ಯ. ಜಾತ್ತೆಗಳಲ್ಲಿ ಕೇವಲ ನೋಡುಗರು, ಭಕ್ತರು, ವ್ಯಾಪಾರ ಮಾಡುವವರು ಕೊಂಡುಕೊಳ್ಳುವವರು ಪರಿಚಯಸ್ಥರನ್ನು ಮಾತನಾಡಿಸುವವರು ಮಹಿಳೆ–ಮಕ್ಕಳು ಹೀಗೆ ವಿವಿಧ ವರ್ಗದ ಜನರು ಸೇರುತ್ತಾರೆ. ಇಂತಹ ಸ್ಥಳಗಳಲ್ಲಿ ಕೆಲವು ಶುಭಕಾರ್ಯಗಳು ನಡೆಯಲು ಸುಲಭವಾಗುವಂತಹ ಸಂದರ್ಭಗಳು ಜನಪದರಿಗೆ ಒದಗಿಸಿಕೊಡುತ್ತವೆ. ಹಿಂದಿನ ಕಾಲದಲ್ಲಿ ಜಾತ್ರೆಗಳೆಂದರೆ ಮುಖ್ಯವಾಗಿ ಧಾರ್ಮಿಕ ವೈವಿಧ್ಯತೆಯನ್ನು ಕಾಣುವಂತಹ ಅಥವಾ ಧರ್ಮವನ್ನು ಎತ್ತಿ ಹಿಡಿಯುವಂತಹ ಸ್ಥಳಗಳಾಗಿ ಪರಿಚಯವಿದ್ದವು. ಜಾತ್ರೆಗಳಿಗೆ ಹಿಂದಿನ ಕಾಲದಲ್ಲಿ ಶ್ರೀಮಂತರು ಮಾತ್ರ ಎತ್ತಿನ ಬಂಡಿಗಳಲ್ಲಿ ಹೋಗುತ್ತಿದ್ದರು, ಬಡವರು ಹರಕೆ ಕಟ್ಟಿಕೊಂಡವರು ಕಾಲ್ನಡಿಗೆಯಿಂದಲೇ ಜಾತ್ರಾ ಸ್ಥಳವನ್ನು ತಲುಪುತ್ತಿದ್ದರು. ಕಾಲ್ನಡಿಗೆ ಬರುತ್ತಿದ್ದರಿಂದ ದೇಹ ಸ್ಥಿತಿ ಉತ್ತಮವಾಗುತ್ತಿದ್ದು ಆರೋಗ್ಯವನ್ನು ಕಾಪಾಡುವಲ್ಲಿ ಅದು ಉಪಯುಕ್ತವಾಗುತ್ತಿತ್ತು. ದೇವರಿಗೆ ಹರಿಕೆಯನ್ನು ತೀರಿಸಿ ತಮ್ಮ ಕಷ್ಟ–ಕಾರ್ಪಣ್ಯಗಳನ್ನು ನಿವಾರಿಸಿದ ದೇವರಿಗೆ ನಾವು ಮಾಡುವ ಸೇವೆ ಎಂದೇ ಭಾವಿಸುತ್ತಿದ್ದರು.

ಜಾತ್ರೆ ಎಂದರೆ ಮಡಿ–ಮೈಲಿಗೆ ಕೆಲವು ನಿರ್ದಿಷ್ಟ ನಿಯಮಗಳನ್ನು ಕಟ್ಟುಪಾಡುಗಳನ್ನು ಪಾಲಿಸಿಕೊಂಡು ಬರುತ್ತಿದ್ದ ಜನಪದರು ನಿಷ್ಠೆಯಿಂದ ಜಾತ್ರೆಗಳನ್ನು ಆಚರಿಸಿ, ಭಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು. ಯಾವುದೇ ವಿಧಿಯನ್ನು ಹಿಂದಿನವರು ಆಚರಿಸಿಕೊಂಡು ಬಂದಂತೆ ಪ್ರತಿಯೊಂದು ವಿಷಯದಲ್ಲೂ ಅನುಸರಣೆ ಇರುತ್ತಿತ್ತು. ಹಿಂದಿನಿಂದ ಆಚರಿಸಿಕೊಂಡು ಬಂದ ಪದ್ಧತಿಗಳನ್ನು ಬದಲಾಯಿಸಿದರೆ ದೇವರಕೋಪಕ್ಕೆ ತುತ್ತಾಗ ಬೇಕಾಗುತ್ತದೆ. ಇದರಿಂದ ಜೀವನಕ್ಕೆ ಜೀವಕ್ಕೆ ಅನಾಹುತ ಆಗಬಹುದೆಂಬ ಭಯದಿಂದಲೇ ಜನಪದರು ಬೆಳೆದು ಬಂದರು. ಮುಂದೆ ಕಾಲ ಬದಲಾದಂತೆಲ್ಲಾ ಜನಪದರ ಪದ್ದತಿ ರಿವಾಜುಗಳಲ್ಲಿ ಕ್ರಮೇಣ ಸಡಿಲವಾಗಿ ಬದಲಾವಣೆ ರೂಪಗೊಂಡ ಆಚರಣೆಗಳು ಜಾರಿಗೆ ಬಂದವು. ಜಾತ್ರೆಗಳು ಪರಂಪರೆಯಿಂದಲೂ ವೈಭವವಾಗಿ ಆಚರಿಸಿಕೊಂಡು ಬರುತ್ತಿವೆ. ರೂಪ, ಸ್ವರೂಪ ಆಶಯಗಳಲ್ಲಿ ಕೆಲವು ಬದಲಾವಣೆಗಳಾಗುತ್ತಿದ್ದರೂ ಆ ಪರಂಪರೆ ಮಾತ್ರ ಇಂದಿಗೂ ಜಾರಿಯಲ್ಲಿದೆ.

ಜಾತ್ರೆಗಳಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಕಲೆ ಮತ್ತು ಕ್ರೀಡೆಗಳು. ಜಾತ್ರೆ ಎಂಬುದು ಊರಿನ ಒಗ್ಗಟ್ಟಿನ ಸಂಕೇತವಾಗಿದ್ದು ಊರಿನ ಜನರಿಗೆ ಅಥವಾ ಜಾತ್ರೆಗೆ ಬಂದಂತಹ ಜನರಿಗೆ ಮತ್ತಷ್ಟು ಪ್ರೇರಣೆಯಾಗಿ ಕ್ರೀಡೆಗಳು ಅಲ್ಲಿ ವಿಜೃಂಭಿಸುತ್ತವೆ. ಜನಪದರು ಕಲಿತು ಬೆಳೆಸಿಕೊಂಡು ಬಂದಿರುವಂತಹ ಅದೆಷ್ಟೋ ಕಲೆಗಳು ಇಂತಹ ಸಂದರ್ಭದಲ್ಲಿ ಜೀವವನ್ನು ಪಡೆದು ಪ್ರದರ್ಶನವಾಗುತ್ತವೆ. ಕಲಾ ಪ್ರದರ್ಶನಗಳಿಂದ ಜಾತ್ರೆಗಳು ಮತ್ತಷ್ಟು ವೈಭವೀಕರಣಗೊಳ್ಳುತ್ತಿವೆ. ಜಾತ್ರೆಗಳು ಧಾರ್ಮಿಕವಾಗಿ ಎಷ್ಟು ಮಹತ್ವ ಪಡೆದಿವೆಯೋ ಆರ್ಥಿಕ ಸ್ಥಿತಿಗತಿಗೂ ಅಷ್ಟೆ ಮಹತ್ವ ದೊರೆಯಬೇಕು. ಪ್ರಾಚೀನ ಕಾಲದಿಂದಲೂ ಜಾತ್ರೆಗಳು ವ್ಯಾಪಾರ, ವಾಣಿಜ್ಯ, ವ್ಯವಹಾರಗಳಿಗೆ ಪ್ರಸಿದ್ಧಿಯನ್ನು ಪಡೆದಿವೆ.

ಸಮಾಜದ ದೃಷ್ಟಿಯಿಂದ ಜಾತ್ರೆಗಳು ತನ್ನದೆ ಆದ ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು ಪಡೆದಿದ್ದು ಸಾಮೂಹಿಕ ದೃಷ್ಟಿಕೋನವನ್ನು ಹೊಂದಿವೆ. ಪರಸ್ಪರ ಜನಪದರಲ್ಲಿ ಅನನ್ಯತೆಯನ್ನು ಒಗ್ಗಟ್ಟನ್ನು ಕಾಪಾಡಿಕೊಂಡು ಬರುವಲ್ಲಿ ಯಶಸ್ವಿಯಾಗಿವೆ. ಇಲ್ಲಿ ನೆಡೆಯುವ ಜಾತ್ರೆಯಲ್ಲಿ ಯಾವುದೇ ಭಿನ್ನ ಅಭಿಪ್ರಾಯಗಳಿಲ್ಲದೆ ಎಲ್ಲಾ ಜಾತ್ರೆಗಳಲ್ಲಿ ಎಲ್ಲಾ ಜನರು ಸೇರಿಯೇ ಆಚರಿಸುತ್ತಾರೆ. ಹಾಗೆಯೇ ಜಾತ್ರೆಗಳು ಜನರನ್ನು ಸೇರಿಸುವ ಜನಪದರಲ್ಲಿ ಬಾಂಧವ್ಯವನ್ನು ಬೆಸೆಯುವ ಮಾಧ್ಯಮಗಳಾಗಿಯೂ ಮಹತ್ವವನ್ನು ಪಡೆದಿವೆ. (ಎಸ್.ಸಿ ಶಿವಕುಮಾರ ಸ್ವಾಮಿ,೧೯೮೮,ಪುಟ-೧೫), ಗ್ರಾಮೀಣ ಪ್ರದೇಶದಲ್ಲಿ ರೈತರು ಜಾತ್ರೆ, ಊರಹಬ್ಬ, ಗ್ರಾಮ ದೇವತೆ ಹಬ್ಬ ನಡೆಸುವ ಉದ್ದೇಶ ಗ್ರಾಮದಲ್ಲಿನ ಸಾಮಾಜಿಕ ಜೀವನ ಸುಗಮವಾಗಿ ಸಾಗಲೆಂದು ಆರ್ಥಿಕ ಅಭಿವೃದ್ಧಿಗಾಗಿ ದುಷ್ಟಶಕ್ತಿಗಳ ಕಾಟದಿಂದ ವಿಮುಕ್ತ ಹೊಂದುವ ಸಲುವಾಗಿ ಜಾತ್ರೆಯನ್ನು ಮಾಡುತ್ತಾರೆ.

ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಗ್ರಾಮದಲ್ಲಿ ಉಡಸಲಮ್ಮ ದೇವಿಯ ದೇವಸ್ಥಾನವಿದ್ದು ದಿನನಿತ್ಯ ಪೂಜಾ ಕಾರ್ಯಗಳು ನಡೆಯುತ್ತಿದ್ದು ಈ ದೇವಿಯ ಜಾತ್ರೆಯನ್ನು ಮೂರು ವರ್ಷಕ್ಕೆ ಒಂದು ಸಾರಿ ಮಾಡುತ್ತಾರೆ. ಸುಮಾರು ೬೦೦ ವರ್ಷಗಳ ಹಿಂದಿನಿಂದ ಜಾತ್ರೆ ಮಹೋತ್ಸವವನ್ನು ತಮಟಕಲ್ಲು ಗ್ರಾಮದಲ್ಲಿ ನಡೆಸಿಕೊಂಡು ಬಂದಿರುತ್ತಾರೆ. ಮೂರು ವರ್ಷಕ್ಕೆ ಒಂದು ಸಾರಿ ಹಂಪಿ ಹುಣ್ಣಿಮೆ ಆಗಿ ೯ ದಿನಕ್ಕೆ ಈ ಜಾತ್ರೆಯನ್ನು ಮಾಡುತ್ತಾರೆ. ಜಾತ್ರೆಯನ್ನು ಮಾಡುವುದಕ್ಕೂ ಮುಂಚೆ ಊರಿನ ಹಿರಿಯರೆಲ್ಲ ಸೇರಿ ಮಾತು ಕತೆ ನಡೆಸಿ ಜಾತ್ರೆ ಮಾಡುವ ದಿನವನ್ನು ನಿಗದಿ ಪಡಿಸಿದ ನಂತರ ಊರಿನ ಜನರಿಗೆಲ್ಲ ತಿಳಿಸಲು ತಮಟೆಯ ಮೂಲಕ ಜಾತ್ರೆಯ ದಿನವನ್ನು ಘೋಷಣೆ ಮಾಡುತ್ತಾರೆ. ಇದನ್ನು ಸಾರುವಿಕೆ ಎನ್ನುತ್ತಾರೆ.

**ಸಾರುವಿಕೆ :** ಸಾರುವಿಕೆ ಎಂದರೆ ಅಂಕಿತ ಹಾಡುವುದು ಅಥವಾ ಗ್ರಾಮೀಣ ದೇವತೆಯ ಜಾತ್ರೆ ನಡೆಯುವುದನ್ನು ಗೊತ್ತುಪಡಿಸುವುದು ಎಂದು. ಜಾತ್ರೆ ಪ್ರಾರಂಭದ ಮುನ್ನ ಎಚ್ಚರಿಕೆಯಾಗಿ ಕಂಡುಬರುವ ಶಾಸ್ತ್ರ.

ಹೆಣ್ಣು ದೇವತೆಗಳ ಪೂಜೆಯಾಗಲೀ ಅಥವಾ ಜಾತ್ರೆಯಾಗಲೀ ಮಂಗಳವಾರದಂದು ಪ್ರಾರಂಭ ಮಾಡುತ್ತಾರೆ. ಮೊದಲಿನ ದಿನ ಮಂಗಳವಾರ ರಾತ್ರಿ ಉಡಸಲಮ್ಮನನ್ನು ಮದುವಣಗಿತ್ತಿಯನ್ನಾಗಿ ಮಾಡುತ್ತಾರೆ. ಉಡಸಲಮ್ಮನನ್ನು ಹೂವುಗಳಿಂದ ಅಲಂಕರಿಸಿ ಆ ದಿನ ಊರಿನ ಜನರೆಲ್ಲರು ಮನೆಯನ್ನು ಮಡಿ ಮಾಡಿಕೊಂಡು ದೇವರಿಗೆ ನೈವೇದ್ಯ ಕೊಡುತ್ತಾರೆ. ಮರುದಿನ ಬೆಳಗ್ಗೆ ಅಂದರೆ ಬುಧುವಾರದಂದು ಬೆಳಗ್ಗಿನ ಜಾವ ೫–೬ ಗಂಟೆಗೆ ಗಂಗಾ ಪೂಜೆಗೆ ಹೋಗಿ ಪೂಜೆಮಾಡಿಕೊಂಡು ಬಂದು ೯ ಹೆಜ್ಜೆ ಮುಂದೆ ಬಂದ ನಂತರ ಒಂದು ಕುರಿಮರಿಯನ್ನು ಕಡಿಯುತ್ತಾರೆ. ಅದನ್ನು ಹೊಳೆಮರಿ ಎನ್ನುತ್ತಾರೆ. ಕುರಿ ಮರಿಯ ಹೊಟ್ಟೆಭಾಗಕ್ಕೆ ಕಡಿಯುತ್ತಾರೆ. ಅಲ್ಲಿಂದ ಮುಂದೆ ಊರ ಹೊರಗೆ ಕುರಿ ಮರಿಯನ್ನು ಆಹುತಿ ಕೊಡುತ್ತಾರೆ. ನಂತರ **ಚರಗ**. ಚರಗ ಅಥವಾ ಹುಲಸು ಉಗ್ಗುವುದು ಒಂದು ಆಚರಣೆಯಾಗಿ ಮಾರಿ ಜಾತ್ರೆಗಳಲ್ಲಿ ರೂಢಿಗತವಾಗಿದೆ. ಈ ಚರಗದ ಒಂದು ಹನಿ ರಕ್ತವನ್ನು ಬೇರೆ ಊರಿನವರು ಮುಟ್ಟುವಂತಿಲ್ಲ. ಕಟ್ಟು ನಿಟ್ಟಾಗಿ ಕಾವಲಿರುತ್ತಾರೆ. ಇನ್ನು ಕೆಲವು ಹಳ್ಳಿಗಳಲ್ಲಿ ಜಾಲಿ ಮುಳ್ಳು, ಬಳ್ಳಾರಿ ಜಾಲಿ ಮುಳ್ಳು, ನೆಗ್ಗಿ ಮುಳ್ಳುಗಳ ಬೇಲಿಯನ್ನು ಇಡೀ ಗ್ರಾಮಕ್ಕೆ ಸುತ್ತುವರಿಯುತ್ತಾರೆ. ಇದನ್ನು ಪಾರಿಬೇಲಿ ಎನ್ನುವರು. ಊರ ಹೊರಗೆ ಚದರ ಚಾವಡಿ ಹತ್ತಿರ ಗೌರಸಂದ್ರದ ಮಾರಮ್ಮನ ದೇವಸ್ಥಾನದ ಹತ್ತಿರ ದೇವರನ್ನು ಕೂರಿಸಿ ಆ ದಿನವೇ ಪಟ್ಟದಕೋಣವನ್ನು ಬಲಿ ಕೊಡುತ್ತಾರೆ. ಗುರುವಾರದಂದು ದೇವಿಗೆ ಹರಕೆ ಹೊತ್ತಿರುವವರು ಚಿಕ್ಕಮಕ್ಕಳಿಗೆ ಬೇವಿನ ಸೀರೆ ಉಡಿಸುವುದು, ಅಕ್ಕಿ ಮೀಸಲು ನೀಡುವುದು, ಮಂಗಳಾರತಿ ಮಾಡಿಸುವುದು ಹಾಗೂ ಈ ದಿನವೇ ಬೇಟೆಯನ್ನು ಕಡಿಯತ್ತಾರೆ. ಆದ್ದರಿಂದ ಇದಕ್ಕೆ ಬೇವು ಭೇಟಿ ಎಂದು ಕರೆಯುವರು. ಶುಕ್ರವಾರದಂದು ಸಿಡಿ ಆಡುತ್ತಾರೆ. ಸಿಡಿ ಆಡುವುದಕ್ಕೂ ಮುಂಚೆ ಅಮ್ಮನ ಸಿಡಿ ಕಂಬಕ್ಕೆ ಗೌಡರ ಮನೆಯಿಂದ ಪೂಜೆ ಸಾಮಾನು ಎಡೆಯನ್ನು ತಂದು ಕಂಬಕ್ಕೆ ಪೂಜೆ ಮಾಡುತ್ತಾರೆ. ಅನಂತರ ಗೌಡರ ಮನೆಯಿಂದ ತಂದ ಹರಳೆಣ್ಣೆ, ಬಾಳೆ ಹಣ್ಣು ಅರಿಸಿನವನ್ನು ತಳವಾರರು ಕಂಬಕ್ಕೆ ಹಚ್ಚುತ್ತಾರೆ. ಬಡಿಗೇರು ಸಿಡಿ ಕಂಬಕ್ಕೆ ಮಂಟಪ ಕಟ್ಟುತ್ತಾರೆ. ಸಂಜೆ ೪–೫ ಗಂಟೆಗೆ ಇದೇ ಊರಿನ ಹರಿಜನರು ಸಿಡಿ ತಿರುಗಿಸುತ್ತಾರೆ. ಅವರಲ್ಲಿ ಉಪವಾಸವಿರುವ ಇಬ್ಬರು ವ್ಯಕ್ತಿಗಳು ಸಿಡಿ ಆಡಲು ಕೊಂಡಿ ಜೋಡಿಸಿ ಸಿಡಿ ಆಡುತ್ತಾರೆ. ಆಧುನಿಕ ಜಗತ್ತಿನಲ್ಲಿ ಜಾತ್ರೆಗಳ ಸ್ವರೂಪ ಹಲವು ಬದಲಾವಣೆಗೆ ಒಳಗಾಗಿರುವಂತೆ ಕಂಡು ಬಂದರೂ ಆಧುನಿಕತೆಯ ಪ್ರಭಾವದಲ್ಲಿ ತನ್ನ ಮೊದಲಿನ ತೀವ್ರತೆಯನ್ನು ಕಡಿಮೆಮಾಡಿಕೊಂಡು ಕೇವಲ ಸಂಕೇತ ಮಟ್ಟಕ್ಕಿಳಿದಿರುವುದು ಕಂಡುಬರುತ್ತದೆ.

**ಸಿಡಿಯಾಡುವುದು** : ಹಿಂದೆ ಸಿಡಿಯಾಡಿಸುವಾಗ ಸಿಡಿಯಾಡಿಸುವ ವ್ಯಕ್ತಿಯ ಬೆನ್ನ ಹುರಿಗೆ ಕಬ್ಬಿಣದ ಕೊಂಡಿ ಸಿಕ್ಕಿಸಿ ಸಿಡಿಯಾಡಿಸುತ್ತಿದ್ದರು. ಆಧುನಿಕ ಕಾನೂನು ಇದಕ್ಕೆ ಅಡ್ಡಿಯಾಗಿರುವುದರಿಂದ ಮತ್ತು ಜನಮನದಲ್ಲಿ ಎಚ್ಚರ ಮೂಡ ತೊಡಗಿರುವುದರಿಂದ ಈ ಕೊಂಡಿ ಸಿಡಿ ಬಟ್ಟೆ ಸಿಡಿಯ

ರೂಪಕ್ಕೆ ಇಳಿದಿದೆ. ಇವರಿಗೆ ಊರಿನ ಗೌಡರು ಹೊಸ ಬಟ್ಟೆಯನ್ನು ಕೊಡುತ್ತಾರೆ. ಇನ್ನು ಶನಿವಾರ ೯-೧೦ ಗಂಟೆಗೆ ಗಾವು ಜಿಗಿಯುತ್ತಾರೆ. ಹೊಳೆಗೆ ಹೋಗಿ ಪಾತಯ್ಯಗಳು (೯ ಜನ) ಬರುತ್ತಾರೆ. ಗಂಗಾ ಪೂಜೆ ಮಾಡಿಕೊಂಡು ದೇವಸ್ಥಾನದ ಹತ್ತಿರ ಬರುವಾಗ ಒಂದು ಗಾವು ಮರಿ ಸಿಗಿಯುತ್ತಾರೆ. ಗಾವು ಪದವು ಗಟ್ಟಿಯಾಗಿ ಹಿಡಿದುಕೊಳ್ಳುವ ಕ್ರಿಯೆಗೆ ಬಳಸುತ್ತಾರೆ. ಪೋತನಾಯಕ (ರಾಜ ಅಥವಾ ಗಂಗ ಮತಸ್ಥರ ನಾಯಕ) ಕುರಿಯನ್ನು ಸಿಗಿದು ರಕ್ತ ಹೀರುತ್ತಾನೆ. ಈ ಸಂದರ್ಭದಲ್ಲಿ ಕುರಿಯನ್ನು ತನ್ನ ಅಮಾನುಷ ಶಕ್ತಿಯ ಕಂಕುಳಲ್ಲಿ ಪಟ್ಟುಹಾಕಿ ಪ್ರಾಣಿಯ ಕೆಳತುಟಿ ಹರಿದು ಗೋಮಾಳಿಗೆಯ ನಾಳದಿಂದ ರಕ್ತ ಹೀರುತ್ತಾನೆ. ಇಂತಹ ಅಮಾನವೀಯ ಕ್ರಿಯೆ ಹಿಂಸೆ ಎಂಬ ಅರಿವು ಸಿಗಿಯುವಾತನಿಗೆ ಇರುವುದಿಲ್ಲ. ರಕ್ತ ಕೆಳಗೆ ಬಿದ್ದು ಧೂಳನ್ನು ಸೇರಿದ ನಂತರ ಪ್ರಾಣಿಯನ್ನು ವಶಪಡಿಸಿಕೊಳ್ಳುವರು. ಹೀಗೆ ಧೂಳಿನಲ್ಲಿ ಬೆರೆತ ರಕ್ತದ ಮೇಲೆ ದೇವಿಯ ಉತ್ಸವ ಮೂರ್ತಿಯನ್ನು ಹೊತ್ತು ನಡೆದಾಡುತ್ತಾರೆ. ಇಂತಹ ಆಚರಣೆಗೆ ಧೂಳ್ಮರಿ ಸೇವೆ ಎಂದು ಹೆಸರು. ಗಾವು ಮರಿ ದೇವರ ಮುಂದೆ ಸಿಗಿದು ಗುಂಡಿಯಲ್ಲಿ ಹೂತು ಪೂಜೆಮಾಡುತ್ತಾರೆ. ಮಧ್ಯಾಹ್ನ ೧೨ ಗಂಟೆಗೆ ಕುರಿಮರಿ ಹೊತ್ತು ತಂದು ಆ ಮರಿಯನ್ನು ನಾಯಕ ಜನಾಂಗದ ಮನೆಯಲ್ಲಿ ಇಡುತ್ತಾರೆ. ಪಾತಯ್ಯಗಳು ಇದನ್ನು ಹುಡುಕುತ್ತಾರೆ. ಪಾತಯ್ಯಗಳಿಗೆ ಸಂಭಾವನೆಯಾಗಿ ಊರಿನ ಪ್ರಮುಖರು ಮತ್ತು ದೇವರ ಕಾರ್ಯವನ್ನು ನಡೆಸಿಕೊಡಲಿಕ್ಕೆ ಅವರಿಗೆ ಕಾಳು, ದುಡ್ಡು, ವಸ್ತು ಕೊಡುತ್ತಾರೆ. ೧೨ ಕೈವಾಡದವರಿಗೆ ಹೊಸಬಟ್ಟೆ ಕೊಡುತ್ತಾರೆ.

**ಹನ್ನೆರಡು ಕೈವಾಡದವರು :**

| | |
|---|---|
| ೧. ಗೌಡ | ೦೭. ತೋಟಿ |
| ೨. ಶಾನುಭೋಗ | ೦೮. ತಳವಾರ |
| ೩. ಬಡಗಿ | ೦೯. ಕಮ್ಮಾರ |
| ೪. ಪುರೋಹಿತರು | ೧೦. ಆಚಾರರು |
| ೫. ಗಂಗೆ ಮಗ | ೧೧. ಕಂಬಾರರು |
| ೬. ಮಡಿವಾಳರು | ೧೨. ಶೀಲವಂತರು |

ಆನಂತರ ಊರ ಹೊರಗೆ ದೇವಸ್ಥಾನದಿಂದ ಗಂಗಾ ಸ್ನಾನಕ್ಕೆ ಪಾತಯ್ಯಗಳು ಹೋಗುತ್ತಾರೆ. ಊರ ನಾಯಕ ಜನಾಂಗ ಮನೆಯಲ್ಲಿ ಕುರಿಮರಿಯನ್ನು ಹುಡುಕಿ ತೆಗೆದುಕೊಂಡು ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿ ಅದನ್ನು ಹೆಗಲಮೇಲೆ ಹೊತ್ತುಕೊಂಡು ದೇವಸ್ಥಾನದ ಹತ್ತಿರ ದೇವಸ್ಥಾನದ ಬಾಗಿಲ ಎದುರು ೨ ಅಡಿ ಅಗಲ ೨ ಅಡಿ ಆಳ ಗುಂಡಿಯನ್ನು ತೆಗೆದು ಅದರಲ್ಲಿ ಅವರು ತಂದ ಕುರಿಮರಿಯನ್ನು ಜೀವಂತ ಇದ್ದಾಗಲೇ ಪಾತಯ್ಯಗಳು ಅದರ ಬಾಯಲ್ಲಿ ಅನ್ನ.

ನೀರು ಹಾಕಿ ಅಸಾದಿ ಚಾವಡಕ ಕರಿಸಿ ಆ ಮರಿಯನ್ನು ಆ ಗುಂಡಿಯಲ್ಲಿ ದಹನ ಮಾಡುತ್ತಾರೆ. ಆಸಾದಿ ಚಾವಡಿಕಾರ ಪಾತಯ್ಯಗಳನ್ನು ಊರಿನ ರಾಜ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಆನಂತರ ಊರಿನಿಂದ ಅಮ್ಮನನ್ನು ಮೆರವಣಿಗೆ ಮೂಲಕ ಊರಿನ ಒಳಗೆ ದೇವಸ್ಥಾನಕ್ಕೆ ತಂದು ಕೂರಿಸುತ್ತಾರೆ. ಇವತ್ತಿಗೆ ಅಮ್ಮನ ಜಾತ್ರೆ ಮುಕ್ತಾಯವಾಯಿತು. ೫ ದಿನ ಬೇಸಾಯವನ್ನು ಊರಿನಲ್ಲಿ ಯಾರು ಮಾಡುವುದಿಲ್ಲ. ನೆಲವನ್ನು ಅಗೆಯುವುದಿಲ್ಲ. ಪಾತಯ್ಯಗಳು ಮನೆಮನೆಗೆ ಹುಲಿಸಿನ ಕಾಳು ಎಂದು ಹಂಚುತ್ತಾರೆ. ಆ ಕಾಳನ್ನು ರೈತರು ಬೀಜ ಬಿತ್ತನೆ ಮಾಡುವಾಗ ಬೀಜಕ್ಕೆ ಸೇರಿಸಿ ಬಿತ್ತನೆ ಮಾಡುತ್ತಾರೆ. ಆಗ ನಾವು ಬಿತ್ತಿದ ಬೀಜ ಹೆಚ್ಚಿಗೆಯಾಗುತ್ತದೆ ಎಂದು ಪ್ರತೀತಿ ಇದೆ.

**ಆರ್ಥಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿ ಜಾತ್ರೆಗಳು :**

ಸಮಾಜ ಕೇವಲ ಒಬ್ಬ ವ್ಯಕ್ತಿಯಿಂದ ರೂಪುಗೊಂಡಿರುವಂತದ್ದಲ್ಲ, ಹಲವಾರು ಜನರ ಗುಂಪು ಸೇರಿ ಒಂದು ಸಮಾಜವಾಗಲು ಸಾಧ್ಯ. ಸಕಲ ದೃಷ್ಠಿಯಿಂದಲೂ ಸಮಾಜವನ್ನು ತಿಳಿದುಕೊಳ್ಳಬೇಕು ಅಲ್ಲಿ ಕಂಡು ಬರುವ ಸಂಪ್ರದಾಯ, ಸಂಸ್ಕೃತಿ, ಆಚಾರ–ವಿಚಾರ, ಧರ್ಮ, ವೃತ್ತಿ ಹೀಗೆ ಎಲ್ಲ ಅಂಶಗಳು ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮೀಣರ ಜನ ಜೀವನದಲ್ಲಿ ಮಹತ್ವದ ವಿಷಯವಾಗಿವೆ. ಜಾತ್ರೆಗಳೆಂದರೆ ಅಲ್ಲಿ ಸುತ್ತಮುತ್ತಲಿನ ಪ್ರದೇಶದ ಜನರು ಬಂದು ಸೇರುವುದರಿಂದ ಆ ಸ್ಥಳದಲ್ಲಿ ನಡೆಯುವ ವ್ಯಾಪಾರ ವಿಶೇಷವಾಗಿಯೇ ಇರುತ್ತದೆ. ಅಪಾರ ಜನಸಂಖ್ಯೆ ಸೇರುವ ಜಾತ್ರಾ ಸ್ಥಳ ವ್ಯಾಪಾರಸ್ಥರಿಗೆ ಅತ್ಯಂತ ಅನುಕೂಲಕರವಾದ ಪ್ರದೇಶ. ವರ್ಷವಿಡೀ ಅಂಗಡಿಗಳಲ್ಲಿ ಕುಳಿತರೂ ವ್ಯಾಪಾರದ ವಹಿವಾಟು ಅಷ್ಟಕಷ್ಟೆ ಇರುತ್ತದೆ. ಜಾತ್ರೆ–ಉತ್ಸವಗಳಲ್ಲಿ ಕೆಲವೇ ದಿನಗಳಲ್ಲಿ ಅಪಾರ ಲಾಭವನ್ನು ಪಡೆಯಬಹುದಾಗಿದೆ. ಕಾಲ ಬದಲಾದಂತೆಲ್ಲಾ ಮನುಷ್ಯನ ಸಹಜ ಗುಣಗಳು ಮರೆಯಾಗಿ ಬಹುಶ: ಸಾಮಾನ್ಯವಾಗಿ ವ್ಯಾಪಾರ ಬಾವವೇ ತುಂಬಿಕೊಂಡಿರುವಂತಹ ಜಾತ್ರೆಗಳು ಕ್ರಮೇಣ ವಾಣಿಜ್ಯೀಕರಣಗೊಳ್ಳುತ್ತವೆ. ಪ್ರತಿಯೊಂದನ್ನು ವ್ಯಾಪಾರ ಮನೋಭಾವದಿಂದಲೇ ನೋಡುತ್ತಾರೆ. ಜೊತೆಗೆ ಇಂದಿನ ದಿನಗಳಲ್ಲಿ ಎಲ್ಲವೂ ಯಂತ್ರಗಳಿಂದಲೇ ತಯಾರಾಗುತ್ತಿದ್ದು ಅವುಗಳ ಬೆಲೆ ಗುಣಮಟ್ಟ ಬದಲಾಗುತ್ತಿದೆ.

ಜಾತ್ರೆಗಳು ಪರಸ್ಪರವಾಗಿ ಸಾಮುದಾಯಿಕ ಸಂಬಂಧಗಳನ್ನು ಗಟ್ಟಿಗೊಳ್ಳುವಂತೆ ಮಾಡುತ್ತವೆ. ಪರಸ್ಪರ ಕೊಡುಕೊಳ್ಳುವಿಕೆಯ ಮೂಲಕ ಎಷ್ಟೋ ಒಡೆದ ಮನಸ್ಸುಗಳು ಜಾತ್ರೆಯ ಸಂದರ್ಭದಲ್ಲಿ ಒಂದಾಗುವುದನ್ನು ಕಾಣಬಹುದಾಗಿದೆ. ಯಾವುದೇ ಜಾತ್ರೆಯಿರಲಿ ಜಾತ್ರೆ ನಡೆಯುವ ಸ್ಥಳ ಅಥವಾ ಊರಿನ ಜನರಿಗೆ ಮೊದಲ ಆದ್ಯತೆ. ತಮಟಕಲ್ಲಿನಲ್ಲಿ ಹಂಪೆ ಹುಣ್ಣಿಮೆ ದಿನ ಆಂಜನೇಯನ ತೇರನ್ನು ಮಾಡುತ್ತಾರೆ. ಅಷ್ಟೆ ಅಲ್ಲದೆ, ಆಂಜನೇಯ ಸ್ವಾಮಿ ಚಿತ್ರದುರ್ಗ ಜಿಲ್ಲೆಯಲ್ಲಿ ತುಂಬ ಪ್ರಸಿದ್ಧಿಯನ್ನು ಪಡೆದಿರುವುದು. ಜಾತ್ರೆ ಸಮಯದಲ್ಲಿ ಮಾತ್ರವಲ್ಲ ಪ್ರತಿನಿತ್ಯವೂ ಭಕ್ತಾದಿಗಳು ಪೂಜೆಮಾಡಿಸಲು ಬರುವುದರಿಂದ ಇಲ್ಲಿನ ಸ್ಥಳೀಯರೇ ದೇವಸ್ಥಾನದ ಅಕ್ಕ ಪಕ್ಕ

ಅಂಗಡಿಗಳನ್ನು ಇಟ್ಟು ತೆಂಗಿನ ಕಾಯಿ, ಬಾಳೇಹಣ್ಣು, ಕರ್ಪೂರ, ಊದಿನ ಬತ್ತಿ, ಹೂವಿನ ಹಾರ ಮೊದಲಾದ ವಸ್ತುಗಳನ್ನು ಮಾರುವುದನ್ನು ಗಮನಿಸಬಹುದು. ಜಾತ್ರೆ ನಡೆಯುವ ಸ್ಥಳದಲ್ಲಿ ತಮಗೆ ಇಷ್ಟ ಬರುವಂತಹ ಅಥವಾ ತಮ್ಮ ಶಕ್ತಿಯಾನುಸಾರ ವ್ಯಾಪಾರವನ್ನು ಮಾಡಬಹುದು. ಸ್ಥಳೀಯರಿಗೆ ಜಾತ್ರಾ ಸ್ಥಳಗಳಲ್ಲಿ ಮುಕ್ತ ಅವಕಾಶವಿದ್ದು, ಇವರಿಗೆ ಮೊದಲ ಆದ್ಯತೆಯನ್ನು ಕಲ್ಪಿಸಿಕೊಡಲಾಗುತ್ತದೆ. ಸ್ಥಳೀಯವಾಗಿ ವ್ಯಾಪಾರ ಮಾಡುವವರು ಜಾತ್ರೆಗಿಂತ ಒಂದೆರಡು ದಿನ ಮುಂಚಿತವಾಗಿಯೇ ತಮ್ಮ ಅಂಗಡಿಯನ್ನು ತೆರೆಯುತ್ತಾರೆ. ತಾವು ಮಾರಬಹುದಾದ ವಸ್ತುಗಳನ್ನು ಅಚ್ಚು ಕಟ್ಟಾಗಿ ಜೋಡಿಸುವ ಮೂಲಕ ಅಂಗಡಿಯನ್ನು ಸುಂದರವಾಗಿ ಆಕರ್ಷಿಸುವ ನಿಟ್ಟಿನಲ್ಲಿ ಸಾಕಷ್ಟು ಪ್ರಯತ್ನ ನಡೆಯತ್ತವೆ. ಕೆಲವರು ಜಾತ್ರೆಗಳಲ್ಲಿ ಮಾತ್ರ ವ್ಯಾಪಾರ ಮಾಡಿದರೆ ಉಳಿದ ದಿನಗಳಲ್ಲಿ ತಮ್ಮ ದಿನನಿತ್ಯದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಜಾತ್ರೆಗಳಲ್ಲಿ ನಡೆಯುವ ವ್ಯಾಪಾರದ ವಹಿವಾಟು ಪ್ರತಿನಿತ್ಯ ಊರುಗಳಲ್ಲಿ ಅಥವಾ ಅಂಗಡಿಗಳಲ್ಲಿ ನಡೆಯುವ ವ್ಯಾಪಾರದ ವಹಿವಾಟು ಪ್ರಮಾಣ ಭಿನ್ನವಾಗಿಯೇ ಇರುತ್ತದೆ. ಪ್ರತಿನಿತ್ಯದ ಲಾಭಕ್ಕಿಂತ ಹೆಚ್ಚಿಗೆ ದುಡಿಯುತ್ತಾರೆ. ಜಾತ್ರೆ ನಡೆಯುವುದು ಕೆಲವು ಗಂಟೆಗಳು ಅಥವಾ ಒಂದು ದಿನ ಮಾತ್ರ. ಅಂದರೆ ಜಾತ್ರೆಯಲ್ಲಿ ಉತ್ಸವ ಮೆರವಣಿಗೆಯ ಸಂದರ್ಭದಲ್ಲಿ ಭಕ್ತರು ಹಣ್ಣು, ಹೂವು, ಕಾಯಿ, ದೇವರಿಗೆಂದೇ ಬೇಕಾಗುವ ಅಮೂಲ್ಯ ವಸ್ತುಗಳಾಗಿರುವುದರಿಂದ ಈ ವಸ್ತುಗಳನ್ನು ಮಾರಾಟ ಮಾಡುವ ವ್ಯಾಪಾರಸ್ಥರೇ ಬಹಳಷ್ಟು ಜನರಿರುತ್ತಾರೆ.

ಜಾತ್ರೆಗಳಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಜಾತ್ರೆಯಲ್ಲಿ ಕಾಣುವ ಸರ್ಕಸ್ ಕಂಪನಿಗಳು. ತೊಟ್ಟಿಲು ಸರ್ಕಸ್, ಕುದುರೆ ಸವಾರಿ ಮುಂತಾದ ಕಲೆಗಳ ಪ್ರದರ್ಶನಗಳ ಜೊತೆಗೆ ಊರಿನ ಜನರು ಕಲೆಯಲ್ಲಿ ಆಸಕ್ತಿ ಇರುವವರು ತಾವೇ ಇಂತಿಷ್ಟು ಹಣವನ್ನು ಹಾಕಿಕೊಂಡು ಭಾಗವತರಿಗೆ ನೀಡುವ ಮೂಲಕ ನಾಟಕಗಳನ್ನು ಅಭಿನಯಿಸುತ್ತಾರೆ.

ಜನಪದರು ಆಚರಿಸುವ ಎಲ್ಲಾ ಚಟುವಟಿಕೆಗಳು, ಆಚರಣೆಗಳು, ಕಾರ್ಯಗಳು ಶುಭ–ಅಶುಭ ಎಲ್ಲವೂ ಸಂಸ್ಕೃತಿಯ ಕೊಡುಗೆ, ಅದರಲ್ಲೂ ಜಾತ್ರೆ ಉತ್ಸವಗಳು ಸಂಸ್ಕೃತಿಯನ್ನು ಮುಖ್ಯ ವೇದಿಕೆಯತ್ತ ಕೊಂಡೊಯ್ಯುವಲ್ಲಿ ಅತ್ಯಂತ ಪ್ರಮುಖವೆನಿಸುತ್ತವೆ. ಒಂದು ಸಂಸ್ಕೃತಿಯನ್ನು ಗುರುತಿಸಬೇಕೆಂದರೆ ಕೇವಲ ಜಾತ್ರೆ–ಉತ್ಸವಗಳಲ್ಲಿ ಕಾಣುವಂತಹ ಅಂಶಗಳಷ್ಟೆ ಅಲ್ಲ ಸಾಹಿತ್ಯಿಕವಾಗಿ, ಕಲಾತ್ಮಕವಾಗಿ ಪ್ರದರ್ಶನಗಳ ಮೂಲಕ ಹಾಡು ಕುಣಿತದ ಮೂಲಕ ಹೀಗೆ ವಿವಿಧ ಆಯಾಮಗಳಲ್ಲಿ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಲಕ್ಷಣಗಳು ನೇರವಾಗಿ ಅಥವಾ ಪರೋಕ್ಷವಾಗಿ ಕಂಡುಬರುತ್ತವೆ. ಆದುದರಿಂದ ಜಾತ್ರೆಗಳು ಸಾಂಸ್ಕೃತಿಕ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತವೆ.

ಸಾಮಾನ್ಯವಾಗಿ ಜಾತ್ರೆಗಳಲ್ಲಿ ಹಲವಾರು ರೀತಿಯ ಜನರು ಬಂದು ಸೇರುವುದರಿಂದ ಅದು ಸಾಂಸ್ಕೃತಿಕ ತಾಣ ಎಂದು ಪ್ರಸಿದ್ಧಿಯನ್ನು ಪಡೆದಿರುವುದು. ದೈವ ಧರ್ಮ ಜನಜೀವನದ ಸ್ಥಿತಿಗತಿಗಳನ್ನು ಸಮಾಜಕ್ಕೆ ತೋರಿಸಿಕೊಡುವಂತಹ ಮಹತ್ತರ ಕೆಲಸಗಳನ್ನು ಕಲೆಗೂ ಮಾಡುತ್ತವೆ.

ಎಷ್ಟೋ ಜನರು ತಮ್ಮ ಹೊಟ್ಟೆಪಾಡಿಗಾಗಿ ಏನೆಲ್ಲಾ ಕೆಲಸ ಕಾರ್ಯಗಳನ್ನು ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

**ಜಾತ್ರೆಗಳು ಮತ್ತು ಆಧುನಿಕತೆ :**

ಜಾತ್ರೆಗಳು ಮತ್ತು ಜಾತ್ರೆಗಳಿಗೆ ಸಂಬಂಧಿಸಿದ ಸಂಪ್ರದಾಯಗಳು ಭಾರತೀಯರಲ್ಲಿ ತುಂಬಾ ಪ್ರಾಚೀನವಾಗಿ ಬೆಳೆದುಕೊಂಡು ಬಂದಿವೆ. ಮಾನವನು ಅದಿಮ ಸಂಸ್ಕೃತಿಯಿಂದ ನಾಗರೀಕ ಬದುಕನ್ನ ಕಟ್ಟಿಕೊಂಡಂತಹ ಸಂದರ್ಭದಲ್ಲಿ ಜಾತ್ರೆಗಳು ಉಗಮಗೊಂಡವು. ಜಾತ್ರೆಗಳ ಕೇಂದ್ರಬಿಂದು ಮನುಷ್ಯನೇ ಆಗಿದ್ದಾನೆ. ಮನುಷ್ಯನಿಗಾಗಿಯೇ ಹುಟ್ಟಿದಂತಹವು ಜಾತ್ರೆಗಳು. ಮನುಷ್ಯನ ಹಲವು ಉಪಯೋಗಕ್ಕಾಗಿ ಹುಟ್ಟಿಕೊಂಡವು. ಹಾಗಾಗಿ ಜಾತ್ರೆಗಳೆಂದರೆ ಮಾನವನ ಜೀವನದಲ್ಲಿ ಅತೀ ಮುಖ್ಯವಾದ ಆಚರಣೆಗಳು. ಒಂದು ರೀತಿಯಲ್ಲಿ ಮಾನವನ ಪ್ರಬುದ್ಧತೆಯನ್ನು ಲೋಕಕ್ಕೆ ತಿಳಿಸುವಂತಹ ಕೆಲಸವನ್ನು ಈ ಜಾತ್ರೆಗಳು ಮಾಡುತ್ತವೆ. ಈ ಜಾತ್ರೆಯ ಕಲ್ಪನೆ ಮನುಷ್ಯನಲ್ಲಿ ಹುಟ್ಟಿದ್ದೇ ಒಂದು ಆಶ್ಚರ್ಯಕರ ಸಂಗತಿ. ಒಂದೇ ಸ್ಥಳದಲ್ಲಿ ನೂರಾರು ಜನರು ಸೇರಿ ತಮ್ಮ ತಮ್ಮ ಜೀವನಾನುಭವವನ್ನು ಹಂಚಿಕೊಳ್ಳುವಂತಹ ಈ ಜಾತ್ರೆಯ ಸ್ಥಳ ಇಡೀ ಜನಜೀವನದ ಸ್ಥಿತಿಗತಿಯನ್ನು ಸಮಾಜಕ್ಕೆ ತೋರಿಸಿಕೊಡುತ್ತದೆ. ಪರಂಪರಾಗತವಾಗಿ ತಾವು ನಂಬಿ ಪೂಜಿಸಿಕೊಂಡು ಬಂದಂತಹ ಆರಾಧ್ಯ ದೈವವನ್ನು ತಮ್ಮ ಮನಸಿಚ್ಛೆಯಂತೆ ಪೂಜಿಸಿ ಮೆರವಣಿಗೆ ಮೂಲಕ ಚಲನೆ ನೀಡುತ್ತಾರೆ. ಆಧುನಿಕತೆ ಎಂಬ ಪದಕ್ಕೆ ಒಂದು ನಿರ್ದಿಷ್ಟ ಅರ್ಥ ಕೊಡುವುದು ಸಾಧ್ಯವಿಲ್ಲವಾದರೂ ಹಲವು ಆಲೋಚನೆಗಳಿಂದ ಒಟ್ಟುಗೂಡಿದ ಒಮ್ಮತ ಅಭಿಪ್ರಾಯವನ್ನು ಸೂಕ್ಷ್ಮವಾಗಿ ಅರ್ಥೈಸಬಹುದು. ಆಧುನಿಕತೆ ಎಂದರೆ ಮನುಷ್ಯನ ಮಾನಸಿಕ ಹೊಸ ಆಲೋಚನೆಗಳ ರೀತಿ, ಕ್ರಿಯಾಶೀಲತೆಯ ಬದುಕು ಪಡೆಯಬೇಕು ಎಂಬ ಹಂಬಲ, ಆಸೆ ಹೀಗೆ ಇವೆಲ್ಲದರ ಒಟ್ಟಾರೆ ತಿರುಳು ಆಧುನಿಕತೆ ಹುಟ್ಟಲು ಕಾರಣ ಎಂದು ಹೇಳಬಹುದು. ಹಳ್ಳಿಗಳು ಜಾಗತೀಕರಣದ ಸುಳಿಗೆ ಸಿಲುಕಿ ಜಾಗತಿಕ ಮಾರುಕಟ್ಟೆಯತ್ತ ಮುಖಮಾಡಿ ದೇಶೀಯ ಸತ್ವ ಗುಣಗಳನ್ನು ಒಂದೊಂದಾಗಿ ಕೈಬಿಡುತ್ತಿವೆ. ಹಳ್ಳಿಯೇ ದೇಶದ ಬೆನ್ನೆಲುಬಾಗಿ ನಿಂತಿರುವ ಭಾರತ ದೇಶದಲ್ಲಿ ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಹಿಂದಿನಿಂದ ರೂಢಿಸಿಕೊಂಡು ಬಂದಿರುವಂತಹ ಸಾಂಸ್ಕೃತಿಕ ಪರಂಪರೆಯನ್ನು ಬಿಟ್ಟು, ಭಾರತೀಯ ಸಂಸ್ಕೃತಿ ಬೇರೊಂದು ಸಂಸ್ಕೃತಿಯ ರೀತಿ ನೀತಿಗಳನ್ನು ಆಚರಣೆಗಳನ್ನು ರೂಡಿಸಿಕೊಂಡು ಹೋಗುತ್ತಿದೆ. ಮುಖ್ಯವಾಗಿ ಜಾಗತೀಕರಣಕ್ಕೆ ಒಳಗಾಗಿ ಆಚರಿಸಲಾಗುತ್ತಿರುವ ಜಾತ್ರೆಗಳ ಬದಲಾವಣೆಯು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬದಲಾವಣೆಗೆ ಒಳಗಾಗಿವೆ.

ಸಂಸ್ಕೃತಿ, ಆರ್ಥಿಕತೆ, ಸಾಮಾಜಿಕತೆ ಇವು ದೇಶೀಯತೆಯನ್ನು ಪ್ರತಿನಿಧಿಕರಣಗೊಳಿಸುತ್ತಿದ್ದು ಈ ಮೂರು ಜಾಗತೀಕರಣದಿಂದ ತಮ್ಮ ಮೂಲ ರೂಪವನ್ನು ಕಳೆದುಕೊಂಡು ಕೇವಲ ಜಾತ್ರೆಗಳೆಂದರೆ ಧಾರ್ಮಿಕತೆ ಹಾಗೂ ಮತ ಪ್ರಚಾರ, ಮನೋರಂಜನೆ ಇಂತಹ ಧ್ಯೇಯೋದ್ದೇಶಗಳನ್ನು

ಹೊಂದುತ್ತಾ ಬರುತ್ತಿವೆ. ಅಂದಿನ ಜಾತ್ರೆಗಳ ಮೂಲಭಾವ ಮತ್ತು ಇಂದು ಬದಲಾದ ಉದ್ದೇಶಗಳನ್ನಿಟ್ಟುಕೊಂಡು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬದಲಾವಣೆ ಹೊಂದಿವೆ.

ಆರ್ಥಿಕವಾಗಿ ಜಾತ್ರೆಗಳಲ್ಲಿ ಮುಖ್ಯವಾಗಿ ಅಂಗಡಿ ಮುಗ್ಗಟ್ಟುಗಳು, ವ್ಯಾಪಾರ ಮಳಿಗೆಗಳು ಇವು ದೇಶೀಯ ವಸ್ತುಗಳಿರಬಹುದು ಅಥವಾ ಪ್ಲಾಸ್ಟಿಕ್ ವಸ್ತುಗಳಾಗಿರಬಹುದು. ಇಂತಹವುಗಳೆಲ್ಲ ಜಾತ್ರೆಗಳಲ್ಲಿ ಮಾರಾಟಗೊಳ್ಳುತ್ತಿದ್ದವು. ಈ ಹಿಂದೆಯೂ ಸಹ ಜಾತ್ರೆಗಳು ವ್ಯಾಪಾರ ಚಿಂತನೆಯನ್ನು ಹೊಂದಿದ್ದವು. ಅತ್ಯಂತ ಶ್ರದ್ಧೆ, ಪ್ರಾಮಾಣಿಕತೆಯಿಂದ ಅತ್ಯುತ್ತಮ ಗುಣಮಟ್ಟದ ವಸ್ತುಗಳನ್ನು ಜನರೇ ತಯಾರಿಸಿಕೊಂಡು ಬಂದು ಜಾತ್ರೆಗಳಲ್ಲಿ ಮಾರಾಟ ಮಾಡುತ್ತಿದ್ದರು. ಅದಕ್ಕೆಂದೇ ಜನಪದರು ಹತ್ತಾರು ಕೀ.ಮೀ. ದೂರ ನಡೆದುಕೊಂಡು ಅಥವಾ ಗಾಡಿಯಲ್ಲಿಯೋ ಬಂದು ತಮಗೆ ಬೇಕಾದಂತಹ ವಸ್ತುಗಳನ್ನು ಪಡೆಯುತ್ತಿದ್ದರು. ಯಾಕೆಂದರೆ ಹಿಂದೆ ಸಾರಿಗೆ ವ್ಯವಸ್ಥೆ ಈಗಿನಷ್ಟು ಸುಲಭಲಭ್ಯವಿರಲಿಲ್ಲ. ಜನಪದರು ತಾವು ಪಡೆಯಬೇಕೆನಿಸಿದ ವಸ್ತುಗಳಿಗೋಸ್ಕರ ವರ್ಷದ ಜಾತ್ರೆಗಳು ಬರುವವರೆಗೂ ಕಾಯುತ್ತಿದ್ದರು. ವಸ್ತುಗಳು ಇರುವ ಕಡೆ ಜನರು ಹುಡಿಕಿಕೊಂಡು ಹೋಗುತ್ತಿದ್ದರು. ವಸ್ತುಗಳನ್ನು ಕೊಳ್ಳಲೆಂದೇ ಸುಮಾರು ದಿನಗಳ ಹಿಂದಿನಿಂದಲೇ ಸಾಕಷ್ಟು ತಯಾರಿ ನಡೆಸುತ್ತಿದ್ದರು. ಎಂತಹ ವಸ್ತು ಬೇಕು. ಯಾವ ಬೆಲೆಗಳಲ್ಲಿ ಇರಬೇಕು ಎಂತಹ ಗುಣಮಟ್ಟದಿಂದ ಕೂಡಿರಬೇಕು ಹೀಗೆ ಮುಂತಾದ ವಿಷಯಗಳನ್ನೆಲ್ಲಾ ಚರ್ಚಿಸಿ ಜಾತ್ರೆಯ ದಿನದಂದು ಹೋಗಿ ಸೂಕ್ತ ವಸ್ತುಗಳನ್ನು ತರುವುದು ಹಿಂದಿನ ಜನರ ಪದ್ಧತಿಯಾಗಿತ್ತು.

ಆಧುನಿಕತೆ ಕಾಲಿಡುವುದಕ್ಕಿಂತ ಮುಂಚೆ ಜನಪದರಲ್ಲಿ ಅಥವಾ ವ್ಯಾಪಾರ ಮಾಡುವವರಲ್ಲಿ ಕೇವಲ ಜನಪದರ ಕಾಳಜಿಯಳ್ಳ ಜನರಿಗೆ ದೀರ್ಘಕಾಲ ಉಪಯೋಗವಾಗಬೇಕು. ಜನರು ಮತ್ತೊಮ್ಮೆ ವಸ್ತುಗಳನ್ನು ಕೊಂಡುಕೊಳ್ಳಬೇಕು ಅದರಿಂದ ಜನರಿಗೆ ಪ್ರಯೋಜನವೂ ಆಗುತ್ತದೆ ಎಂಬ ವಿಶಾಲ ಮನೋಭಾವ ವ್ಯಾಪಾರಿಗಳಿಗಿರುತ್ತಿತ್ತು. ಅದೊಂದು ಸಾಮಾಜಿಕ ಸೇವೆ ಎಂತಲೇ ಭಾವಿಸಲಾಗುತಿತ್ತು. ಮಾನವ ಮಾನವೀಯತೆ ಎಂಬ ಗುಣ ಮನುಷ್ಯನಿಗೆ ಸಹಜವಾಗಿ ಹೊಂದಿರುವಂತಹ ಗುಣವಾಗಿದ್ದವು.

ಕಾಲ ಬದಲಾದಂತೆಲ್ಲಾ ಮನುಷ್ಯನ ಸಹಜ ಗುಣಗಳು ಮರೆಯಾಗಿ ಬಹುಶ ಸಾಮಾನ್ಯವಾಗಿ ವ್ಯಾಪಾರ ಭಾವವೇ ತುಂಬಿಕೊಂಡಿರುವಂತಹ ಜಾತ್ರೆಗಳು ಕ್ರಮೇಣ ವಾಣಿಜ್ಯೀಕರಣಗೊಳ್ಳುತ್ತಾ ಪ್ರತಿಯೊಂದನ್ನು ವ್ಯಾಪಾರ ಮನೋಭಾವದಿಂದಲೇ ನೋಡುತ್ತಾರೆ ಜೊತೆಗೆ ಇಂದಿನ ದಿನಗಳಲ್ಲಿ ಎಲ್ಲವೂ ಯಂತ್ರಗಳಿಂದಲೇ ತಯರಾಗುತ್ತಿದ್ದು ಅವುಗಳ ಬೆಲೆ ಗುಣಮಟ್ಟ ಬದಲಾಗುತ್ತಿದೆ. ಮನುಷ್ಯನ ಭವಿಷ್ಯವನ್ನು ಒಂದು ಕಂಪ್ಯೂಟರ ಯಂತ್ರ ಹೇಳುತ್ತದೆ ಎಂದರೆ, ಮಾನವನ ಜೀವನ ಎಂತಹ ಹಂತಕ್ಕೆ ತಲುಪಿದೆ. ಮನುಷ್ಯ ಯಂತ್ರಗಳ ಅಡಿಯಾಳಾಗಿ ದುಡಿಯುತ್ತಿರುವ ಸಂದರ್ಭಗಳು ಎದುರಾಗುತ್ತಿವೆ. ಎಲ್ಲಾ ವಸ್ತುಗಳು ಪ್ಲಾಸ್ಟಿಕ್‌ನಿಂದ ತಯಾರಾಗುತ್ತಿರುವುದೇ ಆಗಿದೆ. ಒಮ್ಮೆ

ಕೊಂಡು ಹೋದರೆ ಅದು ಕೆಲವೇ ದಿನ ಬಳಕೆಗೆ ಬರುವಂತಹ ವಸ್ತುವಾಗಿರುತ್ತದೆಯೇ ವಿನಾ ಮತ್ತೊಂದು ಸಲ ಉಪಯೋಗಕ್ಕೆ ಬರಲಾರದು

ಜಾತ್ರೆಗಳನ್ನು ಸಾಮಾಜಿಕ ನೆಲೆಗಟ್ಟಿನಿಂದ ನೋಡುವುದಾದರೆ ಮಾನವ ಜಗತ್ತನ್ನು ವಿಸ್ತಾರವಾಗಿ ಹರಡಿಕೊಂಡಿರುವ ಬಳ್ಳಿಯಂತಿದೆ ಸಮಾಜ. ಮಾನವ ಜೀವನವನ್ನು ಕುರಿತಾಗಿ ವ್ಯವಸ್ಥಿತವಾಗಿ ತಾನೇ ಹೆಣೆದುಕೊಂಡ ಒಂದು ಬಲೆಯಂತೆ ಇಲ್ಲಿ ಅವನ ಬೌದ್ಧಿಕ ಮತ್ತು ಭೌತಿಕ ಜೀವನದ ಎಂತಹ ರಹಸ್ಯ ಅಡಗಿದ್ದರೂ ಸಹ ಜೀವನದ ತತ್ವ ನಿತ್ಯವೂ ಹೊಸತನದಿಂದ ಕೂಡಿರುತ್ತದೆ. ಮಾನವ ನಿರ್ಮಿತ ಸಮಾಜವು ಮಾನವನ ಎಲ್ಲಾ ಚಟುವಟಿಕೆಗಳನ್ನು ಆಗರವಾಗಿ ಕಟ್ಟಿಕೊಂಡಿರುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ ಕುಟುಂಬ, ಪರಿಸರ, ಸಾಂಸ್ಕೃತಿಕ, ಧಾರ್ಮಿಕ ಹೀಗೆ ಎಲ್ಲವನ್ನು ಸಮಾಜ ತನ್ನೊಳಗೆ ಸೇರಿಸಿಕೊಂಡಿರುತ್ತದೆ.

ಹಿಂದೆ ಜಾತ್ರೆಗಳು ಒಂದು ಗ್ರಾಮಕ್ಕೆ ಒಂದು ಜನಾಂಗಕ್ಕೆ ಒಂದು ದೇವತೆಗಳಿಗೆ ಸಂಬಂಧಿಸಿರುತ್ತಿದ್ದವು. ಇಲ್ಲಿ ಒಂದು ವಿಧವಾದ ಜನರು ಪಾಲ್ಗೊಳ್ಳುತ್ತಿದ್ದರು. ಹೊರಗಿನ ಜನರು ಆಚರಣೆ ಸಂಪ್ರದಾಯಗಳಿಂದ ಅಜ್ಞಾನ, ಮೌಢ್ಯತೆ, ಸಂಪರ್ಕದ ಅವ್ಯವಸ್ಥೆಯಿಂದ ಪಾಲ್ಗೊಳ್ಳುವುದಕ್ಕೆ ಆಗುತ್ತಿರಲಿಲ್ಲ. ಆದರೆ ಆಧುನಿಕತೆ, ವಿಜ್ಞಾನ ಬೆಳೆದಂತೆಲ್ಲಾ ಮಾನವ ತನಗೆ ಬೇಕಾದಂತಹ ಮೂಲಭೂತ ಸೌಲಭ್ಯಗಳನ್ನು ತಾನೇ ತಯಾರಿಸಿಕೊಳ್ಳತೊಡಗಿದ. ಮತ್ತೆ ಸಂಚಾರಿ ವ್ಯವಸ್ಥೆ ಬೆಳಕಿಗೆ ಬಂದು ಅಲ್ಲಿಂದ ಮುಂದಕ್ಕೆ ಅದೊಂದು ಮಾರ್ಗೋಪಾಯವಾಗಿ ಜನಸಂಪರ್ಕಕ್ಕೆ ನಾಂದಿಯಾಯಿತು. ಒಂದು ಪ್ರದೇಶದ ಜನ ಮತ್ತೊಂದು ಪ್ರದೇಶಕ್ಕೆ ಓಡಾತೊಡಗಿದರು, ಇದರಿಂದ ಅಲ್ಲಿ ಬಾಂಧವ್ಯಗಳು ಬೆಳೆದು ಸಂಸ್ಕೃತಿಗಳು ಬೆಳೆದವು. ಜನರು ತಮ್ಮ ಸಂಬಂಧಗಳನ್ನು ಹೆಚ್ಚಿಸಿಕೊಂಡರು. ಜನರು ಪರಸ್ಪರ ಹಂಚಿಕೊಳ್ಳುವ ಪದ್ಧತಿ ರೂಢಿಗೆ ಬರುವುದರ ಜೊತೆಗೆ ಏಕ ಸಂಸ್ಕೃತಿಯಿಂದ ಅನೇಕ ಸಂಸ್ಕೃತಿಗಳ ಮಿಲನದಿಂದ ಆಚರಣೆಗಳು ಮತ್ತಷ್ಟು ಬೆಳಕಿಗೆ ಬರಲು ಸಾಧ್ಯವಾಯಿತು.

ಜಾತ್ರೆಗಳು ಸಾಮಾಜಿಕ ಸಂಸ್ಕೃತಿಯನ್ನು ಕಾಪಾಡುತ್ತವೆ. ಜಾತ್ರೆಗಳು ತಮ್ಮಲ್ಲಿನ ಆದಾಯದಿಂದ ಆ ಊರಿನ ಜನರೆ ಒಂದು ಸಂಘವನ್ನು ಮಾಡಿಕೊಂಡು ಆ ಹಣವನ್ನು ಒಬ್ಬ ವ್ಯಕ್ತಿಗೆ ಬಡ್ಡಿಗೆ ಕೊಡುವುದರ ಮೂಲಕ ಬರುವ ಲಾಭವನ್ನು ಮುಂದಿನ ಜಾತ್ರೆಗೆ ಅಥವಾ ದೇವಾಲಯವನ್ನು ಜೀರ್ಣೋದ್ಧಾರ ಮಾಡಲು, ಶಾಲೆಗಳನ್ನು ದುರಸ್ತಿಗೊಳಿಸಲು ಉಪಯೋಗಿಸುತ್ತಾರೆ. ಜಾತ್ರೆಗಳು ಒಂದು ರೀತಿಯಲ್ಲಿ ಸಾಮಾಜಿಕ ಸೇವೆಯನ್ನು ಮಾಡುವ ಆದಾಯ ತರುವ ವೇದಿಕೆಗಳಾಗಿವೆ.

ಪ್ರಸ್ತುತ ದಿನಗಳಲ್ಲಿ ಜಾತ್ರೆಗಳೆಂಬ ಪಳೆಯುಳಿಕೆ ಅದೊಂದು ಭೂತಕಾಲದ ಸಂಸ್ಕೃತಿ ಎಂದು ಹೇಳಬಹುದು. ಮಾನವನ ಬೌದ್ಧಿಕತೆ ವಿಕಾಸವಾದಂತೆಲ್ಲಾ ಹೊಸ ಆವಿಷ್ಕಾರಗಳು ರೂಢಿಗತಗೊಂಡು ಆದಿಮ ಪರಂಪರೆಯಂತೆಯೇ ಚಾಲನೆಗೆ ಬಂದವು. ಇದರ ಜೊತೆಗೆ ಹೊಸತನವೂ ಸೇರಿಕೊಂಡಿತು.

ಭೂತ ವರ್ತಮಾನ ಕಾಲಗಳು ಒಂದನೊಂದು ತಳುಕು ಹಾಕಿಕೊಂಡು ಈ ರೀತಿ ನಿರಂತರ ಬದಲಾವಣೆಗೆ ಒಳಗಾಗುತ್ತ ಹೋಗುತ್ತದೆ. ಹಾಗಾಗಿ ಜಾತ್ರೆಯ ಸಂಸ್ಕೃತಿಯು ಸಹ ಮಾನವನ ಜೀವನದಲ್ಲಿ ಅದೊಂದು ಭಾಗವಾಗಿರುವುದರಿಂದ ಇದು ನಿರಂತರ ಬದಲಾವಣೆಯ ಕ್ರಮವನ್ನು ಹೊಂದಿದೆ. ಪ್ರಸ್ತುತ ಸಂದರ್ಭದಲ್ಲಿ ಅಥವಾ ವರ್ತಮಾನದಲ್ಲಿ ಜಾತ್ರೆಗಳ ಏರ್ಪಾಡು ಭೂತಕಾಲದೊಂದಿಗೆ ಸಮಕಾಲೀನದಲ್ಲಿ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಹೀಗೆಲ್ಲಾ ಸಂಸ್ಕೃತಿ ಬದಲಾವಣೆಯಿಂದ ಹೊಸ ರೂಪವನ್ನು ಹೊಂದಲಾಗುತ್ತದೆ. ಮನುಷ್ಯನ ಜೀವನ ಬದಲಾಗುತ್ತಾ ಹೋದಂತೆಲ್ಲಾ ಪರಂಪರೆ ಅಸ್ತಿತ್ವ ಸಹ ಬದಲಾವಣೆಗೊಳ್ಳುತ್ತಾ ಹೋಗುತ್ತದೆ. ಮಾನವನ ಜೀವನದ ಗತಿಯನ್ನು ಆಧರಿಸಿರುವ ಜಾತ್ರೆಗಳು ಸಹ ಬದಲಾಗುತ್ತವೆ. ಅಂದರೆ ಸಹಜವಾಗಿ ಮಾನವನ ಬದುಕಿನ ಭಾಗವಾಗಿರುವ ಜಾತ್ರೆಗಳಲ್ಲಿ ಅಷ್ಟೆ ಸಹಜವಾಗಿ ಬದಲಾವಣೆಗಳು ಕಂಡು ಬರುತ್ತವೆ. ಪುರಾತನ ಕಾಲದಲ್ಲಿ ಹಳ್ಳಿಗಳಲ್ಲಿ ಮಾರಿಯ ಜಾತ್ರೆಗಳು ನಡೆಯುತ್ತಿದ್ದು, ಅಲ್ಲಿ ಮಾರಿಗೆ ಪ್ರಾಣಿ ಬಲಿ ಮತ್ತು ಕೆಲವು ಕಡೆ ನರಬಲಿಯನ್ನು ನೀಡಲಾಗುತ್ತಿತ್ತು. ಕೆಲವು ಕಡೆ ಚಿಕ್ಕ ಮಕ್ಕಳನ್ನು ಬಲಿ ಕೊಡುವ ಪದ್ದತಿ ಇತ್ತು. ಅಷ್ಟೇ ಅಲ್ಲದೆ ಕೊಂಡಕ್ಕೆ ಸಿಡಿ ಆಚರಣೆ, ಕೊಂಡ ಹಾಯುವ ಆಚರಣೆಗಳು ಅಸ್ತಿತ್ವದಲ್ಲಿದ್ದವು. ಅಲ್ಲದೇ ಮಾನವನನ್ನು ಹಲವು ರೀತಿಯಲ್ಲಿ ಬಲಿ ಕೊಡಲಾಗುತ್ತಿತ್ತು. ಕೆಲವು ಹಳ್ಳಿಗಳಲ್ಲಿ ಗಾವು ಜಿಗಿಯುವುದು, ಬೇರೆ ಊರಿನ ಹುಲುಸು ತರುವುದು, ಈ ಸಂದರ್ಭದ ಹುಲುಸು ತರಲು ಹೋದ ವ್ಯಕ್ತಿ ಸಿಕ್ಕಿಬಿದ್ದರೆ ಅವನನ್ನು ಸಾಯಿಸುವ ಪದ್ಧತಿ ಈಗಲೂ ಇದೆ. ಇಂತಹ ವಿವಿಧ ರೂಪಗಳಲ್ಲಿ ಆಚರಣೆಗಳು ಜಾತ್ರೆಗಳು ಸಾಮಾನ್ಯವೆಂಬಂತೆ ಕಂಡು ಬಂದರು ವಿಶೇಷವಾಗಿ ಜಾತ್ರಾ ಸಂದರ್ಭಗಳಲ್ಲಿ ಹೆಚ್ಚು ವೈಭವೀಕರಿಸಲಾಗುತ್ತಿದ್ದು ಅಲ್ಲಿ ಅಂತಹ ಆಚರಣೆಗಳು ಬೆಳಕಿಗೆ ಬರುತ್ತಿದ್ದವು. ನೋಡುಗರಿಗೆ ಅದೊಂದು ಮನೋರಂಜನೆಯಾಗಿದ್ದರೂ ಆ ನೋವು ಅನುಭವಿಸುವವರಿಗೆ ಅದೊಂದು ಧರ್ಮಸಂಕಟ ಸಂದರ್ಭವಾಗಿರುತ್ತದೆ. ಹೀಗೆ ಜಾತ್ರೆಗಳು ಒಂದು ಕಾಲಕ್ಕೆ ಮಾನವನ ಮನೋರಂಜನಾ ಕ್ಷೇತ್ರವಾಗಿ ಮಾದರಿಯಲ್ಲಿತ್ತು.

ಆದರೆ ಇಂದಿನ ಜಾತ್ರಾ ಕ್ಷೇತ್ರ ಬೇರೊಂದು ರೂಪ ಪಡೆದು ಹೊಸ ರೀತಿಯ ಆನಂದವನ್ನು ನೀಡುವಂತೆ ಆಚರಣೆಯಾಗಿದೆ. ಸಮಯ ಬದಲಾದಂತೆಲ್ಲ ಕಾನೂನಿನ ಕಠಿಣ ನಿಯಮಗಳಿಂದ ಹಾಗೂ ಸಾಮಾಜಿಕ ಕಳಕಳಿಯಿಂದ ಕೆಲವು ಆಚರಣೆಗಳು ನಿಂತು ಹೋಗಿ ಮತ್ತು ಕೆಲವು ಆಚರಣೆಗಳು ಹೆಚ್ಚು ವೈಭವೀಕರಣವಿಲ್ಲದೆ ಒಳ ಒಳಗೆ ನಡೆಯುತ್ತಿವೆ. ಕೆಲವು ಆಚರಣೆಗಳು ಮಾನವ ಧರ್ಮದ ವಿರೋಧವಾಗಿವೆ.

ಸೇವೆ ಮಾಡುವ ರೂಪ ಬೇರೆ ಬೇರೆಯಾದರೂ ಅದರ ಮೂಲ ಆಶಯ ಮಾತ್ರ ದೌರ್ಜನ್ಯವೆ ಆಗಿತ್ತು. ಶೋಷಣೆಯೇ ಆಗಿತ್ತು. ಇಂದು ಸಹ ಮತ್ತೊಂದು ಮುಖವಾಡದಲ್ಲಿ ಈ ಶೋಷಣೆಗಳು ನಡೆಯುತ್ತವೆ. ಇಂದಿಗೂ ಜಾತ್ರೆಗಳಲ್ಲಿ ಆಯಾ ವರ್ಗಗಳಿಗೆ ಸೀಮಿತವಾದಂತಹ ಕೆಲಸಗಳನ್ನು ಅದೇ ವರ್ಗದ ಜನರು ಮಾಡಲೇಬೇಕು. ಅಂದರೆ ಮಡಿವಾಳ ದೇವರ

ಬಟ್ಟೆಗಳನ್ನು ಶುದ್ಧಮಾಡುವುದು, ಪಂಜು ಹಿಡಿಯುವುದು . ದೇವರು ಬರುವಾಗ ಪೂಜಾರಿಯ ಕಾಲಿಗೆ ಬಟ್ಟೆ ಹಾಸುವುದು, ಕುಂಬಾರ ದೇವರಿಗೆ ಅಥವಾ ಹಬ್ಬಕ್ಕೆ ಬೇಕಾದಂತಹ ವಸ್ತುಗಳನ್ನು ಮಾಡಿಕೊಡುವುದು. ಹರಿಜನರು ಊರನ್ನು ಸ್ವಚ್ಚಗೊಳಿಸುವುದು, ಪೂಜಾರಿಕೆ ಮಾಡುವವನು ಪೂಜಾರಿಯಾಗಿ ಹೀಗೆ ಮುಂದುವರೆಯುತ್ತಿದ್ದಾರೆ. ಜನರು ಬದಲಾಗುತ್ತಿದ್ದಾರೆ. ಆಚರಣೆಗಳು ಬದಲಾಗುತ್ತವೆ ಎಂಬುದು ಸತ್ಯಕ್ಕೆ ದೂರದ ಮಾತು. ಅದು ಹೊರನೋಟಕ್ಕೆ ಮಾತ್ರ. ಆದರೆ ಆಚರಣೆಗಳು ಮೂಲ ಗುಣವನ್ನು ಹೋಗಲಾಡಿಸುವುದು ಅಸಾಧ್ಯ. ಆದಿಮ ಸಂಸ್ಕೃತಿಯಿಂದ ಬಂದವುಗಳಾಗಿವೆ. ಇಂತಹ ಆಚರಣೆಗಳು ಅಂದು ಅಸ್ತಿತ್ವದಲ್ಲಿದ್ದವು. ನಂತರ ಪುರುಷಾಧಿಕಾರತ್ವ ಆರಂಭವಾದ ಕ್ಷಣದಿಂದ ಮಾತೃ ಸಂಸ್ಕೃತಿ ಮಾಯವಾಗುತ್ತಾ ಹೋಯಿತು. ಹೀಗೆ ಜಾತ್ರೆಗಳು ಒಂದೊಂದು ಹಂತದಲ್ಲಿ ಹಳೆಯದೆಲ್ಲವನ್ನು ಮರೆತು ಹೊಸದರ ಕಡೆಗೆ ಹೋಗುತ್ತಾ ಇಂದು ಜಾತ್ರೆಗಳೆಂದರೆ ಮನೋರಂಜನೆಗೋಸ್ಕರ ಜನರು ಆಚರಿಸಿಕೊಳ್ಳುವ ಹಬ್ಬ, ದಿನವಿಡೀ ದುಡಿತದಿಂದ ಬೇಸತ್ತ ಜನರು ನೆಮ್ಮದಿ ಶಾಂತಿ ಹಾಗೂ ಮನೋರಂಜನೆಗಾಗಿ ಜಾತ್ರೆ ನಡೆಸುತ್ತಾರೆ. ಹಿಂದೆ ಜಾತ್ರೆ ಜರುಗುವಾಗ ವೈಭವ ಎದ್ದು ಕಾಣುತ್ತಿತ್ತು. ಎಲ್ಲಾ ಸಮುದಾಯದ ಜನರು ಉತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. ನಾವೆಲ್ಲರೂ ಒಂದೇ ಎನ್ನುವ ಮನೋಭಾವ ಅವರದಾಗಿತ್ತು. ಆದರೆ ಜನಪದ ಸಂಸ್ಕೃತಿಯ ಮೇಲೆ ರಾಜಕೀಯ ಪ್ರಭಾವವುಂಟಾಗಿ ಜಾತ್ರೆಗಳು ದಿನೇದಿನೇ ಕಡಿಮೆಯಾಗುತ್ತಿವೆ.

# ಅಧ್ಯಾಯ ಮೂರು:
# ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಮಹಿಳೆಯರ ಸ್ಥಾನಮಾನ

## ಅಧ್ಯಾಯ : ಮೂರು

# ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಮಹಿಳೆಯರ ಸ್ಥಾನಮಾನ

### ೩.೧. ಆರ್ಥಿಕ ಸ್ಥಿತಿಗತಿಯಲ್ಲಿ ಮಹಿಳೆ

ಒಂದು ಗ್ರಾಮದ ಬೆಳವಣಿಗೆ ಮತ್ತು ಅಭಿವೃದ್ಧಿ ಆ ಗ್ರಾಮದ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಭಾರತ ಕೃಷಿ ಪ್ರಧಾನ ದೇಶವಾಗಿದ್ದು, ಗ್ರಾಮೀಣ ಪ್ರದೇಶಗಳಲ್ಲಿ ಬಹುಪಾಲು ಜನ ಕೃಷಿಯನ್ನು ಉದ್ಯೋಗವಾಗಿರಿಸಿಕೊಂಡಿರುವುದು ಕಂಡು ಬರುತ್ತದೆ.

ಮನುಷ್ಯ ತಮ್ಮ ಜೀವನ ನಿರ್ವಹಣೆಗಾಗಿ ಹಲವಾರು ಕೆಲಸಗಳನ್ನು ಅನುಸರಿಸಿಕೊಂಡು ಬಂದಿದ್ದಾನೆ. ಅವುಗಳಲ್ಲಿ ಅತಿ ಪ್ರಾಚೀನ ಕಾಲದಿಂದಲೂ ರೂಪಿಸಿಕೊಂಡು ಬಂದಿರುವ ಕಸುಬುಗಳಲ್ಲಿ ಕೃಷಿ ಪ್ರಮುಖವಾದುದಾಗಿದೆ. ಕೃಷಿ ಅಲೆಮಾರಿಯಾಗಿದ್ದ ಮನುಷ್ಯ ಒಂದೆಡೆ ನೆಲೆ ನಿಲ್ಲುವಂತೆ ಮಾಡಿತು. ಗ್ರಾಮದಲ್ಲಿ ವಿವಿಧ ಕಸುಬುಗಳನ್ನು ಮಾಡುವ ಕುಟುಂಬಗಳು, ವಿವಿಧ ಸಮುದಾಯದವರು, ವೃತ್ತಿಗಳವರು ನೆಲೆಸಿರುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಸಮುದಾಯಗಳವರು ಕೃಷಿಯನ್ನು ಅವಲಂಬಿಸಿರುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರಿಗೆ ಕೃಷಿಯೇ ಜೀವನಾಧಾರವಾಗಿರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಜನ ಹಿಂದಿನ ಕಾಲದಲ್ಲಿ ತಮ್ಮ ಮನೆಗೆ ಉಪಯೋಗವಾಗುವ ಆಹಾರ ಬೆಳೆಗಳನ್ನು ಮಾತ್ರ ಬೆಳೆಯುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಆಹಾರ ಬೆಳೆಯ ಜೊತೆ ವಾಣಿಜ್ಯ ಬೆಳೆಗಳನ್ನೂ ಸಹ ಬೆಳೆಯುತ್ತಾರೆ. ಆದರೆ ಪ್ರಸ್ತುತ ಗ್ರಾಮದಲ್ಲಿ ಕಂಡು ಬರುವ ಮಣ್ಣು ಅಷ್ಟೊಂದು ಫಲವತ್ತಾಗಿಲ್ಲದ ಕಾರಣ ಅಲ್ಲಿನ ಜನ ವಾಣಿಜ್ಯ ಬೆಳೆಯಾಗಲೀ, ಆಹಾರ ಧಾನ್ಯಗಳಾಗಲೀ ಬಿತ್ತನೆ ಮಾಡಿದರೆ ಅಷ್ಟೇನು ಫಲವತ್ತಾಗಿ ಬರುವುದಿಲ್ಲ ಮತ್ತು ಇಲ್ಲಿ ಬೆಳೆ ಬೆಳೆಯಲು ಯಾವುದೇ ನದಿಯಾಗಲೀ ಆಣೆಕಟ್ಟೆಯಾಗಲೀ ಇಲ್ಲ. ಇಲ್ಲಿ ಕೊಳವೆ, ಬಾವಿಗಳ ಮೂಲಕವೇ ಹೊಲಗಳಿಗೆ ನೀರು ಹಾಯಿಸಬೇಕು. ಈ ಕೊಳವೆ ಬಾವಿಗಳಲ್ಲಿ ನೀರು ಬರಬೇಕಾದರೆ ಮಳೆ ಹೆಚ್ಚಾಗಿ ಬರಬೇಕು. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಮಳೆ ಪ್ರಮಾಣ ತುಂಬ ಕಡಿಮೆ. ಇಲ್ಲಿ ಮೆಕ್ಕೆಜೋಳ, ಈರುಳ್ಳಿ, ಹತ್ತಿ, ರಾಗಿ, ಎಳ್ಳು, ಜೋಳ, ಶೇಂಗಾ ಬೆಳೆಯನ್ನು ಬೆಳೆಯುತ್ತಾರೆ.

ಈ ಪ್ರದೇಶದಲ್ಲಿ ನೀರಾವರಿ ಜಮೀನಿಗಿಂತಲೂ ಒಣ ಭೂಮಿ ಅಧಿಕವಾಗಿದೆ. ಇಲ್ಲಿನ ಬೆದ್ದಲು ಬೆಳೆಯನ್ನು ವರ್ಷಕ್ಕೆ ಒಂದು ಸಾರಿ ಬೆಳೆಯುತ್ತಾರೆ. ಚಳಿಗಾಲ, ಮಳೆಗಾಲ, ಬೇಸಿಗೆ ಕಾಲಗಳೆನ್ನದೇ ಮನೆಮಂದಿಯೆಲ್ಲರೂ ಕಾಲಗಳನ್ನು ಲೆಕ್ಕಿಸದೆ ಹಗಲಿರುಳು ದುಡಿದು ಇಷ್ಟೆಲ್ಲಾ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ರೈತರು ಬೆಳೆದ ಬೆಳೆಗೆ ಬೆಂಬಲ ಬೆಲೆ ಸಿಗದೇ ಇರುವುದು. ಮಾರುಕಟ್ಟೆಯಲ್ಲಿ ಬೆಲೆಯ ಅನಿಶ್ಚಿತತೆ, ದಲ್ಲಾಳಿಗಳ, ಹಾವಳಿಯಿಂದಾಗಿ ರೈತರ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ರೈತರ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿಲ್ಲ. 'ಬೆಟ್ಟ ಅಗೆದು ಇಲಿ ಹಿಡಿದರು' ಎಂಬ ಗಾದೆಯಂತೆ ರೈತರು ಸಾಲ ಮಾಡಿ ಹಾಕಿದ ಬಂಡವಾಳ ಸಹ ಹಿಂದಿರುಗಿ ಬರುವ ಪರಿಸ್ಥಿತಿಯಲ್ಲಿಲ್ಲ. ರೈತರು ಸರಿಯಾದ ಸಮಯಕ್ಕೆ ಊಟ, ನಿದ್ದೆ ಮಾಡದೆ ದುಡಿದರೂ ರೈತರಿಗೆ ಆದಾಯಕ್ಕಿಂತ ನಷ್ಟವೇ ಹೆಚ್ಚಾದಾಗ ವ್ಯವಸಾಯವನ್ನು ಮಾಡುವುದು ಬೇಡವೆನ್ನುವಷ್ಟು ಬೇಸತ್ತು ನಾವು ಕಷ್ಟಪಟ್ಟಿದ್ದು ಸಾಕು ನಮ್ಮ ಮಕ್ಕಳಿಗೆ ಈ ಕಷ್ಟ ಬಾರದಿರಲೆನ್ನುವ ಉದ್ದೇಶದಿಂದ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸುವುದನ್ನು ನೋಡಬಹುದು. ಅಷ್ಟೇ ಅಲ್ಲದೆ ರೈತರು ದಿನೇ ದಿನೇ ಏರುತ್ತಿರುವ ರಸಗೊಬ್ಬರಗಳ ಬೆಲೆ ಹಾಗೂ ಆಳುಗಳಿಗೆ ನೀಡಬೇಕಾದ ಹೆಚ್ಚಿನ ಕೂಲಿ, ಅದರ ಜೊತೆಗೆ ದುಡಿಯುವ ಕೂಲಿ ಆಳುಗಳು, ದಿನವಿಡೀ ಕೆಲಸ ಮಾಡದೆ ಸಮಯ ವ್ಯರ್ಥವಾಗಿ ಕಳೆಯುವುದು, ಇದೆಲ್ಲದರಿಂದ ಬೇಸತ್ತು ರೈತರು ವ್ಯವಸಾಯ ಮಾಡುವುದನ್ನು ಕಡಿಮೆ ಮಾಡುತ್ತಿದ್ದಾರೆ.

ಜಮೀನುಗಳಿಲ್ಲದ ರೈತರು ಜಮೀನು ಇರುವವರ ಹೊಲವನ್ನು ಗುತ್ತಿಗೆ ತೆಗೆದುಕೊಂಡು ವ್ಯವಸಾಯ ಮಾಡಿ ಕೊನೆಯಲ್ಲಿ ಹಂಚಿಕೊಳ್ಳುವಾಗ ಯಾವುದೇ ಲಾಭ ಬಾರದೇ ನಷ್ಟ ಅಥವಾ ಸಾಲ ಮೇಲೆ ಬರುವುದರಿಂದ ರೈತರು ವ್ಯವಸಾಯಕ್ಕಿಂತ ಕೂಲಿ ಕೆಲಸವೇ ಲೇಸು ಎಂದು ಸಮೀಪದ ಜಿಲ್ಲಾ ಕೇಂದ್ರವಾದ ಚಿತ್ರದುರ್ಗಕ್ಕೆ, ರೈಸ್‌ಮಿಲ್, ಕಡ್ಲೆಬಟ್ಟೆ, ಹತ್ತಿ ಕಾರ್ಖಾನೆ, ಗಾರೆ ಕೆಲಸಗಳಿಗೆ ಹೋಗಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಇನ್ನೂ ಕೆಲವರು ವಿದ್ಯಾವಂತರೆನಿಸಿಕೊಂಡ ಜನರು ಇಷ್ಟು ಓದಿ ವ್ಯವಸಾಯ ಮಾಡುವುದು ಯೋಗ್ಯವಲ್ಲವೆಂದು ಉದ್ಯೋಗಕ್ಕೆ ಹೋಗಲೆಂದು ಓದುತ್ತಿದ್ದೇನೆ ಎನ್ನುವ ನೆಪದಲ್ಲಿ ವ್ಯವಸಾಯ ಮಾಡದೆ ಅತ್ತ ವಿದ್ಯೆಗೆ ತಕ್ಕ ಉದ್ಯೋಗ ದೊರೆಯದೇ ನಿರುದ್ಯೋಗಿಗಳಾಗಿ ಊರ ಕಟ್ಟೆಗೆ ಕುಳಿತು ಕಾಲ ಕಳೆಯುವಂತಾಗಿದೆ.

ಇನ್ನು ಕೃಷಿಯಲ್ಲಿ ಮಹಿಳೆಯ ಪಾತ್ರವೇನು ಎಂದು ನೋಡುವುದಾದರೆ ನಾಗರಿಕತೆಯ ಆರಂಭದಲ್ಲಿ ಗಂಡು ಬೇಟೆಯಾಡಲು ಹೊರಗೆ ಹೊರಟಾಗ ಮನೆಯ ಅಂಗಳದಲ್ಲಿ ಬೀಜ ನೆಟ್ಟು ಸಸಿ ಬೆಳೆಸಿ ಕೃಷಿಯ ಆವಿಷ್ಕಾರಕ್ಕೆ ಕಾರಣಳಾದವಳು ಹೆಣ್ಣು. ಕೃಷಿಗೆ ಮಹಿಳೆ ಕೊಟ್ಟ ಮಹತ್ವದ ಕೊಡುಗೆಯೇ ಆಗಿದೆ. ಆದರೆ ನಾಗರಿಕತೆ ಬೆಳೆದಂತೆ ಕೃಷಿಯ ಉತ್ಪಾದನಾ ವಿಧಾನಗಳ ನೈಪುಣ್ಯತೆ ಸಾಧಿಸತೊಡಗಿದಂತೆ, ಕೃಷಿಯಲ್ಲಿ ಪುರುಷ ಪ್ರವೇಶಿಸಿ ಅದರ ಸ್ವಾಮ್ಯತೆಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡ. ಆಗ ಮಹಿಳೆಯು ಭೂಮಿಯ ಮೇಲಿನ ತನ್ನ ಅಧಿಕಾರಯುತ ಹಕ್ಕನ್ನು

ಕಳೆದುಕೊಂಡಳು ಎಂಬುದಾಗಿ ಅನೇಕ ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಹಾಗಿದ್ದಾಗಲೂ ಮಹಿಳೆ ಕೃಷಿಯಿಂದ ಸಂಪೂರ್ಣವಾಗಿ ದೂರ ಸರಿದಿದ್ದಾಳೆಂದಲ್ಲ. ಇಂದಿಗೂ ಕೂಡ ಹೊಲಗದ್ದೆಗಳಲ್ಲಿ ಹೆಣ್ಣು ಗಂಡನೊಂದಿಗೆ ದುಡಿಯುತ್ತಲೇ ಬಂದಿರುವುದನ್ನು ನೋಡಿದರೆ ಕೃಷಿಯಲ್ಲಿ ಮಹಿಳೆ ನಿರಂತರವಾಗಿ ತೊಡಗಿಕೊಂಡಿರುವುದು ಸ್ಪಷ್ಟವಾಗಿದೆ. ಮಹಿಳೆ ಗಂಡನ ದುಡಿಮೆಗೆ ಹೆಗಲು ಕೊಟ್ಟರೂ ಕೃಷಿಯ ಸಾಮಾಜಿಕ ಮತ್ತು ಕೌಟುಂಬಿಕ ವಲಯದಲ್ಲಿ ಅವಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತಲೇ ಬಂದಿದ್ದಾಳೆ. ಸಮಾಜ ಮತ್ತು ಸಂಸ್ಕೃತಿಯಲ್ಲಿ ಸ್ತ್ರೀಯರನ್ನು ವ್ಯವಸ್ಥಿತವಾಗಿ ನಿಯಂತ್ರಿಸಿಕೊಂಡು ಬರಲಾಗಿದೆ. ಏಕೆಂದರೆ ಈಗಿರುವ ಸಮಾಜ ಪುರುಷ ಪ್ರಧಾನತೆಯಿಂದ ಕೂಡಿರುವುದು. ಆದರೆ ಎಲ್ಲಾ ಮಹಿಳೆಯರು ಒಂದೇ ಬಗೆಯ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆಂದು ಹೇಳಲಿಕ್ಕಾಗದು.

**೩.೧.೧. ಆರ್ಥಿಕ ಕ್ಷೇತ್ರದಲ್ಲಿನ ಒಡೆತನ ಮತ್ತು ಮಹಿಳೆ :**

ಕೃಷಿಯಲ್ಲಿ ಮಹಿಳೆ ಬಹುಕಾಲದಿಂದಲೂ ಏನೆಲ್ಲಾ ಕಾರ್ಯ ಮಾಡಿದರೂ ಕೃಷಿ ಎನ್ನುವುದು ಪುರುಷ ಪ್ರಧಾನ ಕಸಬು ಎಂಬ ಮನೋಭಾವ ದಟ್ಟವಾಗಿದೆ. ಇದಲ್ಲದೆ ಕೃಷಿಯಲ್ಲಿ ಮಹಿಳೆಗೆ ಯಾವುದೇ ರೀತಿಯ ಅಧಿಕಾರಯುತ ಸ್ಥಾನಮಾನಗಳಿರುವುದು ಕಂಡುಬರುತ್ತಿಲ್ಲ.

ಸ್ವಾತಂತ್ರ್ಯ ನಂತರ ಭಾರತದಲ್ಲಿ ಸಂವಿಧಾನದತ್ತವಾಗಿ ೧೯೫೬ ರಲ್ಲಿ ಹಿಂದೂ ಉತ್ತರಾಧಿಕಾರತ್ವದ ಕಾಯಿದೆ (The Hindu Succession Act Of ೧೯೫೬) ಯನ್ನು ಜಾರಿಗೆ ತರಲಾಗಿದೆ. ಈ ಕಾಯಿದೆಯು ಆಸ್ತಿಯ ಉತ್ತರಾಧಿಕಾರತ್ವದ ವಿಷಯದಲ್ಲಿ ಸ್ತ್ರೀಯರಿಗೆ ಮತ್ತು ಪುರುಷರಿಗೆ ಸರಿಸಮಾನವಾದ ಹಕ್ಕುಗಳನ್ನು ನೀಡಿದೆ. ಇದು ಆಸ್ತಿಯ ಹಕ್ಕನ್ನು ರಕ್ತ ಸಂಬಂಧದ ಆಧಾರದ ಮೇಲೆ ನಿರ್ಧರಿಸುತ್ತದೆ. ಸಾಂಪ್ರದಾಯಿಕ ಹಿಂದೂ ಸಂಹಿತೆಯ ಪ್ರಕಾರ ಸ್ತ್ರೀಯರಿಗೆ ಆಸ್ತಿಯ ಉತ್ತಾರಾಧಿಕಾರತ್ವದ ಹಕ್ಕಿರಲಿಲ್ಲ. ಕೇವಲ ಗಂಡು ಮಕ್ಕಳಿಗೆ ಮಾತ್ರ ತಮ್ಮ ತಂದೆಯ ಆಸ್ತಿಗೆ ಉತ್ತರಾಧಿಕಾರಿಗಳಾಗುವ ಅವಕಾಶವಿತ್ತು. ಆದರೆ ಈ ಕಾಯ್ದೆಯ ಪ್ರಕಾರ ಕುಟುಂಬದ ವ್ಯಕ್ತಿಯ ಮರಣ ನಂತರ ಆತನ ಆಸ್ತಿಯು ಪತ್ನಿ ವಿವಾಹಿತ ಅಥವಾ ಅವಿವಾಹಿತ ಗಂಡು ಮಕ್ಕಳ ಹಾಗೂ ಹೆಣ್ಣು ಮಕ್ಕಳಿಗೆ ಸಮಾನವಾಗಿ ಹಂಚಲ್ಪಡುತ್ತಾರೆ. ಈ ಕಾಯಿದೆಯು ಹೆಣ್ಣು ಮಕ್ಕಳಿಗೂ ತಮ್ಮ ತಂದೆಯ ಆಸ್ತಿಗೆ ಉತ್ತರಾಧಿಕಾರಿಯಾಗುವ ಅವಕಾಶ ಕಲ್ಪಿಸಿದೆ. ಇಂದು ಹೆಣ್ಣು ಮಕ್ಕಳು ಸಹ ತಮ್ಮ ತಂದೆಯ ಆಸ್ತಿಯಲ್ಲಿ ತನ್ನ ಸಹೋದರರಿಗೆ ಸರಿ ಸಮಾನವಾಗಿ ಆಸ್ತಿಯಲ್ಲಿ ಭಾಗ ಪಡೆಯಬಹುದಾಗಿದೆ. ಅಲ್ಲದೆ ಅವನ್ನು ಸ್ವತಃ ಅನುಭೋಗಿಸುವ ಮತ್ತು ಮಾರುವ ಸಂಪೂರ್ಣ ಹಕ್ಕನ್ನು ಅವಳು ಪಡೆದಿದ್ದಾಳೆ. (ಸುಮಂಗಲಾ ಅತ್ತಿಗೆರಿ, ೨೦೧೦.ಪುಟ-೧೬೦-೧೬೧).

ಇದಲ್ಲದೆ ಆಸ್ತಿಯ ವಿಷಯಕ್ಕೆ ಸಂಬಂಧಿಸಿದಂತೆ ಸಂವಿಧಾನದಲ್ಲಿ ಉಲ್ಲೇಖಿತವಾದ ಇನ್ನೊಂದು ಕಾಯಿದೆ ಎಂದರೆ ೧೯೫೬ ರಲ್ಲಿ ಅಪ್ರಾಪ್ತ ವಯಸ್ಸು ಮತ್ತು ಪೋಷಕರ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಅಪ್ರಾಪ್ತ ಮಕ್ಕಳಿಗೋಸ್ಕರ ಪೋಷಕರನ್ನು ನೇಮಿಸುವ ವಿಷಯದಲ್ಲಿ

ಪುರುಷರಿಗಿದ್ದ ಹಕ್ಕನ್ನು ಸ್ತ್ರೀಯರಿಗೂ ಕಲ್ಪಿಸಿಕೊಡುವ ಸದುದ್ದೇಶದಿಂದ ಈ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಈ ಕಾಯಿದೆಯ ಪ್ರಕಾರ ಗಂಡನು ಮರಣ ಹೊಂದಿದ್ದರೆ ಆತನು ಹಿಂದೂ ಧರ್ಮದಿಂದ ಬೇರೆ ಧರ್ಮಕ್ಕೆ ಮತಾಂತರ ಹೊಂದಿದರೆ ಇಲ್ಲವೆ ಸನ್ಯಾಸತ್ವ ಸ್ವೀಕರಿಸಿದರೆ ಹೆಂಡತಿಯಾದವಳು ಅಪ್ರಾಪ್ತ ಮಕ್ಕಳ ಸಂರಕ್ಷಕರನ್ನು ನೇಮಿಸುವ ಹಕ್ಕನ್ನು ಪಡೆದಿದ್ದಾಳೆ. ಆದರೆ ಆಸ್ತಿಯ ಹಕ್ಕನ್ನು ಮಹಿಳೆಯರಿಗೆ ಕೊಡಮಾಡಿದರೂ ನಮ್ಮ ಸಮಕಾಲೀನ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತಹ ಗಣನೀಯ ಬದಲಾವಣೆಗಳೇನು ಕಾಣಿಸದು ಈಗಾಗಲೇ ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ಕೊಡಮಾಡಿದ ಈ ಸಂದರ್ಭದಲ್ಲೂ ಸಹ ಭೂಮಿಯ ಒಡೆತನ ಪುರುಷನ ಹೆಸರಿನಲ್ಲಿಯೇ ಇರುವುದನ್ನು ನೋಡಬಹುದು.

ಕೃಷಿ ಕ್ಷೇತ್ರದಲ್ಲಿ ಭೂ ಒಡೆತನ ಹೊಂದಿದವರ ಸಂಖ್ಯೆಯನ್ನು ಗಮನಿಸಿದರೆ ಭೂ ಒಡೆತನ ಹೊಂದಿದವರು ವಿರಳವಾಗಿರುವುದು ಕಂಡುಬರುತ್ತದೆ. ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ನೀಡಿ ೫೩ ವರ್ಷಗಳು ಕಳೆದರು ಸಹ ಅದು ವಾಸ್ತವದಲ್ಲಿ ಇನ್ನು ಕನಸಿನ ಮಾತಾಗಿಯೇ ಉಳಿದಿರುವುದು ಮಹಿಳೆಯರ ಪಾಲಿಗೆ ದುರಂತದ ಸಂಗತಿಯಾಗಿದೆ. ಒಂದು ವೇಳೆ ಆಸ್ತಿಯ ಅಥವಾ ಒಡೆತನದ ಹಕ್ಕು ಕೆಲವು ಮಹಿಳೆಯರಿಗೆ ದಕ್ಕಿದೆಯಾದರೂ ಅದು ಕೇವಲ ನಾಮಕಾವಸ್ಥೆಯದ್ದಾಗಿರುತ್ತದೆ. ಏಕೆಂದರೆ ಭೂ ಒಡೆತನವೇನೋ ಮಹಿಳೆಯರ ಹೆಸರಿನಲ್ಲಿರುತ್ತದೆ. ಆದರೆ ಅದರ ಮೇಲೆ ಯಾವುದೇ ಬಗೆಯ ನಿರ್ಣಯಾತ್ಮಕವಾದ ಹಕ್ಕು ಅವಳಿಗಿರದು. ಆಕೆಯ ಗಂಡ ಇಲ್ಲವೆ ಆಕೆಯ ಮಾವ ಇಲ್ಲವೆ ಆಕೆಯ ಸಹೋದರರ ಅನುಕೂಲಕ್ಕೆ ತಕ್ಕಂತೆ ಆ ಭೂಮಿಯ ಅಥವಾ ಆಸ್ತಿ ಬಳಕೆಯಾಗಿರುತ್ತದೆ.

ಕೆಲವು ಕುಟುಂಬದಲ್ಲಿ ಮಹಿಳೆಯ ಹೆಸರಿನಲ್ಲಿ ಆಸ್ತಿ ಇರುವುದೇನೋ ನಿಜ. ಆದರೆ ಇದು ಮಹಿಳೆ ಆರ್ಥಿಕವಾಗಿ ಸಬಲಳಾಗಲಿ ಎಂದಾಗಲಿ ಅಥವಾ ಮಹಿಳೆಯ ಮೇಲಿನ ಇನ್ನಾವುದು ಕಾಳಜಿಗಳಿಂದಾಗಲಿ ಆಸ್ತಿಯನ್ನು ಅವಳ ಹೆಸರಿಗೆ ಮಾಡಿರುವಂತಹ ಕಾರಣಗಳಿಲ್ಲ. ಅದರ ಹಿಂದಿರುವ ಹುನ್ನಾರವೇ ಬೇರೆಯಾಗಿರುತ್ತದೆ. ತುಂಬಾ ಶ್ರೀಮಂತ ಕುಟುಂಬಗಳಲ್ಲಿ ಆಸ್ತಿ ಅಧಿಕವಾಗಿರುವಾಗ ಸಹಜವಾಗಿ ಆಗ ಒಬ್ಬ ವ್ಯಕ್ತಿಯ ಹೆಸರಿನಲ್ಲಿಯೇ ಎಲ್ಲಾ ಆಸ್ತಿಯೂ ಇದ್ದರೆ ಸರಕಾರ ವಿಧಿಸಿದ ಆದಾಯ ಮಿತಿಗಿಂತ ಅಧಿಕವಾಗುತ್ತದೆ. ಅಂತಹ ಸಂಕಷ್ಟಗಳಿಂದ ಪಾರಾಗಲೂ ಪುರುಷರು ಮಾಡಿರುವಂತಹ ಪರ್ಯಾಯ ಮಾರ್ಗವೆಂದರೆ ಹೆಂಡತಿಯ ಹೆಸರಿನಲ್ಲೋ, ತಾಯಿಯ ಹೆಸರಿನಲ್ಲೋ ಆಸ್ತಿಯನ್ನು ವರ್ಗಾಯಿಸಲಾಗುತ್ತದೆಯೇ ಹೊರತು ಅಕ್ಕ, ತಂಗಿಯರ ಹೆಸರಿನಲ್ಲಿ ವರ್ಗಾಯಿಸಿರುವುದು ಕಂಡುಬರುವುದೇ ಇಲ್ಲ. ಏಕೆಂದರೆ ಅಕ್ಕ, ತಂಗಿಯರು ಪರರ ಮನೆಗೆ ಮದುವೆಯಾಗಿ ಹೋಗುವುದರಿಂದ ತನ್ನ ಹೆಂಡತಿ, ತಾಯಿಯರ ಹೆಸರಿನಲ್ಲಿ ವರ್ಗಾಯಿಸಲಾಗುತ್ತದೆ. ಹೀಗೆ ಆಸ್ತಿ ವರ್ಗಾಯಿಸುವುದರಿಂದ ಸರಕಾರ ವಿಧಿಸುವ ಆಸ್ತಿಯ ಮೇಲಿನ ಹೆಚ್ಚುವರಿ ತೆರಿಗೆಯಿಂದ ಮುಕ್ತವಾಗಬಹುದೆಂಬ ಉದ್ದೇಶದಿಂದ ಮಹಿಳೆಗೆ ಇಲ್ಲಿ

ಒಡೆತನ ಸಿಕ್ಕಿರುತ್ತದೆಯೇ ಹೊರತು ಅದು ಮಹಿಳೆಗೆ ದೊರೆತ ನೈಜ ಒಡೆತನವಾಗಿರದೇ ಕೇವಲ ನಾಮಮಾತ್ರ ಒಡೆತನವಾಗಿರುತ್ತದೆ.

ಇನ್ನು ಕೆಲವು ಬೆರಳಣಿಕೆಯ ಕುಟುಂಬದಲ್ಲಿ ಆಸ್ತಿಯು ಮಹಿಳೆಯರ ಹೆಸರಿನಲ್ಲಿರುವುದು ಈ ಭಾಗದಲ್ಲಿ ಕಂಡುಬರುತ್ತದೆ. ಇಲ್ಲೂ ಕೂಡ ಅಷ್ಟೇ ಮಹಿಳೆ ನಾಮಮಾತ್ರ ಒಡೆತನ ಹೊಂದಿದವಳಾಗಿದ್ದು ಅಧಿಕಾರ ಎಲ್ಲವೂ ಪುರುಷನಿಂದಲೇ ನಡೆಯುತ್ತಿರುತ್ತದೆ. ಸರ್ಕಾರ ಕಾಲ ಕಾಲಕ್ಕೆ ಬಡ ಕೃಷಿಕರಿಗಾಗಿ ಕೊಡಮಾಡುವ ಬ್ಯಾಂಕ್ ಸಾಲ ಅದರಲ್ಲಿ ಕೊಡುವ ಸಬ್ಸಿಡಿ ಇತ್ಯಾದಿ ಈ ರೀತಿಯ ಸರಕಾರದ ಸೌಲಭ್ಯವನ್ನು ಪಡೆಯುವ ಉದ್ದೇಶದಿಂದ ಮಹಿಳೆಯರ ಹೆಸರಿಗೆ ಆಸ್ತಿಯನ್ನು ಮಾಡಿರುತ್ತಾರೆಯೇ ಹೊರತು ಬೇರಾವ ಕಾರಣಗಳಿಂದಲ್ಲ.

ಸಂವಿಧಾನ ಬದ್ಧವಾಗಿ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕಿದ್ದಾಗಲೂ ಮಹಿಳೆಯರ ಬದುಕಿನಲ್ಲಾಗಲಿ ಅವರ ಸ್ಥಿತಿಗತಿಗಳಲ್ಲಾಗಲಿ ಅಂತಹದ್ದೇನು ವಿಶೇಷವಾದ ಇಲ್ಲವೆ ಗುರುತರವಾದ ಪರಿವರ್ತನೆಯಾಗದೆ ಇದು ಮಹಿಳೆಯನ್ನು ಮತ್ತಷ್ಟು ಸಂಕಷ್ಟಕ್ಕೆ ಎಡೆಮಾಡಿದೆ. ಏಕೆಂದರೆ ಮಹಿಳೆಗೆ ಆಸ್ತಿಯಲ್ಲಿ ಪಾಲು ನೀಡಿ ಅವಳನ್ನು ಆರ್ಥಿಕವಾಗಿ ಸಬಲಳನ್ನಾಗಿ ಮಾಡಬೇಕೆಂದು ಸಂವಿಧಾನದ ಅಲೋಚನೆಯೇನೋ ಒಳ್ಳೆಯದೆ. ಆದರೆ ಅದು ವಾಸ್ತವದಲ್ಲಿ ನಡೆಯುತ್ತಿರುವುದೇ ಬೇರೆಯಾಗಿದೆ.

ಕುಟುಂಬದಲ್ಲಿ ತಂದೆಯ ಸಾವಿನ ನಂತರ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ತಮ್ಮ ಸಹೋದರರಲ್ಲಿ ಆಸ್ತಿಯನ್ನು ಕೇಳುವುದರಿಂದ ಅನೇಕ ಸಂಬಂಧಗಳು ಒಡೆದು ಹೋಗುತ್ತಿವೆ. ಅಂದರೆ ಇಲ್ಲಿ ಆ ಮಹಿಳೆ ಆಸ್ತಿಯನ್ನು ಪಡೆದುಕೊಳ್ಳಬೇಕೋ ಇಲ್ಲವೆ ತನ್ನ ತವರಿನ ಸಂಬಂಧವನ್ನು ಉಳಿಸಿಕೊಳ್ಳಬೇಕೋ ಎನ್ನುವ ಸಂದಿಗ್ದ ಪರಿಸ್ಥಿತಿ ಎದುರಾಗುತ್ತದೆ. ಅವಳೇನಾದರೂ ಆಸ್ತಿಯಲ್ಲಿ ಪಾಲು ತೆಗೆದುಕೊಂಡರೆ ತನ್ನ ತವರಿನ ಸಂಬಂಧಿಕರನ್ನು ದೂರ ಮಾಡಿಕೊಳ್ಳಬೇಕಾದ ಪರಿಸ್ಥಿತಿಗಳೇ ಹೆಚ್ಚು ಹೆಚ್ಚಾಗಿ ಕಂಡುಬರುತ್ತದೆ.

**೩.೧.೨. ಕೃಷಿ ಭೂಮಿ ಒಡೆತನದಲ್ಲಿ ಮಹಿಳೆಯ ಪಾತ್ರ ಮತ್ತು ಸಾಮಾಜಿಕ ಅಭಿಪ್ರಾಯ :**

ಕೃಷಿಯಲ್ಲಿ ಮಹಿಳೆ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಂಡಿದ್ದೆಯಾದ ಸಂದರ್ಭದಲ್ಲಿ ಸಮಾಜ ಅಂತಹದ್ದನ್ನು ಸಹಜವಾಗಿ ಪರಿಗಣಿಸುವುದಿಲ್ಲ. ಸಮಾಜ ಅವರನ್ನು ವಿಶೇಷವಾದ ದೃಷ್ಟಿಯಿಂದಲೇ ಗುರುತಿಸುತ್ತಾರೆ. ಮಹಿಳೆ ಒಡೆತನದಲ್ಲಿ ಮಾಡುವ ಕೃಷಿಯ ಬಗೆಗೆ ಸಮಾಜಕ್ಕೆ ಒಳ್ಳೆಯ ಅಭಿಪ್ರಾಯವಿದ್ದಂತೆ ಕಾಣಿಸದು. ಅಂತಹ ಒಡೆತನದ ಬಗೆಗೆ ಜನರಿಗೆ ಅಸಹನೆ ಇದೆ. ಆ ಕಾರಣಕ್ಕಾಗಿಯೇ ಒಡೆಯನಿಲ್ಲದ ಭೂಮಿ ಕೆಡುಕಿಗೆ ಕಾರಣ ಎನ್ನುವಂತಹ ನಂಬಿಕೆಯೊಂದನ್ನು ಜನಸಾಮಾನ್ಯರಲ್ಲಿ ನಾವು ಕಾಣುತ್ತೇವೆ. ಭೂಮಿ ಒಡೆಯನ ಅನುಪಸ್ಥಿತಿಯಲ್ಲಿ ಆತನ ಹೆಂಡತಿ ಇಲ್ಲವೆ ಆಳುಕಾಳುಗಳ ಕೈ ಸೇರುತ್ತದೆ. ಹಾಗೆ ಒಡೆಯನ ಮುತುವರ್ಜಿಯಿಲ್ಲದೆ ದೂರವಾದ ಭೂಮಿ ನಾಶವಾಗುತ್ತದೆ ಎಂಬುದನ್ನು ಇದು ತಿಳಿಸುತ್ತದೆ. ಒಂದರ್ಥದಲ್ಲಿ ಇದು ಮಹಿಳಾ

ಒಡೆತನಕ್ಕಾಗಿ ಅನ್ವಯಿಸುವ ಮಾತಾಗಿದೆ. ಇದರಿಂದ ಮಹಿಳಾ ಒಡೆತನ ಇರುವ ಭೂಮಿಯ ಬಗೆಗೆ ಸಮಾಜದ ಧೋರಣೆ ಎಂತಹದ್ದು ಎಂಬುದು ತಿಳಿದುಬರುತ್ತದೆ. ಮಹಿಳೆಯ ನೇತೃತ್ವದಲ್ಲಿ ವ್ಯವಸಾಯ ಮಾಡಲ್ಪಡುತ್ತಿದ್ದರೆ ಅಂತಹ ಮನೆಯ ಕೃಷಿ ಇನ್ನೇನು ಏಳಿಗೆ ಆಗೊಲ್ಲ ನೆಲಕಚ್ಚಿ ಹೋಗುತ್ತದೆ ಎನ್ನುವ ರೀತಿಯಲ್ಲಿ ಅಸಮಾಧಾನವನ್ನು ವ್ಯಕ್ತಪಡಿಸುವವರನ್ನು ನಾವು ಈಗಲೂ ಕಾಣುತ್ತೇವೆ.

ಒಟ್ಟಿನಲ್ಲಿ ಮಹಿಳೆ ಪುರುಷ ಹಿಡಿತದಿಂದ ಮುಕ್ತವಾಗುವ ಬಗೆಗೆ ಆರ್ಥಿಕವಾಗಿ ಸಬಲಳಾಗುವ ಬಗೆಗೆ ಸಮುದಾಯದ ವಿರೋಧವಿದ್ದಂತೆ ಕಾಣುತ್ತದೆ. ಆ ಕಾರಣಕ್ಕೆ ಆಸ್ತಿಯನ್ನು ಮಹಿಳೆಗೆ ಬಿಟ್ಟುಕೊಡಬೇಕಾಗಿ ಬಂದ ಕೆಲವು ಅನಿವಾರ್ಯ ಸಂದರ್ಭಗಳಲ್ಲೂ ಅನೇಕ ವಾದ-ವಿವಾದಗಳು ಉದ್ಭವಿಸುತ್ತವೆ. ಆಸ್ತಿಯ ಒಡೆತನದ ಹಕ್ಕನ್ನು ಮಹಿಳೆಗೆ ಕೊಡಮಾಡಿದಾಗಲೂ ಅದನ್ನೂ ತನ್ನಿಚ್ಛೆಯಂತೆ ತನ್ನ ಸಬಲೀಕರಣಕ್ಕಾಗಿ ಬಳಸುವ ನಿಜವಾದ ಅಧಿಕಾರವನ್ನು ಮಹಿಳೆಗೆ ಪುರುಷ ಪ್ರಧಾನ ವ್ಯವಸ್ಥೆ ಇನ್ನು ಕಲ್ಪಿಸಿರುವುದಿಲ್ಲ. ಹಾಗಾಗಿ ಮಹಿಳೆಯರ ಬಗೆಗಿನ ನಮ್ಮ ಸಾಮಾಜಿಕ ನಿಲುವುಗಳು ಮೌಲ್ಯಗಳು ಬದಲಾಗದ ಹೊರತು ಇಂತಹ ನೂರೆಂಟು ಕಾಯ್ದೆಗಳು ಬಂದರೂ ಮಹಿಳೆಯ ಸ್ಥಿತಿಗತಿಗಳು ಬದಲಾಗುವುದು ಸಂದೇಹವೇ? ಆದರೂ ಮಹಿಳೆಯರಿಗೆ ಸಂವಿಧಾನಬದ್ಧವಾಗಿಯಾದರೂ ಆಸ್ತಿಯ ಹಕ್ಕನ್ನು ಕೊಡಮಾಡಿದ್ದು ಪ್ರಶಂಸನಾರ್ಹವೇ ಸರಿ. ಕೊನೆ ಪಕ್ಷ ಮಹಿಳೆ ಕುಟುಂಬದಲ್ಲಿ ತನ್ನ ಅಸ್ತಿತ್ವ ಕಳೆದುಕೊಳ್ಳಬೇಕಾದ ಸಂದರ್ಭದಲ್ಲಿ ಆಸ್ತಿಯಲ್ಲಿ ತನ್ನದು ಹಕ್ಕಿದೆ ಎಂದು ಧ್ವನಿಯೆತ್ತುವುದಕ್ಕಾದರೂ ಕಾನೂನು ಸಹಾಯಕವಾಗಿದೆ.

ಭೂಮಿ ಮೇಲಿನ ಒಡೆತನದ ಸಂದರ್ಭದಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವ ಪುರುಷ ವರ್ಗ ದುಡಿಮೆಯ ವರ್ಗಕ್ಕೆ ಬಂದಾಗ ಏಕೆ ಅವರ ಸಂಖ್ಯೆ ಗೌಣವಾಗುತ್ತದೆ. ಎಲ್ಲ ದುಡಿಮೆಯ ನಿರಂತರತೆ ದುಡಿಮೆಯ ಏಕತಾನತೆ ಇದ್ದು ಅಧಿಕಾರವಾಗಿ ಬೌತಿಕ ಕ್ರಮವನ್ನು ವಿನಿಯೋಗ ಮಾಡಬೇಕಾಗುತ್ತೋ ಅಲ್ಲಿ ಪುರುಷರ ಪಾಲುದಾರಿಕೆ ಕಡಿಮೆ ಇರುತ್ತದೆ. ಎಲ್ಲ ಸುಲಭವಾಗಿ ಲಾಭ ಹೆಗ್ಗಳಿಕೆ ದೊರೆಯುತ್ತದೆ. ಎಲ್ಲ ಸುಲಭವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆಯೋ ಅಲ್ಲಿ ಪುರುಷನ ಪಾಲುದಾರಿಕೆಯು ಅಧಿಕವಾಗಿರುತ್ತದೆ. ಹಾಗಾಗಿಯೇ ದುಡಿಯುವ ವರ್ಗದಲ್ಲಿ ವಿರಳವಾಗಿದ್ದ ಪುರುಷರ ಪಾಲುದಾರಿಕೆಯ ಸಂಖ್ಯೆ ಅಧಿಕಾರ ಆಸ್ತಿಯ ಮೇಲಿನ ಒಡೆತನ ಸಂದರ್ಭಕ್ಕೆ ಬಂದಾಗ ಅಧಿಕವಾಗಿರುವುದು ಕಂಡುಬರುತ್ತದೆ.

ಸ್ವಂತ ಭೂ ಹಿಡುವಳಿ ಹೊಂದಿದ ಕುಟುಂಬಗಳಲ್ಲಿ ಪುರುಷನಂತೆ ಮಹಿಳೆಯೂ ಕೂಡ ಕೃಷಿ ಕಾರ್ಯಗಳಲ್ಲಿ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ತೊಡಗಿಕೊಂಡಿದ್ದರೂ ಒಡೆತನದ ವಿಷಯದಲ್ಲಿ ಪುರುಷ ಮತ್ತು ಮಹಿಳೆಯರ ನಡುವೆ ತಾರತಮ್ಯ ಇರುವುದು ತಿಳಿದು ಬರುತ್ತದೆ. ಮತ್ತು ಕೃಷಿಯಲ್ಲಿ ದುಡಿಯುವ ವರ್ಗಕ್ಕೆ ಬಂದಾಗ ಮಹಿಳೆಯ ಪಾಲುದಾರಿಕೆ ಅಧಿಕವಾಗಿರುವುದನ್ನು ಕಾಣುತ್ತೇವೆ. ಇದರಿಂದ ಸಮುದಾಯದಲ್ಲಿ ಮಹಿಳೆಯ ಸ್ಥಿತಿ ಯಾವ ರೀತಿಯದು ಎಂಬುದು

ತಿಳಿದು ಬರುತ್ತದೆ. ಅಲ್ಲದೆ ಕೃಷಿ ವಲಯದಲ್ಲಿ ದುಡಿಯುವ ವರ್ಗದ ಮಹಿಳೆಯ ಪ್ರಮಾಣ ಹೆಚ್ಚಾಗಿರುವುದರಿಂದ ಮಹಿಳೆಯರನ್ನು ಅತ್ಯಂತ ಕಡಿಮೆ ಕೂಲಿಗೆ ದುಡಿಸಿಕೊಳ್ಳಲಾಗುವುದು. ಅದು ಕೂಡ ಮಹಿಳೆ ದುಡಿಮೆಗಾರರ ಶೋಷಣೆಯೇ ಆಗಿದೆ.

ಒಟ್ಟಾರೆ ಕೃಷಿಯಲ್ಲಿ ಮಹಿಳೆ ಬೀಜ ಬಿತ್ತನೆಯಿಂದ ಹಿಡಿದು ಕೊಯ್ಲಿನವರೆಗಿನ ಕೆಲಸ ಕಾರ್ಯಗಳಲ್ಲಿ ಪಾಲ್ಗೊಂಡಿದ್ದಾಗಲೂ ಕೊನೆಗೆ ಹೊಲದಲ್ಲಿ ಕೆಲಸ ಮಾಡಿದ ಹೆಗ್ಗಳಿಕೆ ಪುರುಷನಿಗೆ ಸಲ್ಲುತ್ತದೆ. ಮಹಿಳೆ ಹಿನ್ನಲೆಗೆ ಸರಿಯಲ್ಪಟ್ಟಿದ್ದಾಳೆ. ಕೇವಲ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅಂದರೆ ಪುರುಷನ ಅನುಪಸ್ಥಿತಿಯಲ್ಲಿ ಮಾತ್ರ ಕೃಷಿಯಲ್ಲಿ ಮಹಿಳೆ ಮುಖ್ಯವಾಹಿನಿಗೆ ಬರುವಳು. ಭೂಮಿಯ ಮೇಲಾಗಾಲೀ, ಬೆಳೆದ ಬೆಳೆಯ ಮೇಲಾಗಾಲೀ ಅವಳಿಗೆ ಯಾವುದೇ ರೀತಿಯ ಅಧಿಕಾರವಿರುವುದಿಲ್ಲ. ತಾನು ದಿನವೂ ನಮ್ಮ ಹೊಲ ಅಥವಾ ಮನಿ, ಹೊಲ ಎಂದು ಮೈಮುರಿದು ದುಡಿಯುವ ಹೊಲ ಅಥವಾ ಹೊಲ ರೂಪದ ಆಸ್ತಿ ವಾಸ್ತವವಾಗಿ ಅವಳದಾಗಿರುವುದಿಲ್ಲ. ಹೊಲದ ಮತ್ತು ಹೊಲದ ಉತ್ಪನ್ನಗಳ ಮೇಲೆ ಅವಳಿಗೆ ಅಧಿಕಾರಯುತವಾದ ಹಕ್ಕಿರುವುದಿಲ್ಲ. ಅಂದರೆ ಮಹಿಳೆ ಹೋದಲ್ಲಿ ಉತ್ಪನ್ನಗಳ ಮೇಲೆ ಅವಳಿಗೆ ಅಧಿಕಾರಯುತವಾದ ಹಕ್ಕಿರುವುದಿಲ್ಲ. ಅಂದರೆ ಮಹಿಳೆ ಹೊಲದಲ್ಲಿ ಕೆಲಸ ಮಾಡುವ ಕೆಲಸಗಾರಳು ಮಾತ್ರವೇ ಆಗಿದ್ದಾಳೆ. ಆ ಭೂಮಿಯ ಒಡೆತನ ಅಥವಾ ಆ ಹೊಲ ಇರುವುದು ಅವಳ ಗಂಡನ ಹೆಸರಿನಲ್ಲೋ ಇಲ್ಲವೆ ಗಂಡನ ತಂದೆಯ ಹೆಸರಿನಲ್ಲಿಯೋ ಇರುತ್ತದೆ. ಅವರ ನಂತರ ಆ ಭೂಮಿ ಅವಳ ಮಗನ ಹೆಸರಿಗೆ ವರ್ಗಾಯಿಸಲ್ಪಡುತ್ತದೆ. ಹೀಗೆ ಹೊಲದ ಮೇಲಿನ ಒಡೆತನವೆಲ್ಲವೂ ಬಹುಪಾಲು ಪುರುಷನಿಗೆ ಸಂಬಧಿಸಿರುತ್ತದೆ. ಹಾಗಾಗಿ ಭೂ ಒಡೆತನಕ್ಕೆ ಸಂಬಂಧಿಸಿದ ವಿಚಾರಗಳ ಹಿಂದೆ ಪುರುಷನ ರಾಜಕಾರಣವಿದೆ. ಮಹಿಳೆಗೆ ಆಸ್ತಿಯಲ್ಲಿ ಪಾಲನ್ನು ಕೊಡುವುದರಿಂದ ಅವಳ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳು ತನಗಿಂತ ಉತ್ತಮವಾಗಿ ತನ್ನ ಸ್ಥಾನಮಾನಗಳೆಲ್ಲ ಕಡಿಮೆಯಾಗುತ್ತದೊ ಎನ್ನುವ ಆತಂಕ ಪುರುಷ ವ್ಯವಸ್ಥೆಯದು. ಮಹಿಳೆ ಆರ್ಥಿಕವಾಗಿ ಪ್ರಬಲವಾದರೆ ಎಲ್ಲಿ ಅವಳ ಮೇಲಿನ ತನ್ನ ನಿಯಂತ್ರಣ, ಹಿಡಿತ ಕೈತಪ್ಪಿ ಹೋಗುತ್ತದೋ ಎನ್ನುವ ಹಿನ್ನೆಲೆಯಿಂದಲೇ ಹಿಂದೆ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ನಿರಾಕರಿಸಲಾಗಿತ್ತು. ಇಂದು ಮಹಿಳೆಯರಿಗೆ ಆಸ್ತಿ ಹಕ್ಕು ನೀಡಿದ್ದರೂ, ಅದು ಕೂಡ ಸಂಪೂರ್ಣವಾಗಿ ಪುರುಷ ನಿಯಂತ್ರಣದಿಂದ ಮುಕ್ತಿಗೊಂಡಿರುವಂತಹದ್ದೇನಲ್ಲ. ಇದನ್ನೆಲ್ಲಾ ಗಮನಿಸಿದರೆ ಕೃಷಿ ಭೂಮಿ ಒಡೆತನದಲ್ಲಿ ಮಹಿಳೆಯ ಪಾತ್ರ ಅದಕ್ಕೊಂದು ಲೆಕ್ಕಕ್ಕಿಲ್ಲ ಎನ್ನುವ ರೀತಿಯದು.

**೩.೨. ರಾಜಕೀಯ ಸ್ಥಿತಿಗತಿ :**

ಭಾರತದ ರಾಜಕೀಯ ಇತಿಹಾಸದಲ್ಲಿ ಮಹಿಳೆ ತೀರಾ ನಗಣ್ಯಳೇನಲ್ಲ. ರಾಜ-ಮಹಾರಾಜರ ಕಾಲದಲ್ಲಿ, ನಂತರ ಸ್ವಾತಂತ್ರ್ಯ ಹೋರಾಟದ ಸಂದರ್ಭಗಳಲ್ಲಿ ಸಾವಿರಾರು ಮಹಿಳೆಯರು ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದಾರೆ. ನಿರ್ಣಾಯಕ ಪಾತ್ರ ವಹಿಸಿದ್ದಾರೆ. ಸ್ವಾತಂತ್ರ್ಯ

ದೊರಕಬೇಕು ಎಂದು ಹೋರಾಡಿದ್ದಾರೆ. ಅದಕ್ಕೆ ಅಂದು ಸಮಾಜದ ಬೆಂಬಲವೂ ಇತ್ತು. ಆದರೆ ಚರಿತ್ರೆಯ ಪುಸ್ತಕಗಳು ಮಹಿಳೆಯರ ಬಗೆಗಿನ ಎಂದಿನ ಉದಾಸೀನತೆಯಿಂದ ಈ ಮಹಿಳೆಯರ ಕೊಡುಗೆಯನ್ನು ನಿರ್ಲಕ್ಷಿಸಿದೆ. ಸ್ವಾತಂತ್ರ್ಯ ನಂತರ ದೊರಕಿದ ಅಧಿಕಾರ ಅವಕಾಶ ಬಾಚಿಕೊಳ್ಳುವ ಪೈಪೋಟಿಯಲ್ಲಿ ಪುರುಷ ವರ್ಗ ಮಹಿಳೆಯರನ್ನು ಹಿಂದಿಕ್ಕಿ ತಾನು ಮುನ್ನುಗ್ಗಿತು.

ಬದಲಾದ ಇಂದಿನ ಪರಿಸ್ಥಿತಿಯಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆ ಕಾಣುತ್ತಿದ್ದಾಳೆ. ದಾಪುಗಾಲು ಇಡುತ್ತಿದ್ದಾಳೆ. ಆದರೆ ನೀತಿ ನಿರೂಪಣಾ ಸ್ಥಾನಗಳಲ್ಲಿ ಶಾಸನ ರೂಪಿಸುವ ಸಂಸ್ಥೆಗಳಲ್ಲಿ ಅವಳ ಅನುಪಸ್ಥಿತಿ ಎದ್ದು ಕಾಣುತ್ತಿದೆ. ಹಿಂದೊಮ್ಮೆ ಮಹಿಳೆಗೆ ಮೀಸಲಾತಿ ಬೇಡ, ಸಮಾನತೆ ಬೇಕು ಎಂದಿದ್ದ ಸಂಘಟನೆಗಳು ಇಂದು ರಾಜಕೀಯ ಮೀಸಲಾತಿಯು ಸಮಾನತೆಯ ಕಡೆಗೆ ಒಂದು ಹೆಜ್ಜೆ, ಎಂದು ಸಮಾಜ ಉದ್ದೇಶಪೂರ್ವಕ ಉದಾಸೀನತೆಗೆ, ನಿರ್ಲಕ್ಷ್ಯಕ್ಕೆ ಸೆಡ್ಡು ಹೊಡೆದು ಮಹಿಳೆಯರು ಪಂಚಾಯತ್ ಸಂಸ್ಥೆಗಳಲ್ಲಿ ಮೀಸಲಾತಿಯ ಮೂಲಕ ಮತ್ತೆ ರಾಜಕೀಯ ಪ್ರವೇಶ ಮಾಡಿದ್ದಾರೆ. ಚುನಾವಣೆಯಲ್ಲಿ ಆಯ್ಕೆಯಾಗಿ ಬಂದಿರುವ ಲಕ್ಷಾಂತರ ಮಹಿಳೆಯರು ದೇಶದ ಸಾಮಾಜಿಕ ಹಾಗೂ ರಾಜಕೀಯ ಇತಿಹಾಸಕ್ಕೆ ಹೊಸ ತಿರುವು ನೀಡುತ್ತಿದ್ದಾರೆ.

ಸ್ತ್ರೀ ಪುರುಷರಿಗೆ ಸಮಾನ ಸ್ಥಾನಮಾನವನ್ನು ನಮ್ಮ ಸಂವಿಧಾನದಲ್ಲಿ ನೀಡುವ ಮೂಲಕ ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಮಹಿಳೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ. ಮುಸಲ್ಮಾನರ ಆಕ್ರಮಣದ ಕಾಲದಲ್ಲಿ ತನ್ನ ವೈಯಕ್ತಿಕ ಸ್ವಾತಂತ್ರ್ಯವನ್ನು ಬಹುಮಟ್ಟಿಗೆ ಕಳೆದುಕೊಂಡ ಮಹಿಳೆ ಮತ್ತೆ ಸಾರ್ವಜನಿಕ ಜೀವನಕ್ಕೆ ಕಾಲಿಟ್ಟುದುದು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ.

ಒಂದು ದೇಶದಲ್ಲಿ ಮಹಿಳೆಗಿರುವ ಸ್ಥಾನಮಾನ ಆ ದೇಶದ ಆಧುನಿಕತೆಯ ಆಳತೆಗೋಲು ಎನ್ನಬಹುದು. ಮಹಿಳೆಯ ಸ್ಥಾನಮಾನ ಸುಧಾರಣೆಯ ಕಾರ್ಯ ಪ್ರಾರಂಭವಾದದ್ದು ಬ್ರಿಟೀಷರು ನಮ್ಮ ದೇಶದಲ್ಲಿ ನೆಲೆಯೂರಿ ಆಡಳಿತ ಸೂತ್ರಗಳನ್ನು ಕೈಗೆತ್ತಿಕೊಂಡಾಗ. ರಾಜಕೀಯವೆಂಬುದು ಕೇವಲ ಕೆಲವೇ ಜನರಿಗೆ ಸೀಮಿತವಾಗಿದ್ದ ಕಾಲವೊಂದಿತ್ತು. ಜನಸಾಮಾನ್ಯರಿಗಂತು ರಾಜಕೀಯದ ಪರಿವೇ ಇರಲಿಲ್ಲ. ಹಳ್ಳಿಯ ಪ್ರಮುಖ ಮುಖಂಡ ಯಾರಿಗೆ ಮತ ಚಲಾಯಿಸಲು ಹೇಳುತ್ತಿದ್ದನೋ, ಗ್ರಾಮದ ಜನರೆಲ್ಲ ಗೌಡ ಹೇಳಿದ ಪಕ್ಷಕ್ಕೆ ಮತ ಹಾಕುತ್ತಿದ್ದರು. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇತ್ತೀಚಿನ ದಿನಗಳಲ್ಲಿ ರಾಜಕೀಯದ ಬಗ್ಗೆ ಅರಿವು ಉಂಟಾಗಿ ಯಾರಿಗೆ ಮತ ಚಲಾಯಿಸಬೇಕು ಎನ್ನುವ ಸ್ವಂತ ನಿರ್ಧಾರವನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯವಿದೆ. ನಂತರ ಗ್ರಾಮದಲ್ಲಿ ರಾಜಕೀಯವು ಹಲವು ಮುಖಗಳಲ್ಲಿ ಮಾರ್ಪಾಡಾಗಿರುವುದನ್ನು ಗುರುತಿಸಬಹುದು.

ಗ್ರಾಮೀಣ ಸಮುದಾಯಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರಿಯಲು ರಾಜಕೀಯವಾಗಿ ಪಾಲ್ಗೊಳ್ಳುವಿಕೆ ಅಗತ್ಯ. ಪ್ರಾಚೀನ ಕಾಲದಲ್ಲೂ ಗ್ರಾಮಗಳು ಉತ್ತಮ ಆಡಳಿತಾತ್ಮಕ ವ್ಯವಸ್ಥೆಯನ್ನು ಹೊಂದಿದ್ದವು. ಈ ವ್ಯವಸ್ಥೆಯನ್ನು ಗ್ರಾಮ ಪಂಚಾಯಿತಿ ಎಂದು ಕರೆಯಲಾಗಿದೆ.

ಗ್ರಾಮಾಡಳಿತ ವ್ಯವಸ್ಥೆಯು ಪ್ರಾಚೀನಕಾಲದಿಂದಲೂ ಅಸ್ತಿತ್ವದಲ್ಲಿದ್ದು ಭಾರತೀಯರ ರಾಜಕೀಯ ಜೀವನದಲ್ಲಿ ಹಾಸುಹೊಕ್ಕಾಗಿದೆ. ಕಾಲಾನಂತರದಲ್ಲಿ ಈ ವ್ಯವಸ್ಥೆ ಬೆಳವಣಿಗೆಯಾಗತೊಡಗಿತು. ಸ್ವಾತಂತ್ರ್ಯ ನಂತರ ಭಾರತ ಸಂವಿಧಾನದ ೪೦ನೇ ವಿಧಿಯ ೮೦ನೇ ಭಾಗವು ರಾಜ್ಯ ನಿರ್ದೇಶಕ ತತ್ವಗಳನ್ನು ಒಳಗೊಂಡಿದೆ. ಈ ತತ್ವಗಳನುಸಾರ ಗ್ರಾಮ ಪಂಚಾಯಿತಿಗಳನ್ನು ಸಂಘಟಿಸಿ ಸ್ವಯಂ ಘಟಕಗಳಾಗಿ ಕಾರ್ಯ ನಿರ್ವಹಿಸುವಂತೆ ಮಾಡುವ ಜವಾಬ್ದಾರಿಯನ್ನು ರಾಜ್ಯ ಸರ್ಕಾರಗಳಿಗೆ ನಿಗದಿಗೊಳಿಸಲಾಯಿತು. ತದನಂತರ ಗ್ರಾಮ ಪಂಚಾಯಿತಿಗಳು ಪ್ರತೀ ಹಳ್ಳಿಗಳಲ್ಲಿ ರಚಿತವಾಗಿ ಅಭಿವೃದ್ಧಿ ಕಾರ್ಯಾಚರಣೆಯ ಸಂಪೂರ್ಣ ಹೊರೆಯನ್ನು ಹೊರಬೇಕಾಯಿತು.

೧೯೯೩ರಲ್ಲಿ ಸಂವಿಧಾನದ ೭೩ನೇ ತಿದ್ದುಪಡಿ ಮೇರೆಗೆ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಶಾಸನಾತ್ಮಕ ಸ್ಥಾನಮಾನ ನೀಡಲಾಯಿತು. ನಂತರ ಮೂರು ಹಂತಗಳಲ್ಲಿ ಗ್ರಾಮ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿಗಳು ಅಸ್ತಿತ್ವಕ್ಕೆ ಬಂದವು. ಪಂಚಾಯಿತಿ ರಾಜ್ಯ ವ್ಯವಸ್ಥೆಯ ಮೊದಲ ಹಂತವೇ ಗ್ರಾಮ ಪಂಚಾಯಿತಿ ಆಗಿದೆ. ಐದು ಸಾವಿರದಿಂದ ಏಳು ಸಾವಿರ ಜನಸಂಖ್ಯೆಯ ಗ್ರಾಮ ಪಂಚಾಯಿತಿ ಮಟ್ಟದಲ್ಲೂ ಮಹಿಳೆಯರಿಗೆ ಶೇ. ೩೩% ಮೀಸಲಾತಿ ಇದ್ದು, ಮಹಿಳೆಯರು ಅಧಿಕಸಂಖ್ಯೆಯಲ್ಲಿ ರಾಜಕೀಯ ಪ್ರವೇಶಿಸುವುದರಿಂದ ಪ್ರಸ್ತುತ ರಾಜಕಾರಣದ ಸಂರಚನೆಯಲ್ಲಿಯೇ ಅಮೂಲಾಗ್ರ ಬದಲಾವಣೆಯೊಂದು ಆಗುತ್ತಿದೆ. ಇವರ ಪ್ರವೇಶದಿಂದಾಗಿ ಇಡೀ ರಾಜಕಾರಣಕ್ಕೆ ಭಿನ್ನ, ಮೌಲ್ಯ, ಆದ್ಯತೆ ಹಾಗೂ ದೃಷ್ಟಿಕೋನವನ್ನು ಒದಗಿಸುತ್ತಾರೆ. ಈಗಾಗಲೇ ಸ್ಥಾಪಿತಗೊಂಡಿರುವ ಮೌಲ್ಯಗಳಿಗಿಂತ ಭಿನ್ನವಾದ ಮೌಲ್ಯಗಳು ಆಲೋಚನೆಗಳನ್ನು ಹುಟ್ಟು ಹಾಕುತ್ತಾರೆ.

ಪಂಚಾಯತ್ ಸಂಸ್ಥೆಗಳಲ್ಲಿ ಅದರಲ್ಲೂ ಗ್ರಾಮ ಪಂಚಾಯತ್‌ಗಳಲ್ಲಿ ಮಹಿಳೆಯ ಅಧಿಕ ಪಾಲ್ಗೊಳ್ಳುವಿಕೆಯಿಂದ ಅನೇಕ ಬದಲಾವಣೆಗಳು, ಸುಧಾರಣೆಗಳು, ಅಭಿವೃದ್ಧಿ ಕಾರ್ಯಗಳು ಆಗಿವೆ. ವೈಯಕ್ತಿಕ ನೆಲೆಯಲ್ಲಿ ಚುನಾಯಿತರಾದ ಮಹಿಳೆಯರು ಆತ್ಮಸ್ಥೈರ್ಯವನ್ನು ಬೆಳೆಸಿಕೊಂಡು ಸಮಾಜದ ಎಲ್ಲಾ ವರ್ಗಗಳೊಂದಿಗೆ ಮಿಳಿತಗೊಂಡಂತೆಲ್ಲಾ ಅವರ ಅರಿವಿನ ಮಟ್ಟ ಹೆಚ್ಚಿದೆ. 'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ' ಎಂಬ ಸಾಕ್ಷರತಾ ಆಂದೋಲನದ ಘೋಷಣೆಗಳಂತೆ 'ಹೆಣ್ಣೊಂದು ಅಧಿಕಾರದ ಚುಕ್ಕಾಣಿ ಹಿಡಿದರೆ ನವ ಸಮಾಜಕ್ಕಾಗಿ ಒಂದು ಹೆಜ್ಜೆ ಮುಂದಿಟ್ಟಂತೆ' ಎಂಬ ಹೇಳಿಕೆಗಳಂತೆ ಅನೇಕ ಚುನಾಯಿತ ಮಹಿಳೆಯರು ತಾವು ಪಡೆದುಕೊಂಡ ಅರಿವನ್ನು ಆತ್ಮಸ್ಥೈರ್ಯವನ್ನು ಆರೋಗ್ಯ ಮತ್ತು ನೈರ್ಮಲ್ಯದ ಪಾಠವನ್ನು ಮೊದಲು ತಮ್ಮ ಮನೆಯಲ್ಲಿ ಆಚರಣೆಗೆ ತಂದಿದ್ದಾರೆ.

ಹೀಗೆ ರಾಜಕೀಯ ಪ್ರವೇಶದಿಂದಾಗಿ ರಾಜಕೀಯ ಪ್ರಜ್ಞೆಯುಳ್ಳ ಮಹಿಳೆಯರು ಪಂಚಾಯಿತಿ ಸಭೆಗಳಲ್ಲಿ ಪಾಲ್ಗೊಳ್ಳುತ್ತಿರುವುದರಿಂದ ಸಭೆಗೆ ಗಾಂಭೀರ್ಯವನ್ನು ತಂದು ಕೊಟ್ಟಿದ್ದಾರೆ. ಬಹಿರಂಗ ಅವ್ಯವಹಾರಗಳಿಗೆ ತಕ್ಕಮಟ್ಟಿಗೆ ಕಡಿವಾಣ ಬಿದ್ದಿದೆ. ಪಂಚಾಯತ್ ಸಭೆಗಳಲ್ಲಿ ಅಶ್ಲೀಲ ಪದಗಳ ಬಳಕೆ ಕಡಿಮೆಯಾಗುತ್ತಿದೆ. ಹೆಣ್ಣು ಮಕ್ಕಳನ್ನು ಕುರಿತು ಮಾತನಾಡುವಾಗ ಹಗುರವಾಗಿ ವರ್ತಿಸದೆ ಎಚ್ಚರಿಕೆ ವಹಿಸುತ್ತಾರೆ.

ಭಾರತದ ರಾಜಕೀಯ ವ್ಯವಸ್ಥೆಯು ಶಕ್ತಿ ಮತ್ತು ಹಣವುಳ್ಳ ಸಮೂಹಗಳಿಗೆ ಮಾತ್ರ ಅಧಿಕಾರ ಎಂಬುದು ಒಂದು ಮೌಖಿಕ ಅನುಶಾಸನ ಅರ್ಥವಂತಿಕೆಯಾಗಿ ನಮ್ಮಲ್ಲಿ ಮುಂದುವರಿಯುತ್ತಿದೆ. ಇಂತಹ ಸಂದರ್ಭದಲ್ಲಿ ರಾಜಕೀಯವೆಂಬುದು ವ್ಯಕ್ತಿಯೊಬ್ಬನು ತನ್ನ ಗುರಿಗಮ್ಯತೆಯನ್ನು ಮುಟ್ಟುವ ಸಲುವಾಗಿ ಬಳಸುವ ತಂತ್ರಗಾರಿಕೆಯೆಂದು ಭಾವಿಸಲಾಗಿದೆ. ಈ ತಂತ್ರಗಾರಿಕೆಯನ್ನು ರೂಪಿಸುವ ಹಕ್ಕೆಲ್ಲಾ ಗಂಡಸಿನದೆ ಆಗಿರುವುದರಿಂದ ಆತನ ಹಿತಾಹಿತಗಳೇ ಚರಿತ್ರೆಯ ಏಳುಬೀಳುಗಳಿಗೆ ಕಾರಣವಾಗಿವೆ. ಲಿಂಗ ರಾಜಕಾರಣವೆಂಬುದು ಸಾಮಾಜಿಕ ಸಾಂಸ್ಕೃತಿಕ ನೆಲೆಗಟ್ಟನ್ನು ಹೊಂದಿದಾಗ ಹೊರಡುವ ಧ್ವನಿಗೂ ಮತ್ತು ಆರ್ಥಿಕ ಶಕ್ತಿಯನ್ನು ಒಳಗೊಂಡು ಹಾಗೇ ಹೊರಡುವ ಧ್ವನಿಗೂ ವ್ಯತ್ಯಾಸವಿರುತ್ತದೆ. ಸಾಂಸ್ಕೃತಿಕ ಲಿಂಗರಾಜಕಾರಣ ಆರ್ಥಿಕ ಆಸ್ತಿಭಾರದ ಮೇಲೆ ಮೈದಳೆದ ಕಾರಣ ಬಲಿಷ್ಠರು ಮಾತ್ರ ಬದುಕುವ ಹಾದಿಗಳನ್ನು ಇಲ್ಲಿ ತೋರಿಸಲಾಗಿದೆ. ಲಿಂಗರಾಜಕಾರಣದ ಜೊತೆಗೆ ಶಕ್ತಿರಾಜಕಾರಣವೆಂಬುದು ಸೇರಿಕೊಂಡು ರಾಜಕೀಯ ಕ್ಷೇತ್ರವನ್ನು ಪುರುಷಮುಖಿಯಾಗಿಸಿದೆ. ಅಧಿಕಾರ ಗದ್ದುಗೆಗೆ ಬಲಿಷ್ಟ ಗಂಡಸಿನ ವಾರಸುದಾರಿಕೆಯಿಲ್ಲವೆಂದಾಗ ಮಾತ್ರ ಅದೇ ಮೂಲದ ಹೆಣ್ಣನ್ನು ಮುಂದೆ ತರುತ್ತಾರೆ.

ವರ್ತಮಾನದ ಪುರುಷ ಪ್ರಧಾನ್ಯ ರಾಜಕೀಯ ರಾಜಕಾರಣದಲ್ಲಿ ಮಹಿಳೆಯನ್ನು ಸಾಧನ ಸರಕಾಗಿ, ವ್ಯವಹಾರ ಆಧಾರಿತ ಹಿತದ ಹುನ್ನಾರವು ಇದೆ.

ಪಕ್ಷ ರಾಜಕಾರಣದ ಸಂದರ್ಭದಲ್ಲಿ ಮಹಿಳಾ ಮತಗಳ ಮೇಲೆ ಕಣ್ಣಿಟ್ಟವರು ಮಹಿಳಾ ಮೀಸಲಾತಿ ಮಹಿಳಾ ಸಮಾನತೆಯನ್ನು ಪ್ರಣಾಳಿಕೆಯಲ್ಲಿ ಆದ್ಯತೆಯ ವಿಷಯವನ್ನು ದೊಡ್ಡದಾಗಿ ಮಾಡಿಕೊಂಡು ಕಳೆದ ಹಲವು ವರ್ಷಗಳಿಂದ ರಂಪಾಟ ಮಾಡುತ್ತಿರುವರು. ಆದರೆ ಇಂದಿಗೂ ಯಾವುದೇ ಪಕ್ಷ ಚುನಾವಣೆಯ ಟಿಕೇಟು ಹಂಚಿಕೆಯಲ್ಲಿ ಕುಲ ಮತ್ತು ಹಣವನ್ನು ಪ್ರಮುಖ ಮಾನದಂಡವನ್ನಾಗಿ ಮಾಡಿಕೊಂಡಿವೆ. (ಮಲ್ಲಿಕಾಘಂಟಿ, ಸಬಿಹಾಭೂಮಿ ಗೌಡ (ಸಂ) ೨೦೦೬, ಪುಟ-೧೯). ಟಿಕೇಟ್ ವಿಂಗಡಣೆ ಸಮಯದಲ್ಲಿ ಮೀಸಲಾತಿ ಅನ್ವಯ ಇಂತಿಷ್ಟು ಮಹಿಳೆಯರಿಗೆ ಎಂದು ಬಾಯಿ ಬಿಡುವುದಿಲ್ಲ. ಇದೇ ಸಂದರ್ಭದಲ್ಲಿ ಗಂಡಸು ರಾಜಕಾರಣಿ ಸತ್ತ ಮನೆಯಿಂದ ಅನುಕಂಪ ಪ್ರೇರಿತ ಮತಗಳು ಬರುವಂತಿದ್ದರೆ ಮಹಿಳೆಯನ್ನು ಆ ಸ್ಥಾನಕ್ಕೆ ತರುತ್ತಾರೆ.

ಸಮಾಜದ ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ರಾಜಕೀಯವಾಗಿ ಅಧಿಕ ಪ್ರವೇಶ ಪಡೆದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸ್ಥಿತಿಗತಿಯ ಬಗ್ಗೆ ವಿಶೇಷ ಗಮನವನ್ನು ನೀಡುವಂತಾಗಿ ಮಹಿಳೆಯರ ಆದ್ಯತೆ ವಲಯಗಳನ್ನು ಗುರುತಿಸುವಂತಾಗುತ್ತದೆ. ಅವರಲ್ಲಿರುವ ಪ್ರತಿಭೆಯನ್ನು ಹೊರ ತೆಗೆಯಲು ಅದನ್ನು ಸಾರ್ವಜನಿಕವಾಗಿ ಸಾದರಪಡಿಸಲು ಸಹಕಾರಿಯಾಗುತ್ತದೆ. ತಳಮಟ್ಟದಿಂದ ಮೇಲ್ಮಟ್ಟದ ರಾಜಕಾರಣದವರೆಗೆ ಮಹಿಳಾ ರಾಜಕೀಯ ಪ್ರವೇಶದಿಂದಾಗಿ ವ್ಯವಸ್ಥೆಯಲ್ಲಿ ಗಮನಾರ್ಹ ಬದಲಾವಣೆ ತರಲು ಸಾಧ್ಯವಾಗುತ್ತದೆ. ಪುರುಷನಷ್ಟೇ ಸರಿಸಮಾನವಾಗಿರುವ ಮಹಿಳೆಯರ ಜನಸಂಖ್ಯಾ ಬಲದಿಂದಾಗಿ ಈಗಿನ ಎಲ್ಲಾ ರಾಜಕೀಯ

ಪಕ್ಷಗಳು ಪ್ರತ್ಯೇಕ ಮಹಿಳಾ ಘಟಕಗಳನ್ನು ಆರಂಭಿಸಿವೆ. ಪ್ರತಿಯೊಂದು ಪಕ್ಷವೂ ತನ್ನ ಪ್ರಣಾಳಿಕೆಯಲ್ಲಿ ಮಹಿಳಾ ಆದ್ಯತೆಯನ್ನು ಕಾಯ್ದುಕೊಳ್ಳಬೇಕಾಗಿದೆ. ಚುನಾವಣೆಯಲ್ಲಿ ಗೆದ್ದು ಅಧಿಕಾರಕ್ಕೆ ಬಂದ ನಂತರ ಯಾವುದೇ ಪಕ್ಷವಾಗಲೀ ಮಹಿಳೆಯರನ್ನು ನಿರ್ಲಕ್ಷಿಸುವಂತಿಲ್ಲ. ಅಧಿಕಾರ ಚುಕ್ಕಾಣಿ ಹಿಡಿದ ರಾಜಕೀಯ ಪಕ್ಷವು ತನ್ನ ಪ್ರತಿಯೊಂದು ನೀತಿ ನಿರ್ಣಯಗಳಲ್ಲಿ ಸುಧಾರಣಾ ಕಾರ್ಯಕ್ರಮವನ್ನು ಮಹಿಳೆಯರಿಗೆ ವಿಶೇಷವಾಗಿ ರೂಪಿಸಿ ಜಾರಿಗೊಳಿಸುವುದು ಅನಿವಾರ್ಯವಾಗುತ್ತದೆ.

ಮಹಿಳೆಯ ಮೂಲ ಅಧಿಕಾರ, ರಾಜಕಾರಣದ ಪ್ರವೇಶ, ಪಾಲುಗಾರಿಕೆ ಪ್ರಶ್ನೆಯನ್ನು ಬದಿಗಿರಿಸಲಾಗಿದೆ. ಅದಕ್ಕೆ ಸೂಕ್ತ ತರಬೇತಿ, ಶಿಕ್ಷಣ, ವಾತಾವರಣವಿಲ್ಲವೆಂದು ನಿರಾಕರಿಸುತ್ತಲೇ ಬಂದಿದೆ. ಇದೀಗ ಪಂಚಾಯಿತ್ ಕಾಯಿದೆಗಳು ಜಾರಿಗೆ ಬಂದಾಗಿನಿಂದ ಮಹಿಳೆಯರಿಗೆ ತಳಮಟ್ಟದ ರಾಜಕೀಯ ಸಂಸ್ಥೆಗಳಲ್ಲಿ ಮೀಸಲಾತಿ ಪರಿಕಲ್ಪನೆಯಡಿ ಪ್ರವೇಶ ಮತ್ತು ಅಧಿಕಾರಗಳನ್ನು ನೀಡಲಾಗಿದೆ. ಇಲ್ಲಿನ ಶೇ. ೩೩ರಷ್ಟು ಮಹಿಳಾ ಮೀಸಲಾತಿ ಕೂಡ ಒಂದೇ ಬಾರಿಗೆ ಕಲ್ಪಿಸಲಾಗಿಲ್ಲ.

ಮಹಿಳೆ ತನ್ನ ರಾಜಕೀಯ ಪ್ರವೇಶ ಹಾಗೂ ತೊಡಗಿಸಿಕೊಳ್ಳುವಿಕೆಯನ್ನು ತನ್ನ ಸ್ವಂತ ಆಯ್ಕೆಯಾಗಿ ಎಂದು ಸ್ವೀಕರಿಸಿಲ್ಲ. ಅದೊಂದು ಆಕಸ್ಮಿಕ ಅಥವಾ ಬೇರೊಬ್ಬರ ಒತ್ತಡದಿಂದ ಅನಿವಾರ್ಯವಾಗಿ ರಾಜಕೀಯ ಪ್ರವೇಶ ಹೊಂದಿದ್ದಾಳೆ ಎನ್ನುವ ನಕಾರಾತ್ಮಕ ಹೇಳಿಕೆ ಮಹಿಳೆಯ ಮೇಲೆ ತಳೆದಿರುವ ಪೂರ್ವಾಗ್ರಹ ಪೀಡಿತ ನಿಲುವು ಮೀಸಲಾತಿಯೊಂದಗಿನ ಅವಳ ರಾಜಕೀಯ ಪ್ರವೇಶ ತಾತ್ವಿಕವಾಗಿಯಾದರೂ ಒಪ್ಪುವಂತಹದ್ದು. ಈ ಅವಕಾಶದಿಂದಾಗಿಯೇ ಅವಳು ಮಹಿಳೆಯರ ಸ್ವಭಾವಕ್ಕೆ ರಾಜಕೀಯ ವಿರುದ್ಧವಾದದ್ದು ಎಂಬ ಸಾಂಪ್ರದಾಯಿಕ ನಂಬಿಕೆಯನ್ನು ಅಲ್ಲಗೆಳೆದು ಚುನಾವಣೆಯಲ್ಲಿ ಭಾಗಿಯಾದಳು. ತಳಮಟ್ಟದಲ್ಲಿ ರಾಜಕೀಯ ಪ್ರವೇಶಿಸಿ ತೊಡಗಿಸಿಕೊಳ್ಳುವಿಕೆ ಹಾಗೂ ಅಧಿಕಾರ ಹೊಂದುವಿಕೆಗಳು ರಾಜಕೀಯಾಸಕ್ತಿಯನ್ನು ಗಟ್ಟಿಗೊಳಿಸುವುವು.

ಮಹಿಳೆಯ ಸಮಸ್ಯೆಯನ್ನು ಪರಿಹರಿಸಲು ಪುರುಷ ಮತ್ತವನ ರಾಜಕೀಯ ಪಕ್ಷಗಳು ಹಾತೊರೆಯುತ್ತಿವೆ. ಅನೇಕ ಸುಧಾರಣಾ ಪ್ರಕ್ರಿಯೆ ಯೋಜನೆಗಳನ್ನು ಜಾರಿಗೊಳಿಸಲೆತ್ನಿಸುತ್ತವೆ. ಆದರೆ ಈ ಕ್ರಿಯೆಗಳೆಲ್ಲಾ ತನ್ನ ಹಿತಾಸಕ್ತಿಯ ಪರವಾಗಿರುವಂತಹ ನಿಲುವುಗಳು, ಆಲೋಚನೆಗಳು, ಮಹಿಳೆಯು ತಮ್ಮ ಸಮಸ್ಯೆಗಳನ್ನು ತಾನೇ ಬಗೆಹರಿಸಿಕೊಳ್ಳಬಲ್ಲರು. ಅವುಗಳು ಯಾವುವು ಎಂಬುದನ್ನು ಸಮರ್ಥವಾಗಿ ಸರಳವಾಗಿಯೂ ಸ್ಪಷ್ಟಪಡಿಸಿ ಇತ್ಯರ್ಥ ಕಂಡುಕೊಳ್ಳಬಲ್ಲರು (ಕೆ.ಆರ್. ಮಂಗಳ, ಪ್ರಜಾವಾಣಿ ದಿನಪತ್ರಿಕೆ, ದಿನಾಂಕ ೫.೩.೨೦೦೦).

ರಾಜಕೀಯ ಮಹಿಳೆಗೆ ಸಂಬಂಧಿಸಿದ ವಿಚಾರವಲ್ಲ. ಅದು ಪುರುಷರಿಗೆ ಸಂಬಂಧಿಸಿದ್ದು. ಅವರಿಗೆ ಒಗ್ಗುವಂತಹದ್ದು ಮಹಿಳೆ ತನ್ನ ನೈಸರ್ಗಿಕ ಅರ್ಹತೆಯೊಂದಿಗೆ ಪ್ರಸ್ತುತ ಅಪರಾಧೀಕರಣ ಹಾಗೂ ಜಾತೀಯತೆಯಿಂದ ನಾರುತ್ತಿರುವ ರಾಜಕಾರಣವನ್ನು ನಿಭಾಯಿಸಲಾರಳು. ಮೂಲತಃ

ಮೃದು ಸ್ವಭಾವದವಳಾಗಿರುವುದರಿಂದ ಅವಳಿಗೆ ಶಿಶುಪಾಲನೆ, ಸಮಾಜಕಲ್ಯಾಣ, ಶಿಕ್ಷಣ ಕ್ಷೇತ್ರಗಳೇ ಸೂಕ್ತ .ರಾಜಕಾರಣದಿಂದ ಸ್ತ್ರೀತನ ನಾಶವಾಗುತ್ತದೆ ಇತ್ಯಾದಿ ತಲೆ ಬುಡವಿಲ್ಲದ ಪೂರ್ವಾಗ್ರಹಪೀಡಿತ ಹೇಳಿಕೆಗಳು ನಮ್ಮ ಮುಂದಿವೆ. ಆದರೆ ತನ್ನ ಅಸ್ತಿತ್ವಕ್ಕಾಗಿ ಸ್ವಾತಂತ್ರ್ಯಕ್ಕಾಗಿ ಸಾಕಷ್ಟು ಬೆಲೆ ತೆತ್ತಿರುವ ಅವಳು ಇಂದು ತುಂಬಾ ಪ್ರಬುದ್ಧಳಾಗಿದ್ದಾಳೆ. ಮಕ್ಕಳ ಲಾಲನೆ-ಪಾಲನೆ, ಗೃಹ ಕಾರ್ಯಗಳ ಜೊತೆ ಜೊತೆಗೆ ಇಂದು ಕಂಪ್ಯೂಟರ್‌ಗಳೊಂದಿಗೆ, ಅಧಿಕಾರಿಗಳೊಂದಿಗೆ, ರೋಗಿಗಳೊಂದಿಗೆ, ಸಹೋದ್ಯೋಗಿಗಳೊಂದಿಗೆ ನಿರ್ಭಯವಾಗಿ, ಸಬಲಳಾಗಿ ವರ್ತಿಸುವ ಅವಳಿಗೆ ರಾಜಕೀಯ ಕ್ಷೇತ್ರ ಹೊರೆ ಎನಿಸದು. ಹೀಗೆ ರಾಜಕೀಯ ಪ್ರವೇಶಿಸಿರುವ ಮಹಿಳೆಯರಿಗೆ ರಾಜಕೀಯ ಲೆಕ್ಕಾಚಾರ ಹಾಕಿ ನಡೆಸುವ ವ್ಯವಹಾರವಾಗಿ ಕಂಡಿಲ್ಲ. ಅದೊಂದು ಅವರಿಗೆ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುವ ಕ್ಷೇತ್ರವಾಗಿ ಪರಿಣಮಿಸಿದೆ. ತಮ್ಮ ಹಕ್ಕು, ಸವಲತ್ತುಗಳ ಬಗ್ಗೆ ಆತ್ಮವಿಶ್ವಾಸ ಮೂಡಿಸಿಕೊಳ್ಳುವ ಕ್ಷಣಗಳನ್ನು ಅದು ಒದಗಿಸುತ್ತದೆ. ಅವಳಿಗೆ ಪುರುಷನಂತೆ ರಾಜಕೀಯದ ಗುರಿ ರಾಜಕೀಯವೇ ಆಗಿರುವುದಿಲ್ಲ. ಅದೊಂದು ಸಾಮಾಜಿಕ ಪರಿವರ್ತನೆಗಾಗಿರುವ ಒಂದು ಮಹತ್ವದ ಮಾಧ್ಯಮ. ಮಾನವ ಹಕ್ಕುಗಳ ಅಂಗವಾಗಿ ತನ್ನ ಹಕ್ಕನ್ನು ಆಕೆ ರಾಜಕೀಯದಲ್ಲಿ ಚಲಾಯಿಸಲು ಇಷ್ಟು ಪಡುತ್ತಾಳೆ. ಹಾಗಾಗಿ ಮಹಿಳೆ ಅಧಿಕಾರದಲ್ಲಿರುವ ಅನೇಕ ಕಡೆ ಸಾರಾಯಿ ವಿರೋಧಿ ಆಂದೋಲನ, ಸಾಕ್ಷರತಾ ಚಳುವಳಿಯಂತಹ ಸಾಮಾಜಿಕ ನ್ಯಾಯದ ಚಟುವಟಿಕೆಗಳು ಕಂಡು ಬರುತ್ತಿವೆ.( ಕೆ.ಆರ್. ಮಂಗಳ, ದಿನಾಂಕ ೫.೩.೨೦೦೦).

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಸ್ವ-ಇಚ್ಛೆಯಿಂದ ಸ್ವಸಾಮರ್ಥ್ಯದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಭಾಗವಹಿಸಲು, ನಿರ್ಧಾರ ತೆಗೆದುಕೊಳ್ಳಲು ಅನುಕೂಲಕರ ವಾತಾವರಣವಿಲ್ಲ. ಇದು ಕೌಟುಂಬಿಕ ಮತ್ತು ಸಾಮಾಜಿಕ ನೆಲೆಗಳಲ್ಲಿ ಇರುವಂಥದ್ದು. ಕಾರಣ ಮಹಿಳಾ ಮೀಸಲಾತಿಯು ಮಹಿಳೆಯ ರಾಜಕೀಯ ಭಾಗವಹಿಸುವಿಕೆಯ ದೃಷ್ಟಿಯಿಂದ ಸ್ವಾಗತಾರ್ಹ ಕ್ರಮವಾಗಿದೆ. ಇಂದಿನ ಪಂಚಾಯತ್‌ರಾಜ್ ವ್ಯವಸ್ಥೆಯು ಸ್ಥಳೀಯ ಆಡಳಿತದ ಪ್ರತಿಯೊಂದು ಹಂತಗಳಲ್ಲಿ ಮಹಿಳೆಯರಿಗೆ ಶೇ. ೩೩ರಷ್ಟು ಪ್ರಾತಿನಿಧ್ಯ ಕೊಡುವ ಮೂಲಕ ದುರ್ಬಲ ವರ್ಗಕ್ಕೆ ಸೇರಿದ ಮಹಿಳೆಯರ ರಾಜಕೀಯ ಸಂವೇದನೆಗಳಿಗೆ ಜೀವಂತಿಕೆಯನ್ನು ನೀಡಿದೆ. ಮೀಸಲಾತಿ ನೀಡಿದ ಮಾತ್ರಕ್ಕೆ ಮಹಿಳೆಯರಿಗೆ ಎಲ್ಲಾ ರೀತಿಯ ರಾಜಕೀಯ ಸ್ವಾತಂತ್ರ್ಯ ದಕ್ಕೀತೆ? ಅಧಿಕಾರ ರೂಪಿಕೆ ಮತ್ತು ಅನುಷ್ಠಾನ ಸಾಧ್ಯವಾದೀತೆ ಪುರುಷ ಸಹಕಾರವಿಲ್ಲದೆ ಸ್ವತಂತ್ರವಾಗಿ ಎಷ್ಟರಮಟ್ಟಿಗೆ ನಿರ್ಣಯ ಪ್ರಕ್ರಿಯೆಯಲ್ಲಿ ಮಹಿಳೆ ಭಾಗವಹಿಸುತ್ತಾಳೆ? ಈ ಮೀಸಲಾತಿ ಅವಳ ಪ್ರಾತಿನಿಧಿತ್ವಕ್ಕೆ ಎಷ್ಟರಮಟ್ಟಿಗೆ ಸಹಕಾರಿಯಾಗಿದೆ ಎಂಬ ಪ್ರಶ್ನೆಗಳಿಗೆ ಒಂದೇ ಉಸಿರಿನಲ್ಲಿ ಹೌದು ಎಂದು ಉತ್ತರಿಸಲು ಸಾಧ್ಯವಿಲ್ಲ.

**೩.೨.೧. ಮಹಿಳಾ ಭಾಗವಹಿಸುವಿಕೆ ಮತ್ತು ಚುನಾವಣಾ ಪ್ರಕ್ರಿಯೆಯ ನಾಮಪತ್ರ ಸಲ್ಲಿಕೆ :**

ಮಹಿಳೆ ರಾಜಕೀಯ ಸುಪರ್ದಿಗೆ ಬರಲು ಅವಳ ಅಥವಾ ಅವಳ ಕುಟುಂಬ ವರ್ಗದ ಆಸಕ್ತಿ ಇಲ್ಲದಿದ್ದರೂ ಮೀಸಲಾತಿಯನ್ನು ಒಂದು ಅಸ್ತ್ರ ಮಾಡಿಕೊಂಡು ಮೇಲ್ಜಾತಿಗಳು ತಮ್ಮ ಹಿಡಿತನವನ್ನು ಸಾಧಿಸಲು ತುಂಬ ಜಾಣತನದಿಂದ ಅವಳನ್ನು ತಮ್ಮ ಸೂತ್ರದ ಗಾಳಿಪಟದಂತೆ ಆಡಿಸುತ್ತವೆ. ಕೆಲವು ಮೇಲ್ವರ್ಗಗಳಲ್ಲಿನ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಸ್ವಹಿತ ಸಾಧನೆಗಾಗಿ ಹೀಗೆ ಮೀಸಲಾತಿಯನ್ನು ದುರುಪಯೋಗ ಮಾಡಿಕೊಳ್ಳುತ್ತಿವೆ. ಜಾತಿ ಮತ್ತು ಲಿಂಗದ ಕಾರಣದಿಂದ ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವ ಅಂಚಿನ ಮಹಿಳೆ ತನ್ನ ರಾಜಕೀಯ ಕತೃತ್ವ ಶಕ್ತಿಯನ್ನು ನಿಯಮಾನುಸಾರವಾಗಿ ಪಾಲಿಸಲು ಇವು ಬಿಡುತ್ತಿಲ್ಲ. ಮಹಿಳೆ ರಾಜಕೀಯಕ್ಕೆ ಬರಲು ಒಪ್ಪುವುದಿಲ್ಲ. ಕಾರಣ ಇಷ್ಟೇ ಅವಳ ಮೇಲಿರುವ ಸಾಮಾಜಿಕ ಒತ್ತಡಗಳೆ ಅವಳಿಗೆ ಮುಳ್ಳಾಗಿವೆ. ಸ್ವಂತ ಇಚ್ಛೆಯಿಂದ ರಾಜಕೀಯಕ್ಕೆ ಬರಲು ಕೆಲವೇ ಕೆಲವು ಜನ ಮಹಿಳೆಯರಿಗೆ ಸಾಧ್ಯವಾಗಿರಬಹುದಾದರೂ ಅದರ ಸಂಖ್ಯೆಯೂ ಸಹ ತುಂಬ ಕಡಿಮೆ. ಪಂಚಾಯಿತಿಯ ಒಬ್ಬ ಚುನಾಯಿತ ಸದಸ್ಯರಾಗಿದ್ದರೂ ಹಲವಾರು ಮಹಿಳೆಯರು ಇಂದಿಗೂ ಕೃಷಿ ಕೆಲಸ, ಕೂಲಿ, ತರಕಾರಿ ವ್ಯಾಪಾರದಂತ ಕಾರ್ಯಗಳಲ್ಲಿಯೇ ತೊಡಗಿಸಿಕೊಂಡಿದ್ದಾರೆ.

ಮಹಿಳೆ ತನ್ನ ರಾಜಕೀಯಾಧಿಕಾರವನ್ನು ಕುರಿತಂತೆ ತುಂಬ ತಾತ್ಸಾರದ ಮಾತುಗಳನ್ನಾಡುತ್ತಾರೆ. ಪುರುಷವರ್ಗ ಮತ್ತು ಮೇಲ್ ವರ್ಗಗಳ ಹಿತಸಾಧನೆಗಾಗಿಯೇ ತನ್ನ ರಾಜಕೀಯ ಅಧಿಕಾರ ಬಳಕೆಯಾಗುತ್ತದೆ ಎಂಬ ಅರಿವು ಅವಳಿಗಿದೆ. ಲಿಂಗ ಮತ್ತು ಅನಕ್ಷರತೆಯ ಕಾರಣದಿಂದ ಸಭೆ ಸಮಾರಂಭಗಳಲ್ಲಿ ಅವಳ ದಾಖಲಾತಿಯೂ ಕೇವಲ ಸಾಂಕೇತಿಕ ಹಾಗೂ ಅಲಂಕಾರಿಕ ಉತ್ಸವ ಮೂರ್ತಿಯಂತೆ ಕಂಡುಬರುತ್ತದೆ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಹರಿಕಾರಳಾಗಲು ಅವಳಿಗೆ ಸಾಧ್ಯವಾಗುತ್ತಿಲ್ಲ. ಅಲ್ಲೆ ತನಗೆ ದೊರೆಯಬೇಕಾದ ಯೋಜನೆ ಕಾರ್ಯಗಳ ಪ್ರಾಥಮಿಕ ಅರಿವು ಅವಳಿಗಿಲ್ಲವಾಗಿದೆ. ಅಧಿಕಾರ ಕೇಂದ್ರದ ಅತ್ಯಂತ ಕೆಳಮಟ್ಟದ ಅಂಗವಾಗಿರುವ ಗ್ರಾಮ ಪಂಚಾಯಿತಿಗಳಲ್ಲಿ ಮಹಿಳಾ ರಾಜಕೀಯ ಅಸ್ತಿತ್ವವನ್ನೇ ಅಲುಗಾಡಿಸುವಂತ ಕಾರ್ಯಗಳು ನಿರಂತರವಾಗಿ ನಡೆಯುತ್ತವೆ. ಮಹಿಳೆಗೆ ಅಧಿಕಾರ ಸಿಕ್ಕಿದೆ ಎಂದರೆ ಅದು ಮೇಲ್ಜಾತಿಯ ಊರಿನ ಗೌಡನ ಅನುಕಂಪದ ಆಧಾರದ ಮೇಲೆ ಅಥವಾ ಪುರುಷ ವರ್ಗದ ಹಿಡಿತದಿಂದಲೇ ರಾಜಕೀಯಕ್ಕೆ ತರಲು, ಹಾಗೆಯೇ ತಮ್ಮ ಹಿಡಿತವನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು ಅವಳು ಒಂದು ಧಾಳವಾಗಿಯೇ ಬಳಕೆಯಾಗುತ್ತಿದ್ದಾಳೆ.  ಮಹಿಳೆ ತನಗೆ ರಾಜಕೀಯ ಅಧಿಕಾರ ಸ್ವಂತ ಆಯ್ಕೆ ಅಥವಾ ಬೇಕು ಎಂದು ಬಯಸಿ ಬಂದಿಲ್ಲದಿರುವ ಅಂಶಗಳನ್ನು ನೋಡಿದರೆ ಅವಳಿಗಿರುವ ರಾಜಕೀಯ ಇಚ್ಛಾಶಕ್ತಿಯ ಅರಿವು ಸಮವಾಗಬಹುದು ಮಹಿಳೆಗೆ ಸಾಮಾಜಿಕ ನಿರ್ಬಂಧಗಳಿವೆಯೋ ಹಾಗೆಯೇ ಕೌಟುಂಬಿಕವಾಗಿಯೂ ನಿಯಂತ್ರಣಗಳಿವೆ. ಹೀಗಿದ್ದಾಗ್ಯೂ ಅವಳು ಕುಟುಂಬದ ವಿರೋಧದ ನಡುವೆಯೂ ಕುಟುಂಬದ ಹಿರಿಯ ಪುರುಷನ ಮಾತಿನ ಆಣತಿಯಂತೆ ರಾಜಕೀಯಕ್ಕೆ

ಬಂದಿರುತ್ತಾರೆ. ಒಟ್ಟು ಪಂಚಾಯಿತಿಯಲ್ಲಿ ಮಹಿಳೆಯ ಬದಲಿಗೆ ಅವಳ ಗಂಡ ಅಥವಾ ಅಪ್ಪ, ಅಣ್ಣ, ಯಾರೋ ಒಬ್ಬರ ಅಧಿಕಾರ ಚಲಾವಣೆಯಿರುತ್ತದೆ. ಆದರೆ ಇತ್ತೀಚೆಗೆ ಕಾನೂನು ಬಿಗಿ ಇರುವುದರಿಂದ ಹೆಣ್ಣು ಮಕ್ಕಳು ಸಭೆಗೆ ಹಾಜರಾಗುತ್ತಾರೆ. ಆದರೆ ಗ್ರಾಮ ಪಂಚಾಯಿತಿ ಕೆಲಸಗಳನ್ನು ಮಾಡಿಸುವ, ಬಿಲ್ ಮಾಡಿಸುವ ಅಧಿಕಾರಿಗಳ ಜೊತೆ ಮಾತನಾಡುವುದು ಅವರ ಗಂಡಂದಿರು, ಮಗ, ಮೈದುನರು ಆಗಿರುತ್ತಾರೆ. ಉದಾಹರಣೆ ಮೂಲಕ ಹೇಳುವುದಾದರೆ. **ಸಾಕಮ್ಮ ಬಿ.ಟಿ :** ಇವರು ಗ್ರಾಮ ಪಂಚಾಯಿತಿ ಸದಸ್ಯರಾಗಿದ್ದು, ಇವರು ಹತ್ತನೇ ತರಗತಿಯನ್ನು ಓದಿದ್ದು, ಇವರನ್ನು ನೇರವಾಗಿ ಸಂದರ್ಶನ ಮಾಡಿದಾಗ ಗ್ರಾಮ ಪಂಚಾಯಿತಿಯಲ್ಲಿ ನಿಮಗೆ ಯಾವ ರೀತಿಯ ಸ್ಥಾನಮಾನ ಅಧಿಕಾರವನ್ನು ನೀಡಿದ್ದಾರೆ ಎಂದು ಕೇಳಿದ್ದಕ್ಕೆ ಅವರ ಉತ್ತರ ಹೀಗಿತ್ತು. ಇವರು ಚುನಾವಣೆಯಲ್ಲಿ ಸ್ಪರ್ಧಿಸಲು ನೀವೇ ನಿರ್ಣಯ ತೆಗೆದುಕೊಂಡಿರಾ ಎಂದು ಕೇಳಿದ್ದಕ್ಕೆ ನನಗೂ ಚುನಾವಣೆಯಲ್ಲಿ ಸ್ಪರ್ಧಿಸಬೇಕು ಎನ್ನುವ ಆಕಾಂಕ್ಷೆಯಿತ್ತು. ಅದರ ಜೊತೆಯಲ್ಲಿ ನಮ್ಮ ಮನೆಯಲ್ಲಿ ನನ್ನ ಗಂಡ ಚುನಾವಣೆಗೆ ನಿಲ್ಲಲು ಪ್ರೋತ್ಸಾಹ ನೀಡಿದರು ಎಂದು ಹೇಳುವುದರ ಜೊತೆ ಗಂಡು ಮಕ್ಕಳು ಇಲ್ಲದೆ ಹೆಣ್ಣು ಮಕ್ಕಳದು ಏನೂ ನಡೆಯುವುದಿಲ್ಲ, ಅವರು ಮುಂದೆ ಹೆಜ್ಜೆ ಹಾಕಿದರೆ ನಾವು ಅವರ ಹೆಜ್ಜೆಯಲ್ಲಿ ನಡೆಯುತ್ತೇವೆ ಅಷ್ಟೆ ಎಂದರು. ನಾಮಪತ್ರ ಸಲ್ಲಿಸಲು ಮತ ಪ್ರಚಾರ ಮಾಡಲು ಎಲ್ಲದರಲ್ಲಿಯೂ ನಾನೇ ಭಾಗವಹಿಸಿರುವುದಾಗಿ ಹೇಳಿದರು. ಸಭೆ ಸಮಾರಂಭಗಳಲ್ಲಿ ನಮಗೆ ತಿಳಿದಷ್ಟು ಮಾತನಾಡುತ್ತೇವೆ. ನಮ್ಮ ಊರಿಗೆ ಬೇಕಾಗುವ ಸೌಲಭ್ಯಗಳು ನಮಗೆ ಬೇಕು ಎಂದು ಕೇಳುತ್ತೇವೆ ಎಂದರು. ಪಂಚಾಯಿತಿಯ ಸಭೆ ಎಲ್ಲದಕ್ಕೂ ನಾವೇ ಹಾಜರಾಗುತ್ತೇವೆ. ನನ್ನ ಪರವಾಗಿ ನನ್ನ ಗಂಡ, ಅಪ್ಪ ಮತ್ತು ಅಣ್ಣ ಯಾರಿಗೂ ಸಭೆಯ ಒಳಗೆ ಅವಕಾಶವಿಲ್ಲ. ಈಗ ಕಾನೂನು ಬೀಗಿ ಇವೆ ಎಂದರು. ಆದರೆ ಪಂಚಾಯಿತಿಯಿಂದ ಮಾಡಿಸಬಹುದಾದ ಎಲ್ಲ ಕೆಲಸ ಕಾರ್ಯಗಳನ್ನು ನನ್ನ ಗಂಡನೇ ಮಾಡಿಸುತ್ತಾರೆ. ನೀವು ಹೋಗುವುದಿಲ್ಲವೆ ಎಂದು ಕೇಳಿದ್ದಕ್ಕೆ ಇಲ್ಲ ನಮ್ಮ ಮನೆಯವರು ಖುದ್ದು ಮಾಡಿಸುತ್ತಾರೆ. ನಾವು ಅವರು ಇಲ್ಲದ ವೇಳೆ ಕೆಲಸ ಮಾಡುತ್ತಾರೋ ಇಲ್ಲ ಎಂದು ನೋಡಿಕೊಂಡು ಬರುತ್ತಾರೆ ಎಂದರು. ಮತ್ತೆ ಚುನಾವಣೆಯಲ್ಲಿ ಸ್ಪರ್ಧಿಸಲು ಆಸೆ ಇದೆಯೇ ಎಂದಿದ್ದಕ್ಕೆ, ಅವಕಾಶ ಸಿಕ್ಕರೆ ಸ್ಪರ್ಧಿಸುತ್ತೇನೆ ಎಂದರು. ಊರಿನ ಜನ ಒಂದು ಕೆಲಸ ಮಾಡಿಸಿಕೊಡಿ ಎಂದು ನಿಮ್ಮನ್ನು ಕೇಳುತ್ತಾರೋ ಅಥವಾ ನಿಮ್ಮ ಗಂಡನನ್ನು ಕೇಳುತ್ತಾರೋ ಎಂದು ಪ್ರಶ್ನಿಸಿದ್ದಕ್ಕೆ ಅವರು ನಮ್ಮ ಗಂಡನನ್ನು ಎಂದು ಉತ್ತರಿಸಿದರು.

**ಟಿ.ಬಿ.ರೂಪ :** ಇವರು ಗ್ರಾಮ ಪಂಚಾಯಿತಿಯ ಸದಸ್ಯರಾಗಿದ್ದು ಹತ್ತನೇ ತರಗತಿಯನ್ನು ಓದಿದ್ದರು ಸಹ ಇವರು ನನಗೆ ಗ್ರಾಮ ಪಂಚಾಯಿತಿಯ ಬಗ್ಗೆ ಎಳ್ಳಿನಷ್ಟು ಜ್ಞಾನವಿರಲಿಲ್ಲ. ನಾವು ಗ್ರಾಮ ಪಂಚಾಯಿತಿ ಸದಸ್ಯರಾಗಿ ಒಂದು ವರ್ಷವಾದರು ಅದರ ಬಗ್ಗೆ ಪ್ರಾಥಮಿಕ ಮಾಹಿತಿ ನನಗೆ ತಿಳಿದಿರಲಿಲ್ಲ. ಒಂದು ವರ್ಷದ ನಂತರ ಮನೆಯಲ್ಲಿ ನನ್ನ ಗಂಡ ಸಹ ಸಭೆಯಲ್ಲಿ

ಇಷ್ಟು ಜನರಿರುತ್ತಾರೆ ಹೀಗೆ ಮಾತನಾಡಬೇಕು ಎಂದು ಹೇಳಿಕೊಟ್ಟಾಗ ಹಾಗೇ ಮಾತನಾಡಲು ಸ್ವಲ್ಪ ಧೈರ್ಯ ಬಂದು ಮಾತನಾಡಲು ಪ್ರಾರಂಭಿಸಿದೆ. ನಮ್ಮ ಊರಿಗೆ ಬೇಕಾದ ಸೌಲಭ್ಯಗಳನ್ನು ಕೇಳಿ ಪಡೆಯುತ್ತೇನೆ. ಗ್ರಾಮ ಪಂಚಾಯಿತಿಯಿಂದ ಬಂದ ಸೌಲಭ್ಯಗಳನ್ನು ಉದಾ:- ರೋಡ್ ಮಾಡಿಸುವುದು, ತೊಟ್ಟಿ ಕಟ್ಟಿಸುವುದು ಈ ರೀತಿಯ ಎಲ್ಲ ಕೆಲಸಗಳನ್ನು ನಮ್ಮ ಮನೆಯವರು ಮಾಡಿಸುತ್ತಾರೆ. ಮತ್ತೆ ಚುನಾವಣೆಯಲ್ಲಿ ಸ್ಪರ್ಧಿಸಲು ಆಸೆಯಿದೆಯೇ ಎಂದು ಕೇಳಿದಕ್ಕೆ ಇಲ್ಲ. ಬೇರೆಯವರಿಗೆ ಅವಕಾಶ ಸಿಗಲಿ ಸ್ಪರ್ಧಿಸುವುದಿಲ್ಲ ಎಂದು ಉತ್ತರಿಸಿದರು.

**ರತ್ನಮ್ಮ** : ಇವರು ಗ್ರಾಮ ಪಂಚಾಯಿತಿಯ ಮಾಜಿ ಸದಸ್ಯರಾಗಿದ್ದು, ೯ನೇ ತರಗತಿಯನ್ನು ಓದಿದ್ದಾರೆ. ಎರಡುವರೆ ವರ್ಷ ಸದಸ್ಯರಾಗಿದ್ದು, ನಂತರ ಅಧ್ಯಕ್ಷರಾಗಿದ್ದೇವೆ. ಮಹಿಳಾ ಮೀಸಲಾತಿ ಬಂದಿದ್ದರಿಂದ ಮನೆಯಲ್ಲಿ ನನ್ನ ಗಂಡ ಮತ್ತು ಊರಿನ ಎಲ್ಲರ ಪ್ರೋತ್ಸಾಹದಿಂದ ಚುನಾವಣೆಗೆ ಸ್ಪರ್ಧಿಸಿರುತ್ತೇನೆ. ನನಗೆ ಸ್ಪರ್ಧಿಸಲು ಇಷ್ಟವೇ ಇರಲಿಲ್ಲ. ನಾನು ಸಭೆಗೆ ಹೋಗುವುದು ಗ್ರಾಮಕ್ಕೆ ಬೇಕಾದ ಸೌಲಭ್ಯಗಳನ್ನು ಪಡೆಯಲು. ಹೋರಾಡಿ ಪಡೆಯುವ ಶಕ್ತಿ ಇರಲಿಲ್ಲ. ನನಗೆ ಧೈರ್ಯ ಸಾಲದು. ಆದರೆ ಮನೆಯಲ್ಲಿ ಹಿಂಸೆ ಮಾಡಿ ಸ್ಪರ್ಧಿಸಲು ಹೇಳಿದ್ದರಿಂದ ನಿಂತೆ. ಗೆದ್ದ ನಂತರ ಜನರಲ್ ಕ್ಯಾಸ್ಟ್‌ಗೆ ಯಾವುದೇ ಸೌಲಭ್ಯಗಳು ಗ್ರಾಮ ಪಂಚಾಯಿತಿಯಲ್ಲಿ ಇರಲಿಲ್ಲ ಕೊಡುತ್ತಿರಲಿಲ್ಲ. ಎಸ್‌ಸಿ-ಎಸ್‌ಟಿ ಗೆ ಸೌಲಭ್ಯಗಳಿದ್ದವು ಕೊಡುತ್ತಿದ್ದರು. ಆದರೆ ಜನ ಇವರು ಬರೀ ಎಸ್.ಸಿ-ಎಸ್.ಟಿ. ಗೆ ಸೌಲಭ್ಯಗಳನ್ನು ಕೊಡಿಸುತ್ತಾರೆ. ಜನರಲ್ ಕ್ಯಾಸ್ಟ್‌ಗೆ ಏನು ಕೊಡಿಸುತ್ತೀರಿ ಎನ್ನುವರು. ಅದರ ಜೊತೆಗೆ ಊರಿಗೆ ಬೇಕಾದ ಏನಾದರೂ ಸೌಲಭ್ಯ ಮಾಡಿಸಿದರೆ ಕೆಲವು ಹೊಟ್ಟೆಕಿಚ್ಚಿನ ಜನ ಒಪ್ಪುತ್ತಿರಲಿಲ್ಲ. ಆದ್ದರಿಂದ ಸುಮ್ಮನೆ ಮೀಟಿಂಗ್ ಹೋಗುವುದು ಬರುವುದು ಅಷ್ಟೆ ಮಾಡಿದೆ. ಸಭೆಯಲ್ಲಿ ಗಂಡು ಮಕ್ಕಳು ಜಾಸ್ತಿ ಮಾತನಾಡಿದರೆ ನಾವು ಒಂದೆರೆಡು ಮಾತನಾಡಿ ಸುಮ್ಮನಾಗುತ್ತಿದ್ದೆವು. ನಮಗೆ ಧೈರ್ಯ ಸಾಲದು. ಅವರೆದುರಿಗೆ ಕುಳಿತು, ಗೆದ್ದಿದ್ದೇವೆ ಎನ್ನುವ ಕಿಚ್ಚಿಗೆ ಮಾತನಾಡಲು ಸಾಧ್ಯ. ಮಾರ್ಯಾದೆ ಮುಖ್ಯ ಅಲ್ವ, ಗೆದ್ದಿದ್ದೇವೆ ಅಂತ. ಮನೆಗೆ ಬಂದು ಸಭೆಗೆ ಕರೆಕೊಂಡು ಹೋಗುತ್ತಿದ್ದರು. ಕುಳಿತುಕೊಂಡು ಸೌಲಭ್ಯಗಳನ್ನು ಕೇಳುತ್ತಿದ್ದೇವೆ. ಅದು ನಿಧಾನವಾಗಿ ಜೋರಾಗಿಯೂ ಮಾತನಾಡುತ್ತಿರಲಿಲ್ಲ, ಊರಿನ ಜನ ಏನಾದರೂ ಕೆಲಸ ಮಾಡಿಸಿಕೊಳ್ಳುವುದು, ಸೌಲಭ್ಯ ಕೇಳುವುದು ಇದ್ದರೆ ನಮ್ಮ ಮನೆಯವರ ಹತ್ತಿರವೆ ಕೇಳುತ್ತಿದ್ದರು. ನಾನು ಏನಿದ್ರು ಅವರ ಹಿಂದೆಯೇ. ನನ್ನ ಗಂಡ ಮುಂದೆ ಹೋದರೆ ಅವರ ಹಿಂದೆ ನಾನು ಎಂದು ಹೇಳಿದರು. ನಮಗೆ ಯಾಕೆ ಇವೆಲ್ಲ ಬೇಡಮ್ಮ ನಾನು ಮುಂಚಿನಿಂದಲೂ ಅಂಗಡಿಯಿಟ್ಟುಕೊಂಡಿದ್ದೇನೆ ಸಾಕು. ಇಲ್ಲೆ ಮನೆಯಲ್ಲೆ ಮಾಡಿಕೊಂಡು ಇರುತ್ತೇನೆ. ಸಭೆಯಲ್ಲಿ ನೀವು ಮಾತನಾಡುತ್ತಿದ್ದೀರಾ ಎಂದು ಕೇಳಿದರೆ ೨೦ ವರ್ಷಗಳಿಂದ ಬಿಡದೆ ಗೆದ್ದ ಬೇರೆ ಊರಿನ ಸದಸ್ಯರು ನಮ್ಮ ಊರಿನ ಸದಸ್ಯರು ಇಬ್ಬರು ತುಂಬ ಜೋರು. ನಾವು ಇದ್ದೀವಿ ಅಂದ್ರೆ ಇದ್ದೀವಿ ಗೆದ್ದಿದ್ದೀವಿ ಅಂದ್ರೆ ಗೆದ್ದಿದ್ದೀವೆ ಅಷ್ಟೆ. ಆದರೆ ನನ್ನ ಜೊತೆಯಲ್ಲಿಯೇ ಎಸ್.ಸಿ. ಒಬ್ಬ ಹೆಣ್ಣು

ಮಗಳಿದ್ದಳು ಆಕೆ ಯಾರಿಗೂ ಹೆದರುತ್ತಿರಲಿಲ್ಲ. ಪ್ರಶ್ನೆ ಮಾಡುತ್ತಿದ್ದಳು. ನೀನು ಅಂದರೆ ನಿಮ್ಮಪ್ಪ ಎನ್ನುತ್ತಿದ್ದಳು. ನೀನು ಕೆಟ್ಟ ಮಾತನಾಡಿದರೆ ನಾನು ಒಂದು ಕೆಟ್ಟ ಮಾತನಾಡುತ್ತೇನೆ ಎನ್ನುವಳು. ಆದರೆ ನನಗೆ ಆ ಧೈರ್ಯ ಬರಲಿಲ್ಲ. ಸುಮ್ಮನೆ ಹೋಗಿ ಕುಳಿತುಕೊಂಡು ಬರುತ್ತಿದ್ದೆ. ಏನು ನಡೆಯುತ್ತಿರಲಿಲ್ಲ. ಅದೇ ಸಮಯದಲ್ಲಿ ಎಲೆಕ್ಷನ್ ಬಂದಿತು. ಮತ ಚಲಾಯಿಸಲು ಗಲಾಟೆ ಮಾಡಿ ಹತ್ತು ಜನ ಒಂದೇ ಸಲ ಒಳನುಗ್ಗಿ ನಾಗರತ್ನಮ್ಮ ಎನ್ನುವರ ವೋಟನ್ನು ಯಾರೋ ಬೇರೆಯವರು ಹಾಕಿದರು. ನಾನು ನಾಗರತ್ನಮ್ಮರವರ ವೋಟನ್ನು ಹಾಕಿಲ್ಲ ಅಂತ ಹೇಳುವುದಕೋ ಧೈರ್ಯ ಇಲ್ಲ. ಪೊಲೀಸ್ ನನ್ನ ಸ್ಟೇಷನ್‌ಗೆ ಕರೆದುಕೊಂಡು ಹೋಗಿ ಕೋರ್ಟ್ ಕಚೇರಿಯಲ್ಲಿ ೬–೭ ವರ್ಷ ಅಲೆದಿದ್ದೆವು. ಆದ್ದರಿಂದ ಚುನಾವಣೆ ಬೇಕಾ? ಸಾಕಮ್ಮ. ನಮ್ಮ ಮನೆಯವರು ಮುಂದೆ ಹೆಜ್ಜೆ ಇಟ್ಟರೆ ಅವರ ಹೆಜ್ಜೆಯಲ್ಲಿ ಹಿಂದೆ ಹೋಗುತ್ತೇನೆ. ಬಿಟ್ಟು ಹೋಗುವುದಿಲ್ಲ. ಆ ಧೈರ್ಯ ನಮಗಿಲ್ಲ. ನಾವು ಎಂ.ಎಲ್.ಎ., ಎಂ.ಪಿ. ಎಲೆಕ್ಷನ್‌ಗೆ ಊರಿನ ಹಿರಿಯರ ಮುಖಂಡರು ಈ ಗುರುತಿಗೆ ವೋಟು ಹಾಕಿ ಎಂದಾಗ ಅದಕ್ಕೆ ಹಾಕುತ್ತೇವೆ ಅಷ್ಟೆ. ನಾವು ಪಂಚಾಯಿತಿ ಸದಸ್ಯರಾದಾಗ ಸಂಭಾವನೆ ೧೫೦ ರೂ. ಕೊಡುತ್ತಿದ್ದರು. ನಾವು ಸ್ವಲ್ಪವು ಹಣ ಮಾಡಿಕೊಳ್ಳಲಿಲ್ಲ. ನಾನು ಕೊನೆಯದಾಗಿ ಹೇಳುವುದಾದರೆ ಯಾವ ಚುನಾವಣೆ ಬೇಡ ಏನು ಬೇಡ ಅಂತ ನನ್ನ ಮಕ್ಕಳು ಮೊಮ್ಮಕ್ಕಳು ಎಲ್ಲರಿಗೂ ಹೇಳುತ್ತೇನೆ. ನಿಮ್ಮಂತವರಿಗೆಲ್ಲ ಏಕೆ ಏನು ತಿಳಿಯದ ಮತ್ತೊಂದಿಲ್ಲ ಸುಮ್ಮನೆ ಮನೆಯಲ್ಲಿ ಕೆಲಸ ಮಾಡಿಕೊಂಡು ಇರುವುದೇ ಸೂಕ್ತ ಎಂದರು.

**ಕಲಾವತಿ :** ೨೦೦೫ ರಲ್ಲಿ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಸ್ಪರ್ಧಿಸಿರುವುದಾಗಿ ಹೇಳಿದರು. ನಾನು ಚುನಾವಣೆಯಲ್ಲಿ ಸ್ಪರ್ಧಿಸುವುದಕ್ಕೆ ಪ್ರೋತ್ಸಾಹ ನೀಡಿದವರು ನಮ್ಮ ಮನೆಯವರು (ಗಂಡ). ಖುದ್ದು ನಾಮಪತ್ರ ಸಲ್ಲಿಸಲು ನನ್ನನ್ನೇ ಕರೆದುಕೊಂಡು ಹೋಗಿದ್ದರು. ಮತ ಪ್ರಚಾರಕ್ಕೂ ಸಹ ನಾನು ನಮ್ಮ ಮನೆಯವರು ಹೋಗಿದ್ದೆವು. ನನ್ನ ಗ್ರಾಮ ಪಂಚಾಯಿತಿಯ ಬಗ್ಗೆ ಯಾವುದೇ ರೀತಿಯಾಗಿ ಪ್ರಾಥಮಿಕ ಮಾಹಿತಿ ಇರಲಿಲ್ಲ. ನಮಗೆ ಎರಡು ತಿಂಗಳು ಟ್ರೈನಿಂಗ್ ಕೊಟ್ಟರು. ಆಗ ಸ್ವಲ್ಪ ತಿಳಿದುಕೊಂಡೆವು. ನಂತರ ಸಭೆಯಲ್ಲಿ ನಮ್ಮ ಊರಿಗೆ ಬೇಕಾದ ಸೌಲಭ್ಯಗಳ ಬಗ್ಗೆ ಕೇಳುತ್ತಿದ್ದೆವು. ಸಭೆ ಮುಗಿದ ನಂತರ ನಮ್ಮ ಯಜಮಾನರು ಒಳಗೆ ಹೋಗಿ ಪಿ.ಡಿ.ಓ., ಅಧ್ಯಕ್ಷರ ಜೊತೆ ಮಾತನಾಡಿ ಊರಿಗೆ ಬೇಕಾದ ಸೌಲಭ್ಯಗಳ ಬಗ್ಗೆ ವಿಚಾರಿಸುತ್ತಿದ್ದರು. ನಾವು ಮೇಯರ್ ಆಗಿದ್ದರು ಊರಿನ ಜನ ನಮ್ಮ ಯಜಮಾನರ ಹತ್ತಿರ ಬಂದು ಸೌಲಭ್ಯಗಳನ್ನು ಕೇಳುತ್ತಿದ್ದರು. ನನ್ನನ್ನು ಕೇಳುತ್ತಿರಲಿಲ್ಲ. ಊರಿನಲ್ಲಿ ಕೆಲಸ ಮಾಡಿಸುತ್ತಿದ್ದುದು ನಮ್ಮ ಮನೆಯವರು. ಎಲ್ಲ ವ್ಯವಹಾರ ನಮ್ಮ ಮನೆಯವರದೆ.

**ವನಜಾಕ್ಷಮ್ಮ.ಕೆ.ಎಂ :** ಚುನಾವಣೆಯಲ್ಲಿ ಸ್ಪರ್ಧಿಸಲು ನನಗೆ ಇಷ್ಟವಿರಲಿಲ್ಲ. ನನ್ನ ಸ್ವಂತ ನಿರ್ಧಾರವು ಅಲ್ಲ. ನನ್ನ ಗಂಡ ಊರಿನ ಮುಖಂಡರ ಪ್ರೋತ್ಸಾಹದಿಂದ ಸ್ಪರ್ಧಿಸಿದೆ. ನಾನು ಚುನಾವಣೆಯಲ್ಲಿ ಗೆದ್ದ ನಂತರ ಸಭೆಯಲ್ಲಿ ಭಾಗವಹಿಸುತ್ತಿದ್ದೆ ಊರಿಗೆ ಅವಶ್ಯವಿರುವ ಸೌಲಭ್ಯಗಳನ್ನು

ಒದಗಿಸಿ ನನ್ನ ಕೈಲಾದ ಎಲ್ಲಾ ಕೆಲಸಗಳನ್ನು ಮಾಡಿಸಿದ್ದೇನೆ. ಆಗ ಊರಿನ ಸಹಕಾರ ಚೆನ್ನಾಗಿತ್ತು. ಆದರೆ ಈಗ ಆ ಸಹಕಾರ ಅನ್ನುವುದು ಈಗ ಇಲ್ಲ. ನಾನು ಸಭೆಗೆ ಹೋಗಲು ನನ್ನ ಮನೆಯ ಹತ್ತಿರ ಇನ್ನೊಬ್ಬ ಸದಸ್ಯರಿದ್ದರು. ಅವರ ಜೊತೆ ಹೋಗಿ ಬರುತ್ತಿದ್ದೆ. ಮತ್ತೆ ಚುನಾವಣೆಗೆ ಸ್ಪರ್ಧಿಸಲು ಇಷ್ಟವಿಲ್ಲ. ಏಕೆಂದರೆ ಬೇರೆಯವರೆಗೆ ಅವಕಾಶ ನೀಡಬೇಕು. ಮುಂದಿನ ಯುವ ಜನಾಂಗದವರಿಗೂ ಅವಕಾಶ ಕೊಟ್ಟು ನೋಡೋಣ ಎನ್ನುವ ದೃಷ್ಟಿಯಿಂದ ಮತ್ತು ವಯಸ್ಸಾಗಿರುವುದರಿಂದ ಸ್ಪರ್ಧಿಸುವುದಿಲ್ಲ ಎಂದರು. ಮತ್ತೆ ಮನೆ ಕಡೆ ಕೆಲವು ಕಷ್ಟ ಉಂಟಾಗಿದ್ದರಿಂದ ಆ ಕಡೆ ಹೆಚ್ಚಿನ ಒಲವು ಇಲ್ಲ, ಮನೆ ಕಡೆ ನೋಡಿಕೊಂಡರೆ ಸಾಕು ಎಂದರು.

**ವನಜಾಕ್ಷಮ್ಮ :** ಇವರು ಯಾವುದೇ ವಿದ್ಯಾರ್ಹತೆಯನ್ನು ಪಡೆದಿಲ್ಲ. ಇವರಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ನನಗೆ ಇಷ್ಟವಿರಲಿಲ್ಲ. ನಮ್ಮ ಜನಾಂಗದ ಎಲ್ಲಾ ಜನರು ಜುಲ್ಮೆ (ಒತ್ತಾಯ) ಮಾಡಿ ಚುನಾವಣೆಗೆ ನಿಲ್ಲಿಸಿದರು. ಗಂಡನ ಮನೆಯೂ ಇದೆ. ತವರು ಮನೆಯೂ ಇದೆ. ಹೆಚ್ಚಿನ ಸಂಖ್ಯೆಯಲ್ಲಿ ವೋಟು ಹಾಕುತ್ತಾರೆ. ಯಾಕೆ ಬೇರೆಯವರಿಗೆ ವೋಟು ಕೊಡಬೇಕು ಎಂದು ನಿಲ್ಲಿಸಿದರು. ನಾವೇ ಓದಿಲ್ಲ ನಾವೇನೂ ನಿಲ್ಲಬೇಕು ಅಂತ ನಿಂತಿಲ್ಲ, ರಾಜಕೀಯಕ್ಕೆ ನಮ್ಮ ಮನೆಯಲ್ಲಿ ನನ್ನ ಗಂಡ ಮಗ ಬೇಡ ಆಕೆಗೆ ಏನು ಗೊತ್ತಾಗಲ್ಲ ಹೆಬ್ಬಟ್ಟು, ನಮ್ಮ ಜನಾಂಗದವರು ಏನು ಪರವಾಗಿಲ್ಲ ಗೆದ್ದರೆ ಗೆಲ್ಲಲ್ಲಿ ಅಷ್ಟೆ ಸಾಕು ಎಂದರು. ಸಭೆಗೆ ಯಾರನ್ನು ಒಳಗಡೆ ಬಿಟ್ಟುಕೊಳ್ಳುವುದಿಲ್ಲ. ನಾವೇ ಗೆದ್ದವರು ಮಾತ್ರ ಒಳಗಡೆ ಇರುತ್ತೇವೆ. ಸಭೆ ಮುಗಿದ ನಂತರ ನನ್ನ ಜೊತೆ ಬಂದಿರುವ ನನ್ನ ಮಗ ಒಳಗಡೆ ಹೋಗಿ ಎಲ್ಲರ ಜೊತೆ ಮಾತನಾಡಿ ಬರುತ್ತಾನೆ. ನಾನು ಸಹ ಮಾತನಾಡುತ್ತೇನೆ. ನಮ್ಮ ಊರಿನಲ್ಲಿ ಲೈಟ್ ಇಲ್ಲ ಬಲ್ಬ್ ಕೊಡಿ, ಚರಂಡಿ ಕ್ಲೀನ್ ಮಾಡಿಸಿ ಎಂದು, ನೀರಿನ ವ್ಯವಸ್ಥೆ ಮಾಡಿ ನೀರಿಲ್ಲ, ಎಂದು ಎಂ.ಎಲ್.ಎ. ಹತ್ತಿರ ಹೋಗಿ ಎಂದರು. ನಾವು ಎಲ್ಲಾ ಸದಸ್ಯರು ಹೋಗಿದ್ದೆವು. ಅದರಲ್ಲಿ ಗಂಡ ಮಕ್ಕಳು ಸದಸ್ಯರಿದ್ದಾರೆ, ಅವರು ಮಾತನಾಡುತ್ತಾರೆ. ಊರಿಗೆ ಬೇಕಾಗುವ ಸೌಲಭ್ಯಗಳನ್ನು ಕೇಳಿದರು.

ಪಂಚಾಯಿತಿಯಲ್ಲಿ ನೀಡಲಾಗುವ ಮೀಸಲಾತಿಯಂತಹ ವಿಚಾರ ಎಷ್ಟರ ಮಟ್ಟಿಗೆ ಫಲಕಾರಿಯಾಗಿದೆ. ಹಾಗೆಯೇ ಮೀಸಲಾತಿಯಡಿಯಲ್ಲಿ ಮಹಿಳೆ ಬರಲು ಯಾವ ರೀತಿಯ ವಾತಾವರಣವಿದೆ. ಆದರೆ ಇಲ್ಲಿ ಯಾವುದಕ್ಕೂ ಅವಕಾಶವಿಲ್ಲ. ಏಕೆಂದರೆ ಪುರುಷ ವರ್ಗಗಳು ತಮ್ಮ ಸ್ವಹಿತ ಸಾಧನೆಯ ಸಲುವಾಗಿ ಮಹಿಳಾ ರಾಜಕೀಯ ಹಕ್ಕನ್ನು ವ್ಯವಸ್ಥಿತವಾಗಿ ಬಳಸುತ್ತಿರುವುದನ್ನು ಗಮನಿಸಬಹುದು.

೪೫-೭೫ರ ಒಳಗೆ ಇರುವ ಮಹಿಳೆಯರು ಅಧಿಕವಾಗಿ ರಾಜಕೀಯಕ್ಕೆ ಬರುತ್ತಿದ್ದಾರೆ. ಇಂತಹ ಸಂಕುಚಿತ ಮನೋಭಾವದ ಹಿಂದೆ ವ್ಯಕ್ತಿಗತವಾಗಿ ಬಂದಿರುವಂತಹ ಅವಳ ಪಾವಿತ್ರ್ಯತೆಯನ್ನು ಪ್ರಶ್ನಿಸುವ ಸಂಶಯಿಸುವ ಸಂಭವವೇ ಹೆಚ್ಚು. ಈ ಕಾರಣದಿಂದಲೇ ಅವರು ಮಧ್ಯ ವಯಸ್ಸಿಗೆ ಬಂದ ನಂತರವೇ ಅವರಿಗೆ ರಾಜಕೀಯ ವೇದಿಕೆ ಸೃಷ್ಟಿಸಲಾಗುತ್ತಿದೆ. ರಾಜಕೀಯ ನೀತಿ

ನಿರ್ಧಾರಗಳನ್ನು ತೆಗೆದುಕೊಳ್ಳಲು ಹಾಗೂ ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿಮರ್ಶಿಸಲು, ಪರಿಶೀಲಿಸಲು ಶೈಕ್ಷಣಿಕ ಮಟ್ಟ ಅತ್ಯಂತ ಅಗತ್ಯ. ಆದರೆ ಮಹಿಳಾ ವಿಷಯದಲ್ಲಿ ಇದು ತುಂಬಾ ವ್ಯತಿರಿಕ್ತವಾದ ರೂಪದಲ್ಲಿದ್ದು ಇತ್ತೀಚಿನ ದಿನಗಳಲ್ಲಿ ಈ ಪರಿಸ್ಥಿತಿ ಸುಧಾರಿಸುತ್ತದೆ. ಅಂದರೆ ಅವಳು ಪಿ.ಯು.ಸಿ ಅಥವಾ ಡಿಗ್ರಿ ಮಾಡಿದ್ದರು ನೀತಿ ನಿರ್ಧಾರಗಳ ತೆಗೆದುಕೊಳ್ಳುವ ಸಂದರ್ಭ ಬಂದಾಗ ಮಹಿಳೆ ಮೌನವಹಿಸಬೇಕಾದ ಪರಿಸ್ಥಿತಿ ಇದೆ. ಮಹಿಳೆಯರ ಬದಲಾಗಿ ಇಲ್ಲಿ ಅವರ ಗಂಡ ತಂದೆ ಅಥವಾ ಸಹೋದರರ ಭಾಗವಹಿಸುವಿಕೆ, ಅಧಿಕಾರ ಚಲಾಯಿಸುವಿಕೆಯೆ ಅಧಿಕವಾಗಿ ಕಂಡುಬರುತ್ತದೆ. ಮಹಿಳೆಯ ಆಲೋಚನಾ ಶಕ್ತಿ ಕಡಿಮೆ, ರಾಜಕೀಯದ ಬಗ್ಗೆ ಅವಳಿಗೆ ಅರಿವಿಲ್ಲ. ತರ್ಕ, ಚತುರತೆಗಳು ಅವಳಿಗೆ ನೈಸರ್ಗಿಕವಾಗಿ ಸಿಕ್ಕಲ್ಲ ಎಂಬ ಹುಸಿ ಇಟ್ಟುಕೊಂಡು ವ್ಯವಸ್ಥಿತವಾಗಿ ಅವಳ ರಾಜಕೀಯವನ್ನು ತುಳಿಯುವ, ನಿಯಂತ್ರಿಸುವ ಅಂಶಗಳು ಇವಾಗಿವೆ. ಗ್ರಾಮ ಸಭೆಗಳಿಗೆ ಇವಳು ಗೈರು ಹಾಜರಾಗುತ್ತಿರುವುದು ಕಂಡುಬರುತ್ತದೆ. ಗ್ರಾಮ ಸಭೆಯಂತಹ ಮಹತ್ವದ ಚರ್ಚೆಯಲ್ಲಿ ಭಾಗವಹಿಸುವಿಕೆಯ ಜೊತೆ ಜೊತೆಗೆ ಗ್ರಾಮಸಭೆಯ ಕುರಿತಾದ ಸಾಮಾನ್ಯ ತಿಳುವಳಿಕೆ ಇಲ್ಲದಿರುವುದು ಸಹ ಇವರು ಗೈರು ಹಾಜರು ಆಗಲು ಕಾರಣ ಆಗಬಹುದು.

ಚುನಾವಣೆಯಲ್ಲಿ ನಾಮಪತ್ರ ಸಲ್ಲಿಸುವುದು ರಾಜಕೀಯ ಭಾಗವಹಿಸುವಿಕೆಯ ಒಂದು ಅಂಶವಾಗಿದೆ. ನಾಮಪತ್ರ ಸಲ್ಲಿಸಲು ಚುನಾಯಿತ ಮಹಿಳೆಯು ಸ್ವತಃ ಹೋಗಿದ್ದಳೇ ಅಥವಾ ಹೋಗದೆ ತನ್ನ ಬೆಂಬಲಿಗರ ಮೂಲಕ ನಾಮಪತ್ರ ಸಲ್ಲಿಸಿದಳೇ ಎನ್ನುವ ಸಂಗತಿಗಳನ್ನು ನೋಡುವುದಾದರೆ

ನಾಮಪತ್ರ ಸಲ್ಲಿಸಲು ಹೋಗಿರುವ ಚುನಾಯಿತ ಮಹಿಳೆಯರು ತಾವೊಬ್ಬರೇ ಹೋಗಿಲ್ಲ. ಚುನಾಯಿತ ಮಹಿಳೆಯರನ್ನು ಸಂದರ್ಶಿಸಿದಾಗ ದೊರೆತ ಉತ್ತರ ಪ್ರಕಾರ ಅವರು ತಮ್ಮ ಪತಿ, ಮಗ, ಮಾವ, ಮೈದುನ, ಅಣ್ಣ, ತಮ್ಮ, ಊರಿನ ಹಿರಿಯರು, ರಾಜಕೀಯ ಮುಖಂಡರು ಸಮುದಾಯ ಬಾಂಧವರು, ಬೆಂಬಲಿಗರು ಇವರೊಂದಿಗೆ ಹೋಗಿ ನಾಮಪತ್ರ ಸಲ್ಲಿಸಿದ್ದಾರೆ. ನಾಮಪತ್ರ ಸಲ್ಲಿಸಲು ಹೋಗದೆ ಇರುವ ಸದಸ್ಯರುಗಳು ಅಜ್ಞಾನ, ನಾಚಿಕೆ, ಮುಜುಗರ, ನಿರಾಸಕ್ತಿ, ಉದಾಸೀನ ಭಾವನೆಗಳನ್ನು ಹೊಂದಿದವರಾಗಿದ್ದಾರೆ. ಹೋಗದಿದ್ದರೂ ನಡೆಯುತ್ತದೆ. ಹೇಗೋ ತನ್ನ ಪರವಾಗಿ ಪತಿಯು ಹೋಗಿದ್ದನಲ್ಲ ಎಂಬಂತಹ ಉತ್ತರಗಳನ್ನು ಆಯ್ಕೆಯಾದ ಮಹಿಳೆಯರ ಮನೋಧರ್ಮದ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

ರಾಜಕೀಯದಲ್ಲಿ ಭಾಗವಹಿಸುವಿಕೆ ಉತ್ತಮವಾಗಿದೆ ಎನ್ನಿಸುತ್ತದೆ. ಆದರೆ ಚುನಾವಣಾ ಪ್ರಚಾರದಲ್ಲಿ ಪಾಲ್ಗೊಂಡ ಎಲ್ಲ ಮಹಿಳೆಯರು ರಾಜಕೀಯ ತರಬೇತಿ ಪಡೆದವರು. ಅಕ್ಷರಸ್ಥರು, ಮೇಲ್ಜಾತಿಯವರು, ರಾಜಕೀಯ ಪ್ರಜ್ಞೆವುಳ್ಳವರು, ಧೈರ್ಯವಂತರು, ಆರ್ಥಿಕವಾಗಿ ಮುನ್ನಡೆ ಹೊಂದಿದವರು ಎಂದು ಅರ್ಥೈಸಲು ಆಗುವುದಿಲ್ಲ. ಭಾಗವಹಿಸಿದವರು, ಭಾಗವಹಿಸದವರು ಎರಡು ವರ್ಗಗಳಲ್ಲಿಯೂ ನಾಚಿಕೆ, ಮುಜುಗರ ಯಾಕಾದರೂ ಚುನಾವಣೆಗೆ ಇಳಿದೆನೋ

ಸಾಕಪ್ಪ ಸಾಕು. ಅಡಿಗೆಯ ಮನೆಯೇ ಸುರಕ್ಷಿತವಾಗಿತ್ತು ಎನ್ನುವ ಭಾವನೆಗಳು ಹೆಚ್ಚಾಗಿ ಕಂಡು ಬರುತ್ತವೆ. ಕೆಲವರಂತೂ ಇನ್ನೊಂದು ಚುನಾವಣೆಯ ಸಹವಾಸವೇ ಬೇಡ ಎಂದರೆ, ಮತ್ತೆ ಕೆಲವರು ಒತ್ತಾಯದಿಂದ ಸ್ಪರ್ಧಿಸಿದ ಮೇಲೆ ಅನುಭವಿಸಬೇಕು ಎಂದಿದ್ದಾರೆ.

ವಿವಿಧ ರೀತಿಯ ಒತ್ತಾಯಗಳಿಗೆ ಮಣಿದು ಮಹಿಳೆಯರು ಚುನಾವಣೆಯಲ್ಲಿ ಭಾಗವಹಿಸುವರು. ಗ್ರಾಮ ಪಂಚಾಯಿತಿಗಳಲ್ಲಿ ಗಂಡನ ಇಚ್ಛೆಯಿಂದ ಸ್ಪರ್ಧಿಸಿದ ಮಹಿಳೆ ಸಮುದಾಯದ ಜನರ ಒತ್ತಾಯಕ್ಕೆ ಮಣಿದು ಸ್ಪರ್ಧಿಸಿದ ಮಹಿಳೆಯರು, ಮೀಸಲಾತಿ ಕಾರಣದಿಂದ ಸ್ಪರ್ಧಿಸಿದವರು, ಸ್ವ–ಇಚ್ಛೆಯಿಂದ ಸ್ಪರ್ಧಿಸಿದ ಚುನಾಯಿತ ಸದಸ್ಯರು ತಳಮಟ್ಟದ ವಿವಿಧ ವರ್ಗಗಳಿಂದ ಬಂದವರಾಗಿರುತ್ತಾರೆ. ಇಂಥವರಲ್ಲಿ ಇಚ್ಛಾಶಕ್ತಿಯ ಕೊರತೆ ಸಹಜವಾಗಿ ಕಂಡು ಬರುತ್ತದೆ.

ಗ್ರಾಮ ಪಂಚಾಯಿತಿಗಳ ಚುನಾಯಿತ ಮಹಿಳೆಯರಲ್ಲಿ ಪದವಿ ಶಿಕ್ಷಣ ಮಟ್ಟ ಅತಿ ಕಡಿಮೆ ಇದೆ. ಆಯ್ಕೆಯಾದ ಮಹಿಳೆಯರಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದವರೇ ಹೆಚ್ಚಾಗಿರುವುದು. ತಮ್ಮ ಹಕ್ಕುಗಳ ಬಗ್ಗೆ ತಿಳಿದುಕೊಳ್ಳುವ ಅವಕಾಶದಿಂದ ಮಹಿಳೆಯರು ವಂಚಿತರಾಗಿರಲು ಅತ್ಯಂತ ಮುಖ್ಯವಾದ ಕಾರಣ. ಅವರು ಅನಕ್ಷರಸ್ಥರಾಗಿರುವುದು. ಇದರಿಂದ ಚುನಾಯಿತ ಮಹಿಳೆಯಲ್ಲಿ ಶಿಕ್ಷಣ ಎಷ್ಟು ಮಹತ್ವವಾಗಿದೆ ಎಂಬುದು ಮನವರಿಕೆಯಾಗಿದೆ.

ಮಹಿಳೆಯ ರಾಜಕೀಯ ಭಾಗವಹಿಸುವಿಕೆಯ ಚರಿತ್ರೆಯನ್ನು ನೋಡಿದಾಗ ಯಾವುದೇ ರಾಜಕೀಯ ಪಕ್ಷವೂ ಮಹಿಳೆಯರನ್ನು ಒಂದು ರಾಜಕೀಯ ಶಕ್ತಿಯನ್ನಾಗಿ ಪರಿಗಣಿಸಿಯೇ ಇಲ್ಲ. ಸಂವಿಧಾನದಲ್ಲಿ ಮಹಿಳೆಗೆ ರಾಜಕೀಯ ಸಮಾನತೆಯನ್ನು ನೀಡಿದ್ದು ರಾಜಕೀಯ ಪ್ರಕ್ರಿಯೆಯಲ್ಲಿ ಅವಳು ಭಾಗವಹಿಸುವಂತೆ ಮಾಡುವುದರತ್ತ ಇಟ್ಟ ಮಹತ್ವದ ಹೆಜ್ಜೆ ಎನ್ನಬಹುದು. ಆದರೆ ಮಹಿಳೆಗೆ ಸಮಾಜದಲ್ಲಿ ಇರುವ ಗೌಣ ಸ್ಥಾನಮಾನ, ಆರ್ಥಿಕ ಅವಲಂಬನೆ, ಅಸಮರ್ಥತೆ, ಸಾಂಸ್ಕೃತಿಕ ಕಟ್ಟುಪಾಡುಗಳು ಮತ್ತು ಮೌಲ್ಯಗಳು ಹಾಗೂ ರಾಜಕೀಯದಲ್ಲಿ ಮಹಿಳೆ ಭಾಗವಹಿಸುವುದರ ಬಗ್ಗೆ ಸಮಾಜ ತಳೆದಿರುವ ದೃಷ್ಟಿಕೋನ ಇವುಗಳಿಂದಾಗಿ ಭಾರತದ ಮಹಿಳೆ ಇನ್ನೂ ರಾಜಕೀಯ ಪ್ರಕ್ರಿಯೆಯ ಹೊರವಲಯದಲ್ಲಿಯೇ ಉಳಿದಿದ್ದಾಳೆ ಎನ್ನಬಹುದು.

ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳ ಮೂಲಕ ಮಹಿಳೆಯರಿಗೆ ಸಮಾನ ಸ್ಥಾನಮಾನ ಕೊಡುವುದರ ಮೂಲಕ ಭಾರತ ದೇಶ ಪ್ರಗತಿಪರ ಹಾಗೂ ಆಧುನಿಕತೆಯ ಮುಖವಾಡ ತೊಟ್ಟಿತ್ತೇ ವಿನಾಃ ತಾರತಮ್ಯ ಉಳಿದುಕೊಂಡೇ ಬಂದಿದೆ. ರಾಜಕೀಯದಲ್ಲಿ ಮಹಿಳೆಯ ಪಾತ್ರ ಬಹುಮಟ್ಟಿಗೆ ಮಹಿಳೆಯ ಸಾಮಾಜಿಕ ಹಾಗೂ ಶೈಕ್ಷಣಿಕ ಸ್ಥಾನಮಾನವನ್ನು ಅವಲಂಬಿಸಿ ಇವತ್ತಿಗೂ ಪುರುಷ ಹಾಗೂ ಮಹಿಳೆಯರ ಶಿಕ್ಷಣದ ನಡುವೆ ಅಗಾಧ ಅಂತರ ಇದೆ. ಶಾಲೆಯಲ್ಲಿನ ಪ್ರತಿ ೧೦೦ ಬಾಲಕರಿಗೆ ಪ್ರತಿಯಾಗಿ ಶಿಕ್ಷಣ ಪಡೆಯುವ ಬಾಲಕಿಯರ ಸಂಖ್ಯೆ ಕೇವಲ ೩೬. ಹೀಗಾಗಿ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆಯಾಗಿರುವುದರ ನೇರ ಪರಿಣಾಮವಾಗಿ ಮಹಿಳೆ ರಾಜಕೀಯ ಕ್ಷೇತ್ರದಿಂದ ದೂರ ಉಳಿದಿದ್ದಾಳೆ ಎನ್ನಬಹುದು. ಅನಕ್ಷರಸ್ಥ

ಮಹಿಳೆಗೆ ರಾಜಕಾರಣ ಎಂದರೆ ಏನೆಂಬುದೇ ತಿಳಿದಿರುವುದಿಲ್ಲ. ಮತ ಚಲಾಯಿಸುವ ಹಕ್ಕುಗಳಾಗಲೀ, ನಾಗರಿಕಳಾಗಿ ಅವಳು ಹೊಂದಿರುವ ಹಕ್ಕುಗಳಾಗಲಿ ಅವಳಿಗೆ ತಿಳಿದಿರುವುದಿಲ್ಲ. ಸಾಮಾನ್ಯವಾಗಿ ತನ್ನ ಕುಟುಂಬದಲ್ಲಿ ಯಜಮಾನ ಹೇಳಿದ ಚಿಹ್ನೆಯ ಮುಂದೆ ಹೆಬ್ಬೆಟ್ಟು ಗುರುತು ಮಾಡುವ ಮೂಲಕ ದೇಶದ ರಾಜಕೀಯದಲ್ಲಿ ಭಾಗವಹಿಸುವ ಮಟ್ಟಿಗೆ ಅವಳ ಪಾತ್ರ ಸೀಮಿತವಾಗಿರುತ್ತದೆ.

**ಪ್ರಸ್ತುತ ತಮಟಕಲ್ಲು ಪರಿಸರದಲ್ಲಿ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಭಾಗವಹಿಸಿ ಗೆದ್ದ ಸದಸ್ಯರು ಮತ್ತು ಅಧ್ಯಕ್ಷ, ಉಪಾಧ್ಯಕ್ಷರ ವಿವರ**

೨೦೧೦-೨೦೧೫ರ ಗುಡ್ಡದರಂಗವ್ವನಹಳ್ಳಿ ಗ್ರಾಮಪಂಚಾಯಿತಿ ಸದಸ್ಯರು ಹಾಗೂ ಪ್ರತಿನಿಧಿಗಳು

| ಕ್ರಸಂ. | ಹೆಸರು | ಹುದ್ದೆ | ಅವಧಿ | ಗ್ರಾಮ |
|---|---|---|---|---|
| ೧. | ವಿ.ಜೆ. ಸುದರ್ಶನರೆಡ್ಡಿ | ಅಧ್ಯಕ್ಷರು | ೨೦೧೦-೨೦೧೫ | ಜಿ.ಆರ್.ಹಳ್ಳಿ |
| ೨. | ಕೆಂಚಮ್ಮ | ಉಪಾಧ್ಯಕ್ಷರು | ೨೦೧೦-೨೦೧೫ | ಆಯಿತೋಳು |
| ೩. | ಮಹಂತೇಶ | ಸದಸ್ಯರು | ೨೦೧೦-೨೦೧೫ | ಜಿ.ಆರ್.ಹಳ್ಳಿ |
| ೪. | ತಿಪ್ಪೇಸ್ವಾಮಿ ಟಿ.ಹೆಚ್. | ಸದಸ್ಯರು | ೨೦೧೦-೨೦೧೫ | ಜಿ.ಆರ್.ಹಳ್ಳಿ |
| ೫. | ತಿಪ್ಪೇಸ್ವಾಮಿ ಎನ್.ಆರ್. | ಸದಸ್ಯರು | ೨೦೧೦-೨೦೧೫ | ಜಿ.ಆರ್.ಹಳ್ಳಿ |
| ೬. | ರಂಗಪ್ಪ | ಸದಸ್ಯರು | ೨೦೧೦ | ಜಿ.ಆರ್.ಹಳ್ಳಿ |
| ೭. | ಕೆ.ಎಮ್. ವನಜಾಕ್ಷಮ್ಮ | ಸದಸ್ಯರು | ೨೦೧೦-೨೦೧೫ | ತಮಟಕಲ್ಲು |
| ೮. | ಟಿ.ಎಮ್. ಕಲ್ಲೇಶ | ಸದಸ್ಯರು | ೨೦೧೦-೨೦೧೫ | ತಮಟಕಲ್ಲು |
| ೯. | ಸುಮಿತ್ರಮ್ಮ | ಸದಸ್ಯರು | ೨೦೧೦-೨೦೧೫ | ತಮಟಕಲ್ಲು |
| ೧೦. | ವೆಂಕಟಸ್ವಾಮಿ | ಸದಸ್ಯರು | ೨೦೧೦-೨೦೧೫ | ತಮಟಕಲ್ಲು |
| ೧೧. | ಶಾಂತಕುಮಾರಿ | ಸದಸ್ಯರು | ೨೦೧೦-೨೦೧೫ | ಆಯಿತೋಳು |
| ೧೨. | ವೆಂಕಟೇಶ | ಸದಸ್ಯರು | ೨೦೧೦-೨೦೧೫ | ಆಯಿತೋಳು |
| ೧೩ | ರೇಣುಕಮ್ಮ | ಸದಸ್ಯರು | ೨೦೧೦-೨೦೧೫ | ಜಿ.ಆರ್.ಹಳ್ಳಿ |
| ೧೪. | ಈರಪಂಜಪ್ಪ | ಸದಸ್ಯರು | ೨೦೧೦-೨೦೧೫ | ಆಯಿತೋಳು |
| ೧೫. | ಷಹಜಾನು ಭಾನು | ಸದಸ್ಯರು | ೨೦೧೦-೨೦೧೫ | ಜಿ.ಆರ್.ಹಳ್ಳಿ |

## ೨೦೧೫ ಗುಡ್ಡದರಂಗವ್ವನಹಳ್ಳಿ ಗ್ರಾಮ ಪಂಚಾಯಿತಿ ಸದಸ್ಯರ ಹೆಸರು

| ಕ್ರ.ಸಂ. | ಗ್ರಾಮ ಪಚಾಯಿತಿ ಕ್ಷೇತ್ರದ ಹೆಸರು | ಸದಸ್ಯರು ಮತ್ತು ಪ್ರತಿನಿಧಿಗಳ ಹೆಸರು | ಹುದ್ದೆ |
|---|---|---|---|
| ೧. | ಜಿ.ಆರ್. ಹಳ್ಳಿ-೧ | ಓಬಳೇಶ್ವರ ಬಿನ್ ರೆಡ್ಡಿಹಳ್ಳಿ ಮಲ್ಲಪ್ಪ | ಸದಸ್ಯರು |
| ೨. | ಜಿ.ಆರ್. ಹಳ್ಳಿ | ಮಾಳಮ್ಮ ಕೋಂ ಮಲ್ಲೇಶಪ್ಪ | ಸದಸ್ಯರು |
| ೩. | ಜಿ.ಆರ್. ಹಳ್ಳಿ | ಸ್ವಾಮಿ ಬಿನ್ ನಾರಾಯಣಪ್ಪ | ಸದಸ್ಯರು |
| ೪. | ಜಿ.ಆರ್. ಹಳ್ಳಿ | ಡಿ.ಆರ್. ಕೃಷ್ಣಮೂರ್ತಿ ಬಿನ್ ರುದ್ರಪ್ಪ | ಸದಸ್ಯರು |
| ೫. | ಜಿ.ಆರ್. ಹಳ್ಳಿ | ಗೀತಮ್ಮ ಕೋಂ ನಿಂಗಪ್ಪ | ಉಪಾಧ್ಯಕ್ಷರು |
| ೬. | ಜಿ.ಆರ್. ಹಳ್ಳಿ | ಹನುಮಂತರಾಯಪ್ಪ ನರಸಿಂಹಪ್ಪ | ಸದಸ್ಯರು |
| ೭. | ಜಿ.ಆರ್. ಹಳ್ಳಿ | ಕೆ.ಜಿ. ತಿಪ್ಪೇಸ್ವಾಮಿ ಬಿನ್ ಗೋವಿಂದಪ್ಪ | ಸದಸ್ಯರು |
| ೮. | ಜಿ.ಆರ್. ಹಳ್ಳಿ | ಬಿ.ವಿ. ಸವಿತ ಕೋಂ ಕೆ.ವಿ. ಧನಂಜಯರೆಡ್ಡಿ | ಅಧ್ಯಕ್ಷರು |
| ೯. | ಜಿ.ಆರ್. ಹಳ್ಳಿ | ಪುಷ್ಪ ರಾಜಶೇಖರಪ್ಪ ಕೋಂ ರಾಜಶೇಖರಪ್ಪ | ಸದಸ್ಯರು |
| ೧೦. | ಆಯಿತೋಳು | ನಾಗರಾಜ ಬಿನ್ ಚಂದ್ರಪ್ಪ | ಸದಸ್ಯರು |
| ೧೧. | ಆಯಿತೋಳು | ಜಿ.ಸಿ. ಕೋಮಲ ಕೋಂ ಕ್ಯಾತಪ್ಪ | ಸದಸ್ಯರು |
| ೧೨. | ಆಯಿತೋಳು | ನೀಲಬಾಯಿ ಕೋಂ ರಾಮಸ್ವಾಮಿ ನಾಯ್ಕ | ಸದಸ್ಯರು |
| ೧೩. | ಆಯಿತೋಳು | ರಂಗನಾಥ ಬಿನ್ ಕೆ.ಸಿ. ನಾಗೇಂದ್ರಪ್ಪ | ಸದಸ್ಯರು |
| ೧೪. | ತಮಟಕಲ್ಲು | ವನಜಾಕ್ಷಮ್ಮ ಕೋಂ ಸಣ್ಣ ಹನುಮಂತಪ್ಪ | ಸದಸ್ಯರು |
| ೧೫. | ತಮಟಕಲ್ಲು | ಟಿ.ಎ. ರಾಮಕೃಷ್ಣ ಬಿನ್ ಆದೆಪ್ಪ | ಸದಸ್ಯರು |
| ೧೬. | ತಮಟಕಲ್ಲು | ಬಿ.ಟಿ. ಸಾಕಮ್ಮ ಕೋ ಬಿ.ಎನ್. ಮಾರುತಿ | ಸದಸ್ಯರು |
| ೧೭. | ತಮಟಕಲ್ಲು | ಟಿ.ಬಿ. ರೂಪ ಕೋಂ ಟಿ.ಎನ್. ಬಸವರಾಜ | ಸದಸ್ಯರು |

## ೨೦೦೫-೨೦೦೯ ಗುಡ್ಡದರಂಗವ್ವನಹಳ್ಳಿ ಗ್ರಾಮಪಂಚಾಯಿತಿ ಸದಸ್ಯರು ಪ್ರತಿನಿಗಳು

| ಕ್ರ.ಸಂ. | ಹೆಸರು | ಹುದ್ದೆ | ಅವಧಿ | ಗ್ರಾಮ |
|---|---|---|---|---|
| ೧. | ಶ್ರೀ ಎಸ್.ಆರ್. ಬಸವರಾಜ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೨. | ಶ್ರೀಮತಿ ಶೈಲಜಾ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೩. | ಶ್ರೀ ಲಕ್ಷ್ಮಣಪ್ಪ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೪. | ಶ್ರೀ ಕೆ. ಅಬ್ದುಲ್ ರೆಹಮಾನ್ (ಎರಡನೇ ಅವಧಿಗೆ ಅಧ್ಯಕ್ಷರು) | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೫. | ಶ್ರೀಮತಿ ಬಸಕ್ಕ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೬. | ಶ್ರೀಮತಿ ದೊಡ್ಡಮ್ಮ | ಉಪಾಧ್ಯಕ್ಷರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೭. | ಶ್ರೀ ರುದ್ರಪ್ಪ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೮. | ಶ್ರೀಮತಿ ಚೆನ್ನಮ್ಮ | ಸದಸ್ಯರು | ೨೦೦೫-೨೦೦೯ | ಗುಡ್ಡದರಂಗವ್ವನಹಳ್ಳಿ |
| ೯. | ಶ್ರೀಮತಿ ಚಂದ್ರಮ್ಮ | ಅಧ್ಯಕ್ಷರು | ೨೦೦೫-೨೦೦೯ | ಆಯಿತೋಳ |
| ೧೦. | ಶ್ರೀ ಪಿ. ಮೂರ್ತಿ | ಸದಸ್ಯರು | ೨೦೦೫-೨೦೦೯ | ಆಯಿತೋಳ |
| ೧೧. | ಶ್ರೀ ಎನ್. ಕರಿಯಪ್ಪ | ಸದಸ್ಯರು | ೨೦೦೫-೨೦೦೯ | ಆಯಿತೋಳ |
| ೧೨. | ಶ್ರೀಮತಿ ರಾಮಕ್ಕ | ಸದಸ್ಯರು | ೨೦೦೫-೨೦೦೯ | ಆಯಿತೋಳ |
| ೧೩. | ಶ್ರೀ ಬಿ. ಹನುಮಂತಪ್ಪ | ಸದಸ್ಯರು | ೨೦೦೫-೨೦೦೯ | ತಮಟಕಲ್ಲು |
| ೧೪. | ಶ್ರೀ ಸಣ್ಣ ಹನುಮಂತಪ್ಪ | ಸದಸ್ಯರು | ೨೦೦೫-೨೦೦೯ | ತಮಟಕಲ್ಲು |
| ೧೫. | ಶ್ರೀಮತಿ ಕಲಾವತಿ (ಎರಡನೇ ಅವಧಿಉಪಾಧ್ಯಕ್ಷರು) | ಸದಸ್ಯರು | ೨೦೦೫-೨೦೦೯ | ತಮಟಕಲ್ಲು |
| ೧೬. | ಶ್ರೀ ಜಿ. ಕರಿಬಸಣ್ಣ | ಸದಸ್ಯರು | ೨೦೦೫-೨೦೦೯ | ತಮಟಕಲ್ಲು |

ಐದು ವರ್ಷ ಅಧಿಕಾರಾವಧಿಯಲ್ಲಿ ೨ ವರ್ಷ ಮತ್ತು ೬ ತಿಂಗಳಿಗೆ ಒಬ್ಬರು ಅಧ್ಯಕ್ಷರು ಮತ್ತು ಮತ್ತೆ ಎರಡುವರೆ ವರ್ಷಕ್ಕೆ ಮತ್ತೊಬ್ಬರು ಅಧ್ಯಕ್ಷರು ಹೀಗೆ ಅಧಿಕಾರವನ್ನು ಹಂಚಿಕೊಂಡಿರುತ್ತಾರೆ.

ಸಾಮಾನ್ಯವಾಗಿ ರಾಜಕೀಯ ಕ್ಷೇತ್ರದಲ್ಲಿ ಮುನ್ನುಗ್ಗುವ ಮಹಿಳೆಯರಲ್ಲಿ ಅದರಲ್ಲೂ ಮಧ್ಯಮ ಮತ್ತು ತಳವರ್ಗದ ಮಹಿಳೆಯರಲ್ಲಿ ಕಂಡುಬರುವ ಅಂಶವೆಂದರೆ ಮಧ್ಯವಯಸ್ಕ ಮಹಿಳೆಯರೇ ಹೆಚ್ಚಾಗಿ ರಾಜಕೀಯ ರಂಗಕ್ಕೆ ಪ್ರವೇಶ ಪಡೆಯುತ್ತಾರೆ. ಪ್ರಾಯಶಃ ಹರಯದ ಹೆಣ್ಣಿಗೆ ಕೌಟುಂಬಿಕ ಹಾಗೂ ಸಾಮಾಜಿಕವಾದ ಕೆಲವು ನಿರ್ಬಂಧಗಳು ಇರುತ್ತವೆ. ಮುಖ್ಯವಾಗಿ ಲೈಂಗಿಕ ಅಪವಿತ್ರತೆ ಎಲ್ಲಿ ಉಂಟಾಗುತ್ತಿದೆಯೋ ಎಂಬ ಭಯವೂ ಸಹ ಹರಯದ ಮಹಿಳೆಯರು ರಾಜಕೀಯ

ರಂಗಕ್ಕೆ ಬಾರದಂತೆ ತಡೆಯುವಲ್ಲಿ ಕಾರಣವಾಗಿರಬಹುದಾದ ಅಂಶಗಳಲ್ಲಿ ಒಂದು. ಯಾಕೆಂದರೆ ರಾಜಕೀಯ ರಂಗದಲ್ಲಿ ವಿಜೃಂಭಿಸುವ ಪುರುಷ ವರ್ಗದ ಕುರಿತು ಸಾಮಾಜಿಕವಾಗಿ ಒಳ್ಳೆಯ ಅಭಿಪ್ರಾಯ ಇರದೇ ಇರುವುದೇ ಇದಕ್ಕೆ ಕಾರಣವಿರಬಹುದು. ಹಾಗೂ ತಮ್ಮ ಮನೆಯ ಹೆಣ್ಣು ಮತ್ತೊಬ್ಬನ ಸ್ವತ್ತಾದಿತೆಂಬ ಪುರುಷಶಾಹಿ ಸ್ವಾರ್ಥವೂ ಇದಕ್ಕೆ ಕಾರಣವಾಗಿರಬಹುದು. ಆದ್ದರಿಂದ ಯೌವ್ವನ ಕಳೆದು ಮಧ್ಯ ವಯಸ್ಸಿಗೆ ಬಂದ ಹೆಣ್ಣನ್ನು ತಮ್ಮ ಕಣ್ಗಾವಲಿನ ನೆರಳಿನಲ್ಲಿಯೇ ರಾಜಕೀಯ ರಂಗಕ್ಕೆ ಪ್ರವೇಶಿಸುವಂತೆ ಕುಟುಂಬದ ಪುರುಷರು ಆಸಕ್ತಿ ತೋರಿಸುವುದನ್ನು ಕಾಣಬಹುದು. ಮಹಿಳೆಯರನ್ನು ಚುನಾವಣೆ ರಂಗಕ್ಕೆ ನೋಡುವುದಲ್ಲದೆ ಅವಳ ಗೆಲುವಿನ ಅಥವಾ ಸದಸ್ಯತ್ವದ ಲಾಭವನ್ನು ಸಹ ಪುರುಷರೇ ಪಡೆಯುತ್ತಾರೆ.

ಮಹಿಳೆಯರಿಗೆ ತಮ್ಮ ಅಧಿಕಾರದ ಮಿತಿಗಳು ಯಾವುವು, ತಮ್ಮ ಕರ್ತವ್ಯಗಳೇನು, ತಮ್ಮ ಕಾರ್ಯವ್ಯಾಪ್ತಿ ಎಷ್ಟು ಎಂಬುದರ ಬಗ್ಗೆ ಸರಿಯಾದ ತಿಳುವಳಿಕೆ ಇರದೇ ಇರುವುದರಿಂದ ಮಹಿಳೆಗೆ ಸ್ವಂತ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಯಾರೇ ಒಬ್ಬ ಚುನಾಯಿತ ಸದಸ್ಯ ಮೊಟ್ಟ ಮೊದಲಿಗೆ ಅರಿಯಬೇಕಾದ ಮುಖ್ಯ ವಿಚಾರವೆಂದರೆ ಚುನಾಯಿತ ಸದಸ್ಯನಾಗಿ ತನ್ನ ಜವಾಬ್ದಾರಿಗಳೇನು ಎಂಬುದನ್ನು ಅರಿಯಬೇಕಾಗಿರುವುದು. ಅಕಸ್ಮಾತ್ ಚುನಾಯಿತ ಸದಸ್ಯ ತನ್ನ ಜವಾಬ್ದಾರಿಯನ್ನು ಅರಿಯದೇ ಹೋದರೆ ಅವನ ಕಾಲಾವಧಿಯ ರಾಜಕೀಯ ಜೀವನದ ಪಾಲ್ಗೊಳ್ಳುವಿಕೆಯೇ ನಿರರ್ಥಕವಾಗಿ ಹೋಗಿ ಬಿಡುತ್ತದೆ. ಯಾರದೋ ಒತ್ತಾಯಕ್ಕೆ, ಒತ್ತಡಕ್ಕೆ ಒಳಗಾಗಿ ಚುನಾವಣೆಯಲ್ಲಿ ಸ್ಪರ್ಧಿಸುತ್ತಾರೆ. ಸ್ಪರ್ಧಿಸಿ ಚುನಾಯಿತರಾದ ತರುವಾಯ ತಮ್ಮ ಜವಾಬ್ದಾರಿಗಳನ್ನು ಅರಿಯದೆ ಪರತಂತ್ರರಾಗಿ ಬಿಡುತ್ತಾರೆ. ಯಾಕೆಂದರೆ ಅವರಿಗೆ ತನ್ನ ಕರ್ತವ್ಯಗಳ ಅರಿವೇ ಇರುವುದಿಲ್ಲ. ಈ ಕಾರಣಕ್ಕಾಗಿಯೇ ಸರ್ಕಾರವು ಪ್ರತಿ ಪಂಚಾಯತ್ ರಾಜ್ ಸದಸ್ಯರಿಗೆ ಚುನಾಯಿತಗೊಂಡ ನಂತರ ತರಬೇತಿಯನ್ನು ಕೊಡುತ್ತಾರೆ. ಈ ತರಬೇತಿ ನೀಡುವುದು ನಿರರ್ಥಕವೆನಿಸುತ್ತದೆ. ಏಕೆಂದರೆ ಕಾಟಾಚಾರಕ್ಕೆ ತರಬೇತಿಗೆ ಹಾಜರಾಗುವ ಬಹುತೇಕ ಸದಸ್ಯರು ತರಬೇತಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದಿಲ್ಲ. ನೆಪಕ್ಕೆ ತರಬೇತಿಗೆ ಹಾಜರಾಗಿ ನಂತರ ತಮ್ಮ ಕೆಲಸಗಳಿಗೆ ಹೊರಟು ಹೋಗುತ್ತಾರೆ. ಹಾಗಾಗಿ ಏನು ಕಲಿಯಬೇಕೋ ಅದನ್ನು ಕಲಿಯಲು ಸದಸ್ಯರಿಗೆ ಸಾಧ್ಯವಾಗುವುದಿಲ್ಲ. ಮೀಸಲಾತಿ ಸಿಗುತ್ತದೆ ಎನ್ನುವ ಒಂದು ಕಾರಣಕ್ಕೆ ಅಧಿಕಾರ ಗ್ರಹಣ ಮಾಡಿಕೊಳ್ಳುತ್ತಿರುವ ಮಹಿಳೆಯರು ಗ್ರಾಮೀಣ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರಿಯವಾಗಿ ಮತ್ತು ಯಶಸ್ವಿಯಾಗಿ ಪಾಲ್ಗೊಳ್ಳಲು ಸಾಧ್ಯವಾಗುತ್ತಿಲ್ಲ. ನಾಮಮಾತ್ರಕ್ಕೆ ಪಂಚಾಯಿತಿ ಸದಸ್ಯೆ, ಅಧ್ಯಕ್ಷ, ಉಪಾಧ್ಯಕ್ಷೆಗಳಂತಹ ಸ್ಥಾನಗಳಲ್ಲಿ ಮುಂದುವರೆಯುತ್ತಾರೆ. ಮಹಿಳೆಯರು ನಿರಂತರವಾಗಿ ಕುಟುಂಬದಿಂದ ಹಿಡಿದು ಇಡೀ ಸಮಾಜದಲ್ಲಿಯೇ ಹತ್ತು ಹಲವು ಶೋಷಣೆ, ದೌರ್ಜನ್ಯ, ದಬ್ಬಾಳಿಕೆಗಳಿಂದ ಜರ್ಜಿತವಾಗಿದ್ದಾಳೆ. ಸಾಮಾಜಿಕ ಜೀವನದಲ್ಲಿ ಅತ್ಯಂತ ತಳಮಟ್ಟದಲ್ಲಿರುವ ಮಹಿಳೆಯರು ಕೀಳರಿಮೆಯಿಂದಲೇ ಅಧಿಕಾರವನ್ನು ಧೈರ್ಯವಾಗಿ ಚಲಾಯಿಸಲು ಸಾಧ್ಯವಾಗುತ್ತಿಲ್ಲ.

ಒಟ್ಟಾರೆ ಹೇಳುವುದಾದರೆ ಮಹಿಳೆಯರಿಗೆ ರಾಜಕೀಯ ಸ್ಥಾನ ದೊರೆತಿದೆಯಾದರೂ ಅವರ ಬದಲಿಗೆ ಗ್ರಾಮದ ಹಿರಿಯರು, ಮೇಲ್ಜಾತಿ ಮುಖಂಡರು ತಮ್ಮ ಕುಟುಂಬದ ಪುರುಷ ವರ್ಗಗಳ ಅಧಿಕಾರದ ಮುಖ್ಯ ಸೂತ್ರಧಾರಿಗಳಾಗಿ ತಮ್ಮನ್ನು ಕೇವಲ ಪಗಡೆಗಳಂತೆ ಚಲಾಯಿಸುತ್ತಾರೆ. ಮಹಿಳೆ ಸ್ವ-ಇಚ್ಛೆಯಿಂದ ಯಾವುದೇ ಕೆಲಸವನ್ನು ಮಾಡಬೇಕಾದರೂ ಅವಳನ್ನು ಅಧಿಕಾರಕ್ಕೆ ತಂದವರು ಅವಳನ್ನು ನಿರಂತರವಾಗಿ ನಿಯಂತ್ರಿಸುತ್ತಾರೆ.

ಮಹಿಳೆ ರಾಜಕೀಯ ಸಹಭಾಗಿತ್ವದಲ್ಲಿ ಕಂಡುಬಂದರು ಅದು ಸರಕಾರಿ ಅಂಕಿ ಅಂಶಗಳಿಗೆ ಮತ್ತು ಮೀಸಲಾತಿ ಇದೆ ಎಂಬ ಕಾರಣಕ್ಕಾಗಿ. ಆದರೆ ವಾಸ್ತವದಲ್ಲಿ ಅವಳಿಗೆ ನೀಡಿರುವ ಅಧಿಕಾರ ಕೇವಲ ತೋರಿಕೆಯದ್ದೆ ಆಗಿರುತ್ತದೆ. ಏಕೆಂದರೆ ಮಹಿಳೆ ಇಂದಿಗೂ ಔಪಚಾರಿಕವಾಗಿ ರಾಜಕೀಯ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳದೆ ತನ್ನಲ್ಲಿರುವ ಕರ್ತವ್ಯ ಶಕ್ತಿಯನ್ನು ಹೊರಹಾಕದೆ ಕುಳಿತಿದ್ದಕ್ಕೆ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಸುಹೊಕ್ಕಾಗಿರುವ ಕೆಲವು ಸಾಮಾನ್ಯೀಕರಿಸಿದ ಸಂಗತಿಗಳು ನಿರಂತರವಾಗಿ ಅವಳನ್ನು ನಿಯಂತ್ರಿಸುತ್ತಲೇ ಬಂದಿವೆ. ಆದ್ದರಿಂದಲೇ ಮಹಿಳೆ ರಾಜಕೀಯದಲ್ಲಿ ಕೇವಲ ಅನೌಪಚಾರಿಕವಾಗಿ ಮಾತ್ರವೇ ಕಾಣಿಸುತ್ತಿದ್ದಾಳೆ.

ಸ್ವಂತ ಕುಟುಂಬವೇ ಒಂದು ಸ್ವಯಂ ಪೂರ್ಣವಾದ ವ್ಯವಸ್ಥೆಯಂತಿದ್ದು ಒಬ್ಬ ಯಜಮಾನನ ಅಧೀನದಲ್ಲಿ ಉಳಿದ ಎಲ್ಲಾ ಸ್ತ್ರೀ ಪುರುಷರು ಇರಬೇಕಾಗುತ್ತದೆ. ಇದು ಕೇಂದ್ರಿಕೃತ ವ್ಯವಸ್ಥೆಯಾಗಿದ್ದರೂ ಅದರಲ್ಲಿರುವ ಅಧೀನತೆಯ ಪ್ರಶ್ನೆ ಸ್ವರೂಪ ಸ್ತ್ರೀಯರ ನಿರಂತರ ಅಧೀನತೆ ಹೆಣ್ಣು ಕುಟುಂಬ, ಸಮಾಜ, ರಾಜಕರಣ, ರಾಜಕೀಯಕ್ಕೆ ಸಂಬಂಧಿಸಿದ ಯಾವುದೇ ಅಧಿಕಾರ ವಿಭಾಗವಿರಲಿ ಅವಳ ಪಾತ್ರ ಕೇವಲ ಸಾಂಕೇತಿಕವಾಗಿರುತ್ತದೆ. ವಾಸ್ತವವಾಗಿ ಅದನ್ನು ನಿರ್ವಹಿಸುವವರು ಪುರುಷರೇ ಆಗಿರುತ್ತಾರೆ. ಅವಳೆಷ್ಟೆ ಸುರಕ್ಷಿತಳಾಗಿರಲಿ ಅವಳ ಹಿಂದೆ ಪುರುಷನ ಹಿಡಿತ ಇದ್ದೇ ಇರುತ್ತದೆ. ಹೀಗೆ ಮಹಿಳೆಯನ್ನು ಅವಳ ಜೀವಮಾನದುದ್ದಕ್ಕೂ ಒಬ್ಬರ ನಂತರ ಒಬ್ಬರಂತೆ ಹಲವು ಪುರುಷರ ನಿರಂತರ ಹಿಡಿತ ಇದ್ದೇ ಇರುತ್ತದೆ

**೩.೩. ಶೈಕ್ಷಣಿಕ ಸ್ಥಿತಿಗತಿ :**

ಸಮಾಜದಲ್ಲಿ ಮನುಷ್ಯ ತನ್ನ ಎಲ್ಲ ಹಕ್ಕು-ಬಾಧ್ಯತೆಗಳನ್ನು, ಕರ್ತವ್ಯಗಳನ್ನು ತಿಳಿದುಕೊಳ್ಳಬೇಕಾದರೆ ಮತ್ತು ಸಮಾಜದಲ್ಲಿ ಒಂದು ಸ್ಥಾನಮಾನ ಗಳಿಸಿಕೊಳ್ಳಬೇಕೆಂದರೆ ಅದು ಶಿಕ್ಷಣದಿಂದ ಮಾತ್ರ ಸಾಧ್ಯ. ಪ್ರಸ್ತುತ ದಿನದಲ್ಲಿ ನಾಲ್ಕು ಅಕ್ಷರ ಕಲಿತವರಿಗೆ ಬೆಲೆ. ಒಂದು ಕಾಲದಲ್ಲಿ ಶಿಕ್ಷಣವೆಂಬುದು ಕೇವಲ ಮೇಲ್ವರ್ಗದವರ ಸೊತ್ತಾಗಿತ್ತು. ಆದರೆ ಪ್ರಸ್ತುತ ದಿನಗಳಲ್ಲಿ ಬ್ರಿಟೀಷರು ಇಡೀ ಭಾರತವನ್ನು ತಮ್ಮ ಕೈವಶ ಮಾಡಿಕೊಂಡ ಮೇಲೆ ಕ್ರಿ.ಶ. ೧೮೩೨ರಲ್ಲಿ ಮೆಕಾಲೆ ವರದಿಯನ್ನು ಆಧರಿಸಿ ಸಾರ್ವತ್ರಿಕ ಶಿಕ್ಷಣ ಪದ್ಧತಿಯನ್ನು ಭಾರತದಾದ್ಯಂತ ಜಾರಿಗೊಳಿಸಿದರು. ಈ ಸಾರ್ವತ್ರಿಕ ಶಿಕ್ಷಣದ ಜೊತೆಯಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸುವುದರೊಂದಿಗೆ ಪ್ರತಿಯೊಬ್ಬರು ವಿದ್ಯೆ ಕಲಿಯಲು ನಮ್ಮ ಸರ್ಕಾರ ಅನುಕೂಲ ಮಾಡಿಕೊಟ್ಟಿದೆ.

ಈಚೆಗೆ ಪಾಶ್ಚಾತ್ಯ ಆಗಮನದಿಂದ ಶಿಕ್ಷಣ ಕ್ಷೇತ್ರದಲ್ಲಿ ಒಂದು ಹೊಸ ಗಾಳಿ ಬೀಸತೊಡಗಿತು. ಅದರ ಪರಿಣಾಮವಾಗಿ ವಿದ್ಯಾಭ್ಯಾಸದಲ್ಲಿ ಒಂದು ಹೊಸ ಯುಗವೇ ಆರಂಭವಾಯಿತು. ಇತ್ತೀಚಿನವರೆಗೂ ಅಂದರೆ ೧೮-೧೯ನೇ ಶತಮಾನದವರೆಗೂ ಇದ್ದ ಅಗ್ರಹಾರಗಳು, ಘಟಿಕಾಸ್ಥಾನಗಳು ಮರೆಯಾಗಿ ಆಂಗ್ಲ ವಿದ್ಯಾಭ್ಯಾಸದ ಪ್ರಭಾವಕ್ಕೆ ಭಾರತದ ಇತರ ಭಾಗಗಳಂತೆಯೇ ಕರ್ನಾಟಕವೂ ಒಂದು. ಪಾಶ್ಚಾತ್ಯರ ಪ್ರಭಾವದಿಂದಾಗಿ ನಗರಗಳಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿ ಅಂಗನವಾಡಿಯಿಂದ ಹಿಡಿದು ಪದವಿ ಶಿಕ್ಷಣದವರೆಗೂ ಶಿಕ್ಷಣ ಕೇಂದ್ರಗಳು ತಲೆ ಎತ್ತಿದ ವು. ಹಿಂದೆಯೆಲ್ಲ ಶಿಕ್ಷಣ ಕಲಿಯುವವರ ಸಂಖ್ಯೆಯು ಬೆರಳೆಣಿಕೆಯಷ್ಟು ಇದ್ದು ಶಿಕ್ಷಣ ಕೇಂದ್ರಗಳಾದ ಅಂಗನವಾಡಿ ಕೇಂದ್ರ, ಪ್ರಾಥಮಿಕ ಶಾಲೆ, ಪ್ರೌಢ ಶಾಲೆಗಳು, ಪದವಿಪೂರ್ವ ಕಾಲೇಜುಗಳು, ಪದವಿ ಕಾಲೇಜುಗಳು ಬೆರಳೆಣಿಕೆಯಷ್ಟು ಕಂಡು ಬರುತ್ತಿದ್ದವು. ಆದರೆ ಇಂದು ಶೈಕ್ಷಣಿಕ ಪ್ರಗತಿ ಹೇಗಿದೆ ಎಂದರೆ ನಾಯಿ ಕೊಡೆಗಳ ಹಾಗೆ ವಿದ್ಯಾಕೇಂದ್ರಗಳು ತಲೆ ಎತ್ತಿರುವುದು ಕಂಡು ಬರುತ್ತಿದೆ. ಶಿಕ್ಷಣದ ಪ್ರಗತಿ ನಾಗಾಲೋಟದಲ್ಲಿ ಸಾಗಿದರೂ ಹಳ್ಳಿಗಳು ನಗರವನ್ನು ಅವಲಂಬಿಸುವ ಸ್ಥಿತಿ ಆಗಿದೆ. ಇದಕ್ಕೆ ತಮಟಕಲ್ಲು ಗ್ರಾಮವೂ ಹೊರತಾಗಿಲ್ಲ. ತಮಟಕಲ್ಲು ಗ್ರಾಮ ಅಷ್ಟೊಂದು ಶೈಕ್ಷಣಿಕ ಪ್ರಗತಿ ಸಾಧಿಸಿಲ್ಲ. ಅಂದರೆ ಎರಡು ಅಂಗನವಾಡಿ ಕೇಂದ್ರಗಳು. ಒಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಒಂದು ಖಾಸಗಿ ಪ್ರೌಢ ಶಾಲೆ ಇದೆ. ಪದವಿಪೂರ್ವ ಶಿಕ್ಷಣಕ್ಕಾಗಿ ಉನ್ನತ ಶಿಕ್ಷಣಕ್ಕಾಗಿ ತಮಟಕಲ್ಲು ಸಮೀಪದ ಚಿತ್ರದುರ್ಗ ಜಿಲ್ಲೆಗೆ ಹೋಗಬೇಕು.

ಪ್ರಸ್ತುತ ದಿನದಲ್ಲಿ ಜನರು ಹಳ್ಳಿಯ ಸರ್ಕಾರಿ, ಶಾಲೆಗಳಲ್ಲಿ ಮಕ್ಕಳನ್ನು ಓದಿಸದೇ ಖಾಸಗಿ ಶಾಲೆಗಳಲ್ಲಿ ಸಾವಿರಾರು ರೂಪಾಯಿಗಳನ್ನು ಕಟ್ಟುತ್ತಾರೆ. ಬಡಜನರು ಇಷ್ಟೊಂದು ಶುಲ್ಕವನ್ನು ತರುವುದಾದರೂ ಎಲ್ಲಿ? ಸರ್ಕಾರ ಶಾಲಾ ಶಿಕ್ಷಣವನ್ನು ಸಾರ್ವತ್ರಿಕವಾಗಿ ಉಚಿತ ಮತ್ತು ಕಡ್ಡಾಯವಾಗಿ ೦೬-೧೪ರ ನಡುವಣ ವಯೋಮಾನದ ಎಲ್ಲಾ ಮಕ್ಕಳಿಗೂ ನೀಡಬೇಕು ಎನ್ನುವ ಬೇಡಿಕೆ ನಮ್ಮ ಸಂವಿಧಾನ ರಚನೆಯ ಪೂರ್ವದ ಆಶಯವಾಗಿದ್ದು, ಇದನ್ನು ಸರ್ಕಾರ ಆರ್.ಟಿ.ಇ. ೨೦೦೯ ಅಂದರೆ ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯಿದೆ ೨೦೦೯ನ್ನು ಜಾರಿ ಮಾಡಿದೆ.

ಹಳ್ಳಿಯ ಜನರು ಸಹ ತಮ್ಮ ಮಕ್ಕಳಿಗೆ ಇಂಗ್ಲೀಷ್ ಕಲಿಸುವ ವ್ಯಾಮೋಹದಿಂದಾಗಿ ನಗರಗಳ ಕಾನ್ವೆಂಟಗಳಿಗೆ ಮಕ್ಕಳನ್ನು ಕಳಿಸುವ ಪರಿಣಾಮ ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಾ ಗ್ರಾಮೀಣ ಪ್ರದೇಶಗಳ ಶಾಲೆಗಳನ್ನು ಮುಚ್ಚುವ ಪರಿಸ್ಥಿತಿಗೆ ಬಂದಿವೆ. ದಿನ ದಿನವೂ ಹೆಚ್ಚುತ್ತಿರುವ ಜನಸಂಖ್ಯೆಗೆ ಶಾಲೆಗಳೇ ಸಾಲದಾಗಿವೆ. ಸರ್ಕಾರಿ ಶಾಲೆಗಳಲ್ಲಿ ೧೦ ಜನಕ್ಕಿಂತ ಕಡಿಮೆ ಇರುವ ಕಾರಣದಿಂದ ಶಾಲೆಗಳನ್ನು ಮುಚ್ಚಲಾಗುತ್ತಿದೆ. ಸರ್ಕಾರ ಮಕ್ಕಳಿಗೆ ಶಿಕ್ಷಣ ಕಲಿಸುವ ಉದ್ದೇಶದಿಂದ ಹಲವಾರು ಯೋಜನೆಗಳನ್ನು ಜಾರಿಗೆ ತರುವ ಮೂಲಕ ಮಕ್ಕಳ ಶಿಕ್ಷಣದತ್ತ ಸಾಗುವಂತೆ ಮಾಡಲು, ಮಧ್ಯಾಹ್ನದ ಬಿಸಿಯೂಟ,

ಶೂಭಾಗ್ಯ, ಸೈಕಲ್ ವಿತರಣೆ, ಬ್ಯಾಗ್, ಬಟ್ಟೆ ಇಷ್ಟೆಲ್ಲ ಉಚಿತವಾಗಿ ನೀಡಿದರು, ಪೋಷಕರು ಕೇವಲ ಪ್ರೌಢ ಶಾಲೆಯವರೆಗೆ ಮಾತ್ರ ಹೆಣ್ಣು ಮಕ್ಕಳನ್ನು ಓದಿಸುವುದು. ನಂತರ ಕಾಲೇಜಿಗೆ ಪಕ್ಕದ ಊರಿಗೆ ಕಳುಹಿಸಬೇಕೆಂದು ಅವರ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುವುದನ್ನು ನೋಡಬಹುದು. ಕಾರಣ ಪ್ರತಿನಿತ್ಯ ಟಿ.ವಿ. ಚಾನಲ್‌ನಲ್ಲಿ ನೋಡುವ ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯ, ಅತ್ಯಾಚಾರ ನೋಡಿ ನಮ್ಮ ಮಕ್ಕಳು ಹೊರಗಡೆ ವಿದ್ಯಾಭ್ಯಾಸಕ್ಕೆ ಹೋದಾಗ ಇದೇ ರೀತಿ ಆದರೆ ನಮ್ಮ ಮನೆತನದ ಗೌರವ ಏನಾಗಬೇಕು ಎನ್ನುವ ಉದ್ದೇಶದಿಂದ ಕೆಲವರು ತಮ್ಮ ಮನೆಯ ಹೆಣ್ಣು ಮಕ್ಕಳ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುತ್ತಾರೆ. ಮತ್ತೆ ಕೆಲವರು ಧೈರ್ಯ ಮಾಡಿ ಮುಂದಿನ ವಿದ್ಯಾಭ್ಯಾಸಕ್ಕೆ ಕಳುಹಿಸುವುದನ್ನು ನೋಡಬಹುದು.

ಪ್ರಸ್ತುತ ತಮಟಕಲ್ಲು ಪ್ರದೇಶದಲ್ಲಿ ಸರ್ಕಾರಿ ಪಾಠಶಾಲೆಯಲ್ಲಿ ಪ್ರತಿವರ್ಷ ಇಲ್ಲಿನ ಮಕ್ಕಳ ದಾಖಲಾತಿ ಮತ್ತು ಹಾಜರಾತಿಯನ್ನು ನೋಡುವುದಾದರೆ, ಚಿಕ್ಕಮಕ್ಕಳಿಗೆ ಶಿಕ್ಷಣ ನೀಡಲು ಗ್ರಾಮದಲ್ಲಿ ಎರಡು ಅಂಗನವಾಡಿ ಕೇಂದ್ರಗಳಿವೆ. ಇವು ಗ್ರಾಮದ ಚಿಕ್ಕಮಕ್ಕಳ ಶೈಕ್ಷಣಿಕ ಅಗತ್ಯತೆಯನ್ನು ಪೂರೈಸುತ್ತಿವೆ. ಜೊತೆಗೆ ಸರ್ಕಾರ ಪೌಷ್ಠಿಕ ಆಹಾರ, ಮೊಳಕೆ ಕಾಳು ಇತರ ಆಹಾರವನ್ನು ನೀಡುತ್ತಿದೆ.

ಶಿಕ್ಷಣವೆಂದರೆ ಕಲಿಕೆ. ಜ್ಞಾನವನ್ನು ಅರ್ಜಿಸಿಕೊಳ್ಳುವುದು,ತಿಳಿಯುವುದು, ಓದುವುದು, ಬರೆಯುವುದು ಇತ್ಯಾದಿ ಅರ್ಥಗಳನ್ನು ಕೊಡುತ್ತದೆ. ವ್ಯಕ್ತಿಯೋರ್ವ ಕುಟುಂಬದೊಂದಿಗೆ ಸಮಾಜದೊಂದಿಗೆ ಹೊಂದಿಕೊಂಡು ಜೀವಿಸುತ್ತಾ ತನ್ನ ಶ್ರೇಯೋಭಿವೃದ್ಧಿಗೆ ಬೇಕಾಗುವ ಸಾಮರ್ಥ್ಯ, ಕೌಶಲ್ಯ, ಮನೋಭಾವ ಮತ್ತು ವರ್ತನೆಗಳನ್ನು ರೂಢಿಸಿಕೊಳ್ಳಲು ನೆರವಾಗುವ ಪ್ರಕ್ರಿಯೆ ಶಿಕ್ಷಣವಾಗಿದೆ.

ಒಬ್ಬ ವ್ಯಕ್ತಿಯ ಪರಿಪೂರ್ಣ ವಿಕಾಸಕ್ಕೆ ಶಿಕ್ಷಣವು ಬಹುಮುಖ್ಯ ಸಾಧನವಾಗಿದೆ. ಶಿಕ್ಷಣ ಪಡೆಯುವುದರ ಮೂಲಕ ವೈಯಕ್ತಿಕ ಮತ್ತು ಸಾಮಾಜಿಕ ಗುರಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ನಾಗರಿಕ ಹಕ್ಕು ಮತ್ತು ಕರ್ತವ್ಯದ ಬಗ್ಗೆ ತಿಳಿಯಲು ಇದು ಪೂರಕವಾಗಿದೆ. ಸದೃಢ ಮತ್ತು ಉತ್ತಮ ಸಮಾಜದ ನಿರ್ಮಾಣಕ್ಕೆ ಶಿಕ್ಷಣವು ಅವಶ್ಯವಾಗಿದೆ. ವ್ಯಕ್ತಿತ್ವದ ಬೆಳವಣಿಗೆಯ ಜೊತೆಗೆ ಉತ್ತಮಶೀಲ ಸಂವರ್ಧನೆಯ ಬೆಳವಣಿಗೆಯಲ್ಲಿ ಸಮಾಜದ ಮತ್ತು ರಾಷ್ಟ್ರದ ಅಭಿವೃದ್ಧಿ ಕಾರ್ಯದಲ್ಲಿ ಶಿಕ್ಷಣವೊಂದು ಸಾಧನವಾಗಿದೆ.

ಭಾರತ ದೇಶ ಬಡ ಜನರಿಂದ ಕೂಡಿದ ಶ್ರೀಮಂತ ದೇಶ. ಹಳ್ಳಿಗಳ ನಾಡು. ಕೃಷಿ ಪ್ರಧಾನವಾದ ದೇಶ. ೧೦೦ಕ್ಕೆ ಶೇ. ೭೦ರಷ್ಟು ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ ಹಾಗೂ ಬಹುಸಂಖ್ಯಾತ ಜನರು ಅನಕ್ಷರಸ್ಥರಾಗಿದ್ದು, ಅದರಲ್ಲಿ ಗ್ರಾಮೀಣ ಮಹಿಳೆಯರ ಶಿಕ್ಷಣವನ್ನು ಗಮನಕ್ಕೆ ತೆಗೆದುಕೊಂಡಾಗ ತುಂಬಾ ಶೋಚನೀಯವಾದ ಸ್ಥಿತಿ ಕಂಡು ಬರುತ್ತದೆ.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆ ತನ್ನ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಂಡ ಸಾಮರ್ಥ್ಯಗಳೇನು? ಬಲಹೀನತೆಗಳೇನು? ಎಂದು ಅರಿತು ಪುರುಷನಿಗೆ ಸರಿಸಮನಾಗಿ ನಿಲ್ಲಲು ಶಿಕ್ಷಣದ ಅವಶ್ಯಕತೆಯಿದೆ. ಆದ್ದರಿಂದ ಗ್ರಾಮೀಣ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಸಾಕ್ಷರಾಗುವ ಅವಶ್ಯಕತೆಯಿದೆ.

"ತೃತೀಯ ಜಗತ್ತಿನ ದೇಶಗಳಲ್ಲಿ ಮಹಿಳಾ ಸಬಲೀಕರಣ ವಿಷಯದ ಬಗೆಗೆ ಚರ್ಚೆ ಪ್ರಾರಂಭವಾಗಿರುವುದು ಆಶಾದಾಯಕ ಬೆಳವಣಿಗೆಯಾಗಿದೆ. ಇದರ ಅನ್ವಯ ನೋಡಿದರೆ ಮಹಿಳೆ ಎಂದೂ ದುರ್ಬಲಳಲ್ಲ ಆಕೆ ಯಾವಾಗಲೂ ಸಬಲಳು ಸಾಮರ್ಥ್ಯವುಳ್ಳವಳೂ ಆಗಿದ್ದಾಳೆ. ಮಹಿಳೆಯೆಂದರೆ ಹೊಸ ಸಾಧ್ಯತೆಗಳ ಖಣಿ. ಆದರೆ ಚಾತುರ್ವರ್ಣ ವ್ಯವಸ್ಥೆ ಹಾಗೂ ಯಜಮಾನ ಸಂಸ್ಕೃತಿ ಶತಮಾನಗಳಿಂದ ಮಹಿಳೆಯನ್ನು ದುರ್ಬಲಗೊಳಿಸುತ್ತಲೇ ಬಂದಿವೆ. ಮಹಿಳೆ ದುರ್ಬಲಳು ಸದಾ ಸರ್ವಕಾಲಕ್ಕೂ ಇನ್ನೊಬ್ಬರ ಅಧೀನದಲ್ಲಿರಬೇಕಾದವಳು ಎಂದು ತಪ್ಪು ಪ್ರಚಾರ ಮಾಡುತ್ತಲೇ ಬಂದಿವೆ. ಮಹಿಳೆ ಕೇಡಿನ ಮೂಲ, ಆಕೆ ಭೋಗದ ವಸ್ತು ಎಂದು ಹಸಿಸುಳ್ಳುಗಳನ್ನು ಹೇಳಿ ನಂಬಿಸಿ ವಂಚನೆಗೆ ದೂಡುತ್ತಿದ್ದಾರೆ." (ವಿಜಯಶ್ರೀ ಸಬರದ (ಸಂ) ೨೦೦೫ ಪುಟ ೮೮).

ಆಧುನಿಕ ಕಾಲಘಟ್ಟವು ಮಹಿಳೆಯ ಸರ್ವತೋಮುಖ ಅಭಿವೃದ್ಧಿಯ ಕಾರಣಕ್ಕಾಗಿ ಬಹು ಮಹತ್ವದ ಕಾಲಘಟ್ಟವಾಗಿದೆ. ಮಹಿಳಾ ಶಿಕ್ಷಣ ಹಾಗೂ ಜಾಗೃತಿಯ ಮೂಲಕ ಈ ದಿನ ಮಾನದಲ್ಲಿ ವಿಶ್ವದಾದ್ಯಂತ ಮಹಿಳಾ ಪರವಾದ ಹೋರಾಟಗಳು, ಚಳುವಳಿಗಳು ಆರಂಭವಾದವು. ಅವರಿಗೋಸ್ಕರ ಪ್ರಾಥಮಿಕ ಶಿಕ್ಷಣದಿಂದ ವಿಶ್ವವಿದ್ಯಾಲಯದ ಹಂತದವರೆಗೂ ವಿದ್ಯಾರ್ಜನೆ ಒದಗಿಸುವುದರ ಮೂಲಕ ಅವರಲ್ಲಿನ ಆಲೋಚನಾ ಕ್ರಮದಲ್ಲಿ ಪರಿವರ್ತನೆಯನ್ನುಂಟು ಮಾಡಿದವು. ಅದು ಸಂಪೂರ್ಣವಾಗಿ ಅಲ್ಲದೆ ಕೇವಲ ಕೆಳವರ್ಗದವರ ಪಾಲಿಗೆ ಮಾತ್ರ ಲಭಿಸುವಂತಹ ಸಂದರ್ಭವನ್ನು ಅದರ ಜೊತೆಗೆ ಮೈಗೂಡಿಸಿಕೊಂಡಿತು. ಇಂತಹ ವಿಭಿನ್ನವಾದ ಶೈಕ್ಷಣಿಕ ನೆಲೆಯಲ್ಲಿ ಶಿಕ್ಷಿತ ಮಹಿಳೆ ಮತ್ತು ಅಶಿಕ್ಷಿತ ಮಹಿಳೆಯೆಂಬ ಎರಡು ಕವಲುದಾರಿಯುಂಟಾಗಿ ಇನ್ನೊಂದು ಸಮಸ್ಯೆಯುಂಟಾಗಲಿಕ್ಕೆ ಕಾರಣವು ಆಯಿತೆಂದು ತಿಳಿದುಬರುತ್ತದೆ. ಒಂದು ಕಡೆ ಭಾರತೀಯ ಸಾಂಪ್ರದಾಯಿಕ ನೆಲೆಯಲ್ಲಿ ಬದುಕನ್ನು ರೂಢಿಸಿಕೊಂಡಿರುವಂತಹ ಬಹು ಸಂಖ್ಯಾತ ಕುಟುಂಬಗಳು ಮಹಿಳೆಯ ಶಿಕ್ಷಣದ ಬಗ್ಗೆ ಅಸಡ್ಡೆ ಹೊಂದಿರುವರೆಂದು, ಇನ್ನೊಂದು ಶಿಕ್ಷಿತ ಮಹಿಳೆಯನ್ನು ಸೇವಾ ವರ್ಗದ ಪ್ರವೇಶ ಪಡೆದವರು, ಈ ತರಹದ ದ್ವಿಮುಖ ಹಾದಿಯಲ್ಲಿ ಮಹಿಳಾ ಶೈಕ್ಷಣಿಕ ಸಮಸ್ಯೆಗಳು ಎಂದು ನಾವುಗಳು ಅರ್ಥೈಯಿಸಿಕೊಳ್ಳಬೇಕಾಗಿದೆ. ಮೊದಲನೆಯದಾಗಿ ಅಶಿಕ್ಷಿತ ಮಹಿಳೆಯರು ಬಹುಸಂಖ್ಯಾತವಾಗಿದ್ದಾರೆ. ಜೊತೆಗೆ ಅವರ ಸಮಸ್ಯೆಗಳೇ ವಿಭಿನ್ನವಾಗಿವೆ. ಅದಕ್ಕೆ ತನ್ನದೆಯಾದ ಆಂತರಿಕ ನಿಲುವುಗಳು ಸಹ ಬೇರೆಯಾಗಿವೆ. ಇನ್ನು ಅಲ್ಪಸ್ವಲ್ಪ ಶಿಕ್ಷಣವನ್ನು ಪಡೆದುಕೊಂಡು ಸಮಾಜದಲ್ಲಿ ಒಂದು ಸ್ತರವನ್ನು ಅಲಂಕರಿಸಿದವರ ಹಸಿವು ಸಹ ಬೇರೆಯಾಗಿದೆ. ಆದರೆ ಇಲ್ಲಿ ಪ್ರಮುಖವಾಗಿ ಅಶಿಕ್ಷಿತ ಮಹಿಳೆಯರ ಶಿಕ್ಷಣ ಕುರಿತು ಆಲೋಚನೆ ಮಾಡಿದಾಗ

ಅವರಿಗೆ ಎದುರಾಗಿರುವ ಸಮಸ್ಯೆಗಳೇ ಬೇರೆಯಾಗಿವೆ. ಇಂತಹ ವಿಷಯವನ್ನು ಕುರಿತಂತೆ ಚರಿತ್ರೆಯನ್ನು ಗಮನಿಸಿದಾಗ ಸಾಂಸ್ಕೃತಿಕ ಸಂಕಥನಗಳನ್ನು ಬಿಚ್ಚಿದಾಗ ಮಹಿಳಾ ಶೈಕ್ಷಣಿಕ ಸಾಧ್ಯತೆಗಳು ಸ್ಪಷ್ಟವಾಗುತ್ತದೆ. ಚರಿತ್ರೆಯಲ್ಲಿ ಅನೇಕ ಮಹಿಳೆಯರು ರಾಜ್ಯಾಡಳಿತ ನಡೆಸಿರುವುದು ಕಂಡುಬರುತ್ತದೆ. ಭಾರತದ ಚರಿತ್ರೆಯಲ್ಲಿ ಇಷ್ಟೆಲ್ಲಾ ದೀರ್ಘ ಪರಂಪರೆಯಿರುವ ಮಹಿಳೆ ಇಂದೇಕೆ ದುರ್ಬಲಳಾದಳು? ಆಕೆಯ ಸಬಲೀಕರಣ ಮಾಡುವ ಮಾತು ಈಗೇಕೆ ಬಂತು ? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೊರಟಾಗ ಇದರ ಅರ್ಥ ವ್ಯಾಪ್ತಿ ಸ್ಪಷ್ಟವಾಗುತ್ತದೆ. ರಾಜನ ಹಾಗೆ ರಾಣಿ ರಾಜ್ಯವಾಳುವುದು ಪುರುಷನಂತೆ ಮಹಿಳೆ ಕಾರ್ಯ ನಿರ್ವಹಿಸುವುದು ಮುಖ್ಯವಲ್ಲ. ಪುರುಷ ನಡೆದ ದಾರಿಯಲ್ಲಿಯೇ ಮಹಿಳೆ ನಡೆಯಬೇಕೆಂದಲ್ಲ. ಪುರುಷನ ಮಟ್ಟಕ್ಕೆ ಬಂದು ನಿಂತಾಕ್ಷಣ ಸಮಾನತೆ ದೊರೆಯುತ್ತದೆಂಬುದೂ ಅಲ್ಲ. ಆದರೆ ಲಿಂಗಭೇದ, ವರ್ಗ ಭೇದ, ವರ್ಣಭೇದವನ್ನು ಅಳಿಸಿ ಹಾಕುವುದು ನಿಜವಾದ ಸಮಾನತೆ. ಇಂತಹ ಸಮಾನತೆಯ ತಾತ್ವಿಕ ನೀತಿಯನ್ನು ಅಳವಡಿಸಿಕೊಂಡಾಗ ಮಾತ್ರ ಮಹಿಳಾ ಶಿಕ್ಷಣ ನಿಜವಾದ ಅರ್ಥದಲ್ಲಿ ಪ್ರಾರಂಭವಾಗುತ್ತದೆ (ವಿಜಯಶ್ರೀ ಸಬರದ ೨೦೦೫ ಪುಟ ೮೯).

"ಇಂದು ನಮ್ಮೊಂದಿಗೆ ಎರಡು ರೀತಿಯ ಶಿಕ್ಷಣ ಪದ್ಧತಿಗಳಿವೆ. ಶತ ಶತಮಾನಗಳಿಂದ ಮುಂದುವರೆದುಕೊಂಡು ಬಂದ ನಮ್ಮದೇ ಆದ ಚಾತುರ್‌ವರ್ಣ ವ್ಯವಸ್ಥೆಯ ಗುರುಕುಲ ಪದ್ಧತಿ ಒಂದು ಕಡೆಯಿದ್ದರೆ, ಈಗ ಮೂರು ಶತಮಾನಗಳಿಂದ ತೀವ್ರಗೊಂಡಿರುವ ಇಂಗ್ಲೀಷ್ ಶಿಕ್ಷಣ ಪದ್ಧತಿ ಮತ್ತೊಂದೆಡೆ ಇದೆ. ನಮ್ಮ ದೇಶದ ಹಿಂದಿನ ಶಿಕ್ಷಣ ಪದ್ಧತಿ ವರ್ಣಾಶ್ರಮ ಶಿಕ್ಷಣ ಪದ್ಧತಿಯಾಗಿದ್ದು, ಕೇವಲ ಉನ್ನತ ವರ್ಗದವರಾದ ಬ್ರಾಹ್ಮಣ, ಕ್ಷತ್ರಿಯರಿಗೆ ಮಾತ್ರ ಶಿಕ್ಷಣ ಪಡೆಯುವ ಅವಕಾಶವಿತ್ತು. ಶೂದ್ರರು, ದಲಿತರು, ಹಿಂದುಳಿದವರು ಇಂತಹ ಶಿಕ್ಷಣ ಪದ್ಧತಿಯಿಂದ ತುಂಬಾ ದೂರವಿದ್ದರು. ಈ ವಿಷಯದಲ್ಲಿ ಮಹಿಳೆಯರ ಸ್ಥಿತಿಯು ತುಂಬಾ ಚಿಂತಾಜನಕವಾಗಿತ್ತು. ಆಗಿನ ಕಾಲದ ಶಿಕ್ಷಣವೆಂದರೆ ವೇದಾಧ್ಯಯನವೇ ಅಗಿತ್ತು. ಲೋಪಮುದ್ರ ಘೋಷಾ, ವಿಶ್ವಾವರಾ, ಸುಲಭ, ಗಾರ್ಗಿ, ಮೈತ್ರೇಯ ಮುಂತಾದ ಮಹಿಳೆಯರು ವೇದಾಧ್ಯಯನ ಮಾಡಿದ್ದರೆಂದು ತಿಳಿದು ಬರುತ್ತದೆ. ಮುಂದೆ ಸ್ಮೃತಿಗಳ ಕಾಲಕ್ಕೆ ಲಿಂಗಭೇದ ನೀತಿ ವೃದ್ಧಿಯಾಗುತ್ತಾ ಹೋಯಿತು. ಕೆಲವು ಮಹಿಳೆಯರು ವೇದಾಧ್ಯನ ಮಾಡಿದಾಕ್ಷಣ ಎಲ್ಲರಿಗೂ ಶಿಕ್ಷಣದ ಅವಕಾಶವಿತ್ತೆಂದಲ್ಲ. ಕೆಲವು ಮಹಿಳೆಯರಾದರೂ ಆ ಕಾಲದಲ್ಲಿ ವೇದಾಧ್ಯಯನ ಮಾಡಿರಬಹುದೆಂದು ತಿಳಿದುಕೊಂಡರು ಕೂಡ ಅದರಿಂದಾದ ಪ್ರಯೋಜನಗಳೇನು ಎಂಬುದು ಮುಖ್ಯ ಪ್ರಶ್ನೆ" (ವಿಜಯಶ್ರೀ ಸಬರದ ೨೦೦೫, ಪುಟ ೮೯). ಬಡತನದ ಮಹಿಳೆಯರನ್ನು ಹೊರತುಪಡಿಸಿದರೆ ಉಳಿದ ಮೇಲ್ವರ್ಗದ ಮಹಿಳೆಯರು ಅಕ್ಷರ ಜ್ಞಾನ ಪಡೆದುಕೊಂಡು ಸುಶಿಕ್ಷಿತರಾಗಿದ್ದಾರೆ. ಅಂತಹವರು ಸಹ ಋಗ್ವೇದದ ಪ್ರಕಾರ ಎಲ್ಲಾ ಪ್ರಾರ್ಥನೆಗಳೂ ಗಂಡು ಮಗುವಿಗಾಗಿ ಎನ್ನುವಂತೆ ಪೂಜಾ ಪುನಃಸ್ಕಾರಗಳು ಜರುಗುತ್ತವೆ. ಅಂದಾಗ ಅಶಿಕ್ಷಿತವಾದ ಮಹಿಳೆ ಇದರಿಂದ ಹೊರತಾಗಿಲ್ಲ. ಭಾರತೀಯರ

ಸಂದರ್ಭದಲ್ಲಿ ಇವತ್ತಿನವರೆಗೂ ಸಮಾಜದಲ್ಲಿ ಸದ್ಭಕ್ತಿಯಿಂದ ಪೂಜೆ ಆರಾಧಾನೆಯಾಗಿರುವ ಭಗವದ್ಗೀತೆಯೂ ಸಹ ಮಹಿಳೆಯರನ್ನು ಕುರಿತು ಲಿಂಗಭೇದ ನೀತಿಯನ್ನು ಹುಟ್ಟು ಹಾಕಿರುವುದು ತಿಳಿದುಬರುತ್ತದೆ. ಈ ತೆರನಾದ ಕೃತಿಗಳು ಮಹಿಳೆಯೂ ಓದಿದ್ದಾಳೆ. ವೇದಾಧ್ಯಯನ ಮಾಡಿದ್ದಾಳೆ ಎಂಬುದು ಹೆಮ್ಮೆಯ ವಿಷಯವೆಂದು ಬಿತ್ತರಿಸಿಕೊಳ್ಳುತ್ತವೆ. ಆದರೆ ಮಹಿಳೆ ಸಮಾನತೆ ತತ್ವಕ್ಕೆ ವಿರೋಧವಿದೆಯೆಂದು ಹೇಳಬಹುದು. ಏಕೆಂದರೆ ಲಿಂಗತಾರತಮ್ಯ ತತ್ವವನ್ನು ಕಲಿಸುವ ಶಿಕ್ಷಣವನ್ನು ಮಹಿಳೆ ಓದಿದರೇನು. ಅದರಿಂದ ಅಸಮಾನತೆ ಅಧಿಕವಾಗುತ್ತದೆಯೇ ಹೊರತು, ಸಮಾಜದಲ್ಲಿ ಸಮಾನತೆ ಉದ್ಭವವಾಗುವುದಿಲ್ಲ. " ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎನ್ನುವವನು, ಯಾರು ಓದಿದರೆ ಅಷ್ಟೆ ಮಹಿಳೆ ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಸ್ಪಷ್ಟಪಡಿಸಿದ ಮನು ಶಿಕ್ಷಣವನ್ನು ಹೆಣ್ಣು ಮಕ್ಕಳು ಪಡೆಯುವುದು ಇನ್ನು ಅಪಾಯಕಾರಿ ಎಂದನು (ವಿಜಯಶ್ರೀ ಸಬರದ ೨೦೦೫ ಪುಟ-೯೦).

ಇಂತಹ ಅಪಾಯಕಾರಿ ಅಸಮಾನತೆಯ ಶಿಕ್ಷಣ ನೀತಿಯನ್ನು ವಿರೋಧಿಸಬೇಕಾಗಿದ್ದ ಮಹಿಳೆಯರೇ ಅದನ್ನು ಓದಿದಾಗ, ಅದರಂತೆ ನಡೆದುಕೊಂಡಾಗ ಪುರುಷ ಪ್ರಧಾನ ವ್ಯವಸ್ಥೆಗೆ ಇನ್ನು ಅನುಕೂಲವಾಗುತ್ತದೆ. ಕುರಿ ಕೊಬ್ಬಿದಷ್ಟು ಕೊಲ್ಲುವವನಿಗೆ ಅನುಕೂಲವಾದಂತೆ ಮಹಿಳೆ ಇಂತಹ ಲಿಂಗಭೇದ ಶಿಕ್ಷಣವನ್ನು ಪಡೆದಷ್ಟು ಆಕೆ ಅಧಃಪತನಕ್ಕೊಳಗಾಗುತ್ತಾಳೆ. ಅದುದರಿಂದ ಶಿಕ್ಷಣ ಯಾವ ಕಾಲದ್ದು ಯಾರು ಹೇಳಿದ್ದು, ಯಾರು ಓದಿದ್ದು ? ಎಂಬಂತಹ ಪ್ರಶ್ನೆಗಳಿಗಿಂತ ಆ ಶಿಕ್ಷಣ ಜನಪರವಾಗಿದೆಯೇ ಜನ ವಿರೋಧಿಯಾಗಿದೆಯೇ ಎಂಬುದು ಮುಖ್ಯವಾಗಬೇಕು. ಆ ಶಿಕ್ಷಣ ಸಮಾನತೆಯನ್ನು ಕಲಿಸುತ್ತದೆಯೇ ಅಥವಾ ಲಿಂಗಭೇದ ನೀತಿಯನ್ನು ಹೇಳುತ್ತದೆಯೇ ಎಂಬುದು ಬಹುಮುಖ್ಯವಾಗಬೇಕು. ಇಲ್ಲದಿದ್ದರೆ ಮಹಿಳೆಗೂ ಶಿಕ್ಷಣಕ್ಕೂ ಸಮಾನತೆಗೂ ಸಂಬಂಧವೇ ಇರುವುದಿಲ್ಲ. ಅಂತಹ ಅಸಮಾನತೆಯ ಶಿಕ್ಷಣವನ್ನು ಯಾರೇ ಪಡೆಯಲಿ, ಹೇಗೆ ಪಡೆಯಲಿ ಅದರಿಂದ ಹಾನಿಯೇ ಹೊರತು ಲಾಭವಿಲ್ಲ.

ಇವತ್ತಿನ ಆಧುನಿಕರಣ ಪ್ರಕಿಯೆಯು ಪುರುಷನ ಜೀವನ ಕ್ರಮದಲ್ಲಿಯೂ ಬದಲಾವಣೆಯನ್ನು ತಂದಿತು. ಶಿಕ್ಷಣಕ್ಕೆ ಮೈಗೂಡಿಸಿಕೊಂಡ ಯುವಕರು ತನ್ನ ಮನೆಯ ಮೂಲ ವೃತ್ತಿ ಕಸುಬು ಕೃಷಿಗಳಿಗೆ ಹಿಂತಿರುಗಿ ಹೋಗಲು ಅಸಾಧ್ಯವಾಗಿ ಬಿಡುತ್ತದೆ. ಅವನ ಶಿಕ್ಷಣಕ್ಕೆ ಅನುಗುಣವಾದ ಉದ್ಯೋಗಾವಕಾಶ ಹಳ್ಳಿಯಲ್ಲಿ ಸಾಧ್ಯವಿಲ್ಲ, ಹಳ್ಳಿಯಲ್ಲಿನ ವೃತ್ತಿಗೆ ತಕ್ಕ ತರಬೇತಿಯಿಂದ ಅವನು ದೂರ ಬಂದು ಬಿಟ್ಟಿದ್ದಾನೆ. ಇದು ಇವನ ಸಂದಿಗ್ಧ ಆದರೂ ಈಗಿನ ಸರ್ಕಾರಿ ಕಾರ್ಯ ಯೋಜನೆಯ ಉಳುವವನೇ ಭೂಮಿಯ ಒಡೆಯನಾಗುತ್ತಾನೆ ಎಂಬಂತಹ ಕಾನೂನುಗಳು, ಶಿಕ್ಷಣ ಯುವ ಜನರನ್ನು ಹಳ್ಳಿಗಳಿಗೆ ಆಕರ್ಷಿಸುವುದರಲ್ಲಿ ಸ್ವಲ್ಪ ಮಟ್ಟಿಗೆ ನೆರವಾಗುತ್ತವೆ. ಆ ಮಾತಿರಲಿ ಇಷ್ಟಾದರೂ ಹೆಣ್ಣು ಮತ್ತು ಗಂಡು ಮಕ್ಕಳ ಬಗೆಗಿನ ನಮ್ಮ ಸಾಮಾಜಿಕ ಅಭಿಪ್ರಾಯಗಳಿಂದಾಗಿ ಹೆಣ್ಣು ಮಕ್ಕಳು ವಿದ್ಯಾಭ್ಯಾಸವನ್ನು ಮುಂದುವರೆಸುವುದೇನೂ ಸಹಜದ

ಮಾತಲ್ಲ. ವಾಸ್ತವದಲ್ಲಿ ಶಿಕ್ಷಣದ ಉನ್ನತ ಹಂತಗಳನ್ನು ತಲುಪಿದ ಹೆಣ್ಣು ಮಕ್ಕಳ ಸಾಧನೆ ಸಾಮರ್ಥ್ಯಗಳು ಗಂಡು ಹುಡುಗರನ್ನು ಮೀರಿಸುತ್ತದೆ. ಆದರೂ ಅವಳ ಶಿಕ್ಷಣಕ್ಕೆ ಕುಟುಂಬದಲ್ಲಿ ಹಲವು ರೀತಿಯ ಕಂಟಕಗಳಿವೆ. ಅಷ್ಟೇನು ಬುದ್ಧಿವಂತನಲ್ಲದ ಮಗ, ಚೆನ್ನಾಗಿ ಓದುವ ಮಗಳು ಇವರಿಬ್ಬರಲ್ಲಿ ಉನ್ನತ ಶಿಕ್ಷಣದ ಅವಕಾಶ ಲಭಿಸುವುದು ಮೊದಲು ಮಗನಿಗೆ. ಉಳಿದರೆ ಮಗಳಿಗೆ. ಕೆಲವೊಮ್ಮೆ ಆರ್ಥಿಕ ಅನುಕೂಲವಿದ್ದರೂ ಜಾಸ್ತಿ ಓದಿದರೆ, ಗಂಡು ಸಿಗಲಾರನೆಂಬ ಕಾರಣ ಅವಳ ಅವಕಾಶವನ್ನು ಮೊಟಕುಗೊಳಿಸಲಾಗುತ್ತದೆ. ಗಂಡ ಹೆಂಡತಿಯರಲ್ಲಿ ಯಾವ ಬಗೆಯಲ್ಲಿ ಹೆಂಡತಿ ಗಂಡನನ್ನು ಮೀರಿಸುವಂತಿರಬಾರದು. ಕೆಲವೊಮ್ಮೆ ಹೆಚ್ಚು ಓದಿದ ಕಾರಣಕ್ಕೆ ಮದುವೆಯಾಗುವವರೆಗೆ ಶಾಲೆ-ಕಾಲೇಜಿಗೆ ಹೋಗಲಿ ಎಂಬಷ್ಟಕ್ಕೆ ಬಂತು. ಈ ಕಲಿತ ಹೆಣ್ಣುಗಳನ್ನು ಬಯಸುವ ವಿದ್ಯಾವಂತ ಗಂಡಗಳೂ ಇದ್ದೆ ಇರುತ್ತಾರೆ. ವರದಕ್ಷಿಣೆಯು ಬೆಳೆ-ಬೆಳೆಯುತ್ತಾ ಹುಡುಗಿಯರ ಮದುವೆಯ ವಯಸ್ಸು ಕೂಡ ಹೆಚ್ಚುತ್ತಲೇ ಹೋಗಬೇಕಾಯಿತು. ಇದು ಕೂಡ ಹುಡುಗಿಯರ ಶಿಕ್ಷಣವಕಾಶಕ್ಕೆ ಕಾರಣವಾಗಿ ಒದಗಿ ಬಂದಿತ್ತೆಂಬುದು ಗಮನಾರ್ಹ (ಶ್ರೀಮತಿ ಹೆಚ್.ಎಸ್. ೨೦೦೪,ಪುಟ ೧೦೫).

ಭಾರತದ ಮಹಿಳೆಯರು ಇಲ್ಲಿನ ಸಾಮಾಜಿಕ ಮತ್ತು ಉದ್ಯೋಗ ಕ್ಷೇತ್ರಗಳಲ್ಲಿ ಅದೆಷ್ಟು ಸಹಜವಾಗಿ ಬೇರೂರಿ ಬೆಳೆದು ಬರುತ್ತಿದ್ದಾರೆಂಬುದು ತುಂಬಾ ಸಂತೋಷವಾದ ಹಾಗೂ ಕೂತೂಹಲದ ಸಂಗತಿ. ಇಂಥ ಮಹಿಳೆಯರು ಬಹುಮಟ್ಟಿಗೆ ನಗರದ ಮಧ್ಯಮ ವರ್ಗದ ಮೇಲು ಸಮುದಾಯಗಳಿಗೆ ಸೇರಿದ್ದಾರೆಂಬುದೇನೋ ನಿಜ. ಮಹಿಳೆಯ ಈ ಮುನ್ನಡೆಯನ್ನು ತಡೆಯುವಂತಹ ಪ್ರಯತ್ನಗಳು ಇಂದಿಗೂ ಪರೋಕ್ಷವಾಗಿ ನಡೆಯುತ್ತಲೇ ಇವೆ. "ಪುರುಷ ಪ್ರಧಾನ ವ್ಯವಸ್ಥೆಗೆ ಮಹಿಳಾ ಪ್ರಗತಿಯನ್ನು ಅಷ್ಟು ಸಹಜವಾಗಿ ಅರಗಿಸಿಕೊಳ್ಳಲು ಸಾಧ್ಯವಾಗಿಲ್ಲದಿರಬಹುದು. ಆದರೆ ಮಹಿಳೆಯ ಮುನ್ನಡೆಯ ವಿವಿಧ, ಸಮುದಾಯ, ವರ್ಗ, ಗ್ರಾಮಗಳ ಹಂತಕ್ಕೂ ವಿಸ್ತರಿಸುತ್ತಾ ಸಾಗಿರುವುದನ್ನು ಈ ಸಮಾಜವು ಅನಿವಾರ್ಯವಾಗಿಯಾದರೂ ಒಪ್ಪಿಕೊಳ್ಳಲೇಬೇಕಾಗಿದೆ" (ಶ್ರೀಮತಿ ಹೆಚ್.ಎಸ್.೨೦೦೪, ಪುಟ ೧೦೮). ಆದರೆ ಸೂಕ್ಷ್ಮವಾಗಿ ನೋಡಿದರೆ ಭಾರತೀಯ ಮಹಿಳೆ ಅಂದಿಗೂ, ಇಂದಿಗೂ ಕುಟುಂಬದ ಸಂರಕ್ಷಣೆಯ ಭಾರವನ್ನು ಸಮರ್ಥವಾಗಿ ಸಂಗೋಪನೆ ಮಾಡುವ ಹೊಣೆಯನ್ನು ಪ್ರಧಾನವಾಗಿಯೇ ಪರಿಗಣಿಸಿ ನಡೆದಿದ್ದಾಳೆಂಬುದು ತಿಳಿದು ಬರುತ್ತದೆ. ಮಧ್ಯಮ ವರ್ಗದ ಎಲ್ಲ ವರಗಳು ತಮ್ಮ ಅದಾಯಕ್ಕೆ ಪೂರಕವಾಗಿ ಹೆಂಡಂದಿರ ವರಮಾನವಿರಲಿ ಎಂದು ಅಪೇಕ್ಷಿಸುತ್ತಾರೆ. ಇಲ್ಲಿ ಹೆಣ್ಣು ಓದಿರಲೂ ಬೇಕು. ಹಾಗೆಂದು ವರನ ಓದನ್ನು ಮೀರಿ ಅವನ ನೌಕರಿಯ ಸ್ತರವನ್ನು ಮೀರಿ ಮುಂದೆ ಹೋಗಿ ಬಿಡಬಾರದು. ಇದರಲ್ಲಿ ನಗರ ಪ್ರದೇಶ ಮಧ್ಯಮ ವರ್ಗದ ಮೇಲು ಸಮುದಾಯಗಳಿಗೆ ಹೆಚ್ಚಾಗಿ ಅನ್ವಯವಾಗುತ್ತದೆ ಎಂಬುದು ನಿಜವಾದರೂ, ಉಳಿದ ಸಮುದಾಯ ವರ್ಗಗಳಿಗೂ ಈ ಲಕ್ಷಣ ಹಬ್ಬುತ್ತಿದೆ ಎಂಬುದು ತೀರಾ ಗುಟ್ಟಾಗಿಯೇನು ಉಳಿದಿಲ್ಲ. ಆದರೂ ಮಹಿಳೆಯು ತನ್ನ ಅಂತಸ್ತು ಜಗತ್ತಿನಿಂದ ವಿಮೋಚನೆಯಾಗಿಲ್ಲ.

ಹೀಗೆಂದಾಗ ಮಹಿಳೆಯರಿಗೆ ದೊರೆಯುವ ಶಿಕ್ಷಣಾವಕಾಶಗಳು ಬಹುಮಟ್ಟಿಗೆ ಒಳ್ಳೆಯ ಗಂಡನನ್ನು ಹುಡುಕುವ ಉದ್ದೇಶದ್ದಾಗಿರುತ್ತದೆ ಎಂಬ ಮಾತೇ ಪ್ರಧಾನವಾದುದು. ಸರ್ಕಾರದ ಕಾಯಿದೆ ಕಾನೂನುಗಳು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ವಿಶೇಷ ಸೌಲಭ್ಯ, ಸವಲತ್ತುಗಳನ್ನು ಮೀಸಲಿರಿಸಬಹುದು. ತಂದೆ, ತಾಯಿಯರು ತಮ್ಮ ಹೆಣ್ಣು ಮಕ್ಕಳನ್ನು ಶಾಲಾ, ಕಾಲೇಜುಗಳಿಗೆ ಕಳಿಸಲೂಬಹುದು. ಆದರೆ ಸೂಕ್ತ ವರನನ್ನು ಪಡೆಯುವಷ್ಟಕ್ಕೆ ಅವಳ ಶಿಕ್ಷಣ ಸೀಮಿತವಾಗಿ ಇರುತ್ತದೆ ಹೊರತು ಉನ್ನತ ಶಿಕ್ಷಣ ತಮ್ಮದಾಗಿಸಿಕೊಳ್ಳುವಲ್ಲಿ ಎಷ್ಟೋ ಮಹಿಳೆಯರು ವಿಫಲವಾಗುತ್ತಾರೆ. ಭಾರತದಂತಹ ಸಾಂಪ್ರದಾಯಿಕ ನಾಡಿನಲ್ಲಿ ಮಹಿಳೆಗೆ ಒದಗಿ ಬಂದ ಶಿಕ್ಷಣಾವಕಾಶಕ್ಕೆ ವಿಚಿತ್ರವಾದುದೊಂದು ಚರಿತ್ರೆ ಇದೆ. ಆಧುನಿಕತೆಯ ಪ್ರಾರಂಭದ ಅವಧಿಯಲ್ಲಿ ಸುಧಾರಣವಾದಿಗಳಿಂದಾಗಿ ಮಹಿಳೆಗೆ ಶಿಕ್ಷಣಾವಕಾಶಗಳು ದೊರೆಯಲಾರಂಭಿಸಿದ್ದು, "೧೮೯೬ ರಲ್ಲಿ ವಿಧವೆಯರಿಗಾಗಿ ಪೂನಾದಲ್ಲಿ ಶಾಲೆಯೊಂದು ತೆರೆದಿದೆ" (ಶ್ರೀಮತಿ ಹೆಚ್.ಎಸ್. ೨೦೦೧, ಪುಟ ೭೫). ಅದು ಉನ್ನತ ಸಮುದಾಯಗಳಲ್ಲಿ ಕಿರಿಯ ವಯಸ್ಸಿನ ವಿಧವೆಯರಿಗೆ ಜೀವನದ ಗುರಿಯೊಂದನ್ನು ಕಾಣಿಸುವ ಪ್ರಯತ್ನವಾಗಿ ಈ ದೇಶದ ಅಂದಿನ ಸುಧಾರಣಾವಾದಿಗಳು ಸ್ತ್ರೀಯರಿಗೆ ಶಿಕ್ಷಣವನ್ನು ಒದಗಿಸಿಕೊಡುವಲ್ಲಿ ಬಹುದೊಡ್ಡ ಪ್ರಯತ್ನಗಳನ್ನು ಮಾಡಿದರು. ಹಾಗೆ ನಮ್ಮ ಮಹಿಳೆಯರಲ್ಲಿ ಮೊದ ಮೊದಲು ಶಿಕ್ಷಣಾವಕಾಶಗಳು ದೊರೆತದ್ದು ಈ ಬಾಲ ವಿಧವೆಯರಿಗೆ. ಎರಡನೆಯದಾಗಿ ಉನ್ನತ ಪದವಿಗಳನ್ನು ಪಡೆದು ದೊಡ್ಡ ಹುದ್ದೆಗಳಲ್ಲಿದ್ದ ಪುರುಷರು ವಿದ್ಯೆಯ ಗಂಧವಿಲ್ಲದ ಹೆಣ್ಣುಗಳನ್ನು ಕಟ್ಟಿಕೊಂಡು ಬಾಳುವುದರಲ್ಲಿ ಬೇಸತ್ತರು. ಅಗಾಧವಾದ ಮಾನಸಿಕ ಬೌದ್ಧಿಕ ಅಂತರಗಳ ಕಷ್ಟಗಳನ್ನು ಸರಿಪಡಿಸಿಬೇಕೆಂದರೆ ವಿದ್ಯಾವತಿಯಾದ ಹೆಣ್ಣುಬೇಕೆಂದು ಆಶಿಸತೊಡಗಿದರು. ಉನ್ನತ ವರಗಳೆನಿಸಿದ ಇವರ ಅಸೆಗಳಿಗೆ ಅನುಗುಣವಾಗಿ ಹೆಣ್ಣಿನ ಮನೆಯವರು ತಮ್ಮ ಹೆಣ್ಣು ಮಕ್ಕಳನ್ನು ಶಾಲಾ-ಕಾಲೇಜುಗಳಿಗೆ ಕಳಿಸುವುದು ಅನಿವಾರ್ಯವಾಯಿತು. ಆದರೆ ಇವರೆಲ್ಲರೂ ಮನೆಯ ಗೌರವಕ್ಕೆ ಭೂಷಣವಾದರೆ ಹೊರತು ನೌಕರಿಗಳನ್ನು ಪಡೆಯುವಲ್ಲಿ ವಿಫಲವಾದರು.

ಶಿಕ್ಷಣವನ್ನು ಕುರಿತಂತೆ ಮಹಿಳೆಯ ಮೇಲೆ ಬೀರಿದ ಪರಿಣಾಮವನ್ನು ಸ್ವಲ್ಪ ಗಮನಿಸುವುದಾದರೆ ನಮ್ಮಲ್ಲಿ ಬಹುಮಟ್ಟಿಗೆ ಹಿಂದೆ ರೂಢಿಯಲ್ಲಿದ್ದದ್ದು ವಧುದಕ್ಷಿಣೆಯ ಪದ್ಧತಿ. ಆದರೆ ಕ್ರಮೇಣವಾಗಿ ವರದಕ್ಷಿಣೆ ರೂಢಿಗೆ ಬಂದಿದ್ದಕ್ಕೆ ಹಲವು ಕಾರಣಗಳು ಇವೆ. ಹುಡುಗಿಯ ಮದುವೆ ಆಕೆ ಋತುಮತಿಯಾಗುವ ಮೊದಲೇ ಆಗಬೇಕು ಎಂಬ ನಿಯಮವಿದ್ದುದು ಹುಡುಗಿಯ ತಂದೆ, ತಾಯಿಯರನ್ನು ಬಹು ದೊಡ್ಡ ಆತಂಕಕ್ಕೆ ಸಿಲುಕಿಸುವ ಸಂಗತಿಯಾಗಿಬಿಟ್ಟಿತು. ತಮ್ಮ ಸಮುದಾಯದೊಳಗೆ ಸೂಕ್ತವಾದ ವರನನ್ನು ನಿಶ್ಚಯಿಸಿ ಹುಡುಗಿ ಋತುಮತಿ ಆಗುವ ಮುಂಚೆಯೆ ಹುಡುಗನನ್ನು ಹುಡುಕಿಡುವ ಪ್ರಯಾಸವನ್ನು ಭರಿಸುವುದು ಹುಡುಗಿಯನ್ನು ಕುರುಡ, ಕುಂಟ, ಮುದುಕ, ನಿರ್ಗತಿಕ ಯಾರೆಂದರವರಿಗೆ ಒಪ್ಪಿಸುವುದು ಸಾಮಾನ್ಯವಾಗಿತ್ತು.

ಆದರೆ ಈ ಪ್ರಶ್ನೆ ಅತಾರ್ಕಿಕ, ಅಸಹಜವೆಂಬುದಷ್ಟು ಕ್ರೂರವಾಗಿ ಬೆಳೆದುಬಿಟ್ಟಾಗ ತಂದೆ, ತಾಯಿಯರಲ್ಲಿ ಈ ನಿಯಮವನ್ನು ಪಾಲಿಸಲಾರೆವು ಎಂಬಂತಹ ಅಸಹಾಯಕತೆಯ ಮೂಲದ ಪ್ರತಿರೋಧ ಹುಟ್ಟಿತು. ಋತುಮತಿಯಾದ ಮೇಲೂ ಹೆಣ್ಣು ಮಗಳು ಮನೆಯಲ್ಲಿ ಉಳಿಯತೊಡಗಿದಳು. ಸಮಾಜವು ಕಣ್ಣು ಮುಚ್ಚದಂತೆ ನಟಿಸಬೇಕಾಯಿತು. ಸೂಕ್ತ ವರನ ಶೋಧನೆಯಲ್ಲಿ ವರದಕ್ಷಿಣೆಯನ್ನು ಕೊಡುವ ರೂಢಿ ಬಂತು. ವರದಕ್ಷಿಣೆ ಹಾಗೂ ಮದುವೆಯ ಇತರೆ ಖರ್ಚುಗಳನ್ನು ಹೊಂದಿಸಿಕೊಳ್ಳಲು ವಧುವಿನ ತಂದೆಗೆ ಸಾಕಷ್ಟು ಸಮಯಾವಕಾಶ ಬೇಕಿತ್ತು. ಈ ಮಧ್ಯೆ ಬೆಳೆದ ಹುಡುಗಿಯನ್ನು ಸುಮ್ಮನೆ ಮನೆಯಲ್ಲಿ ಇಟ್ಟುಕೊಳ್ಳುವುದು ಕಷ್ಟವೆಂದು ತಿಳಿಯುತ್ತದೆ. "ತನ್ನ ವ್ಯಕ್ತಿತ್ವ ವಿಕಸನಕ್ಕೆ ಹೊರಗಿನ ಉದ್ಯೋಗ ನೆರವಿಗೆ ಬರುವ ಬಹುತೇಕ ಸಂದರ್ಭಗಳನ್ನು ಕೂಡ ಬಿಟ್ಟುಕೊಡಲು ಅವಳು ತಯಾರಾಗಿಯೇ ಇರುತ್ತಾಳೆ. ಮಹಿಳೆಯರು ಸ್ವಂತದ ಸಾಧನೆಗಳ ಮೇಲೆ ತಾವಾಗಿಯೇ ನಿರ್ಬಂಧಗಳನ್ನು ಹೇರಿಕೊಂಡಿದ್ದಾರೆ ಎಂದು ಈ ಸಂದರ್ಭವನ್ನು ಖ್ಯಾತ ಸಮಾಜ ಶಾಸ್ತ್ರಜ್ಞೆ ನೀರಾದೇಸಾಯಿ ವಿವರಿಸಿದ್ದಾರೆ. ನಮ್ಮ ಮಹಿಳೆಯರ ಪಾಲಿಗೆ ಉದ್ಯೋಗ ಎಂದರೆ ಒಂದು ನೌಕರಿ ಹೊರತು, ಅದು ತಮ್ಮ ಸಾಧನೆಯ ಕ್ಷೇತ್ರ ಅಲ್ಲ. ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡು ಬೆಳೆಯಬೇಕಾದರೆ ಅವಕಾಶ ಎನ್ನುವಂಥದ್ದಾಗಲಾರದು. ತನ್ನ ಕುಟುಂಬ ಸಂಸಾರದಲ್ಲಿ ಹೆಂಡತಿಯಾಗಿ, ತಾಯಿಯಾಗಿ, ಗೃಹಿಣಿಯಾಗಿ ತಾನು ನಿರ್ವಹಿಸಬೇಕಾದ ಹೊಣೆಯನ್ನು ಅವಳು ಪ್ರಧಾನವಾಗಿ ಭಾವಿಸಬೇಕಾಗುತ್ತದೆ. ಹೊರಗೆ ಸ್ವಾತಂತ್ರ್ಯ ಜವಾಬ್ದಾರಿಯ ಉನ್ನತ ಹುದ್ದೆಗಳನ್ನು ಒಪ್ಪಿಕೊಳ್ಳಲು ಹೋಗುವುದಿಲ್ಲ (ಶ್ರೀಮತಿ ಎಚ್.ಎಸ್. ೨೦೦೪, ಪುಟ ೧೧೦")ಸ.

ಇಂದಿನ ದ್ವಿಪಾತ್ರ ನಿರ್ವಹಣೆಯ ಒತ್ತಡದಲ್ಲಿ ಮಹಿಳೆ ಸಿಲುಕಿ ಹೋಗಿರುವಾಗಲೂ ತನ್ನ ಕ್ಷೇಮ ಚಿಂತನೆಯನ್ನು ಪ್ರಧಾನವಾಗಿ ಪರಿಗಣಿಸಿ ಮನೆಯ ಹೊರಗಿನ ಅವಕಾಶಗಳನ್ನು ಬಾಚಿಕೊಳ್ಳಲು ಹೋಗುತ್ತಿಲ್ಲ. ಮನೆಯ ಒಳಗಿನ ಪಾತ್ರಕ್ಕೆ ಕುಂದು ಬಾರದಂತೆ ಏನನ್ನಾದರೂ ಸಾಧಿಸುವ ಸಾಧ್ಯತೆಗಳ ಬಗ್ಗೆ ಚಿಂತಿತಳಾಗಿದ್ದಾಳೆ. ಇದೇ ರೀತಿಯಾಗಿ ಮನೆ ಮತ್ತು ಕೃಷಿ, ಕೃಷಿಯೇತರ ಕಾರ್ಯಗಳಲ್ಲಿ ನಿಷ್ಠೆಯಿಂದ ದುಡಿಯುತ್ತಿದ್ದಾಳೆ.

ಇಂದು "ನಮ್ಮ ಸಮಾಜವು ಸಹಾನುಭೂತಿಯಿಂದ ಗ್ರಹಿಸಿ ನೆರವಾಗುವ ಬದಲು ಅವಳು ದಡ್ಡಿ, ಅಸಮರ್ಥಳು ಎಂಬಂತೆ ವ್ಯಾಖ್ಯಾನಿಸುತ್ತಾರೆ. ಕೆಲವೊಮ್ಮೆ ಮನೆಯ ಒಳಗೂ, ಹೊರಗೂ ಒಟ್ಟೊಟ್ಟಿಗೆ ಈ ಆಕ್ಷೇಪಗಳಿಗೆ ಅವಳು ಗುರಿಯಾಗುತ್ತಾಳೆ. ಇನ್ನು ಇವೆಲ್ಲ ಸಂಘರ್ಷಗಳೇ ಬೇಡವೆಂದು ತನ್ನ ಕ್ಷೇತ್ರದಲ್ಲಿನ ಸಾಧನೆ ತನ್ನ ವೃತ್ತಿಯ ಸಫಲತೆಗಳನ್ನೇ ಮಹಿಳೆಯು ಮುಂದು ಮಾಡಿಕೊಂಡರೆ ಮನೆ, ಸಂಸಾರ, ಮಕ್ಕಳು ಎಂಬ ಸುಖಗಳನ್ನು ತ್ಯಾಗ ಮಾಡಬೇಕಷ್ಟೆ. ಈ ಸಮಾಜದ ವ್ಯವಸ್ಥೆಯೂ ಎಂದೆಂದೂ ಮಹಿಳೆಯಿಂದ ನಿರೀಕ್ಷಿಸುವುದು ತ್ಯಾಗವನ್ನೇ. ಅತ್ಯಾಧುನಿಕ ಗೃಹೋಪಕರಣಗಳು, ಕಂಪ್ಯೂಟರ್‌ಗಳು ಹೊಸ ತಂತ್ರಜ್ಞಾನಗಳು ಮಹಿಳೆಯ ದೈನಂದಿನ ಗೋಳಾಟದಲ್ಲಿ ನೆರವು ನೀಡುತ್ತವೆ ಎಂಬುದೇನೋ ನಿಜ. ಆದರೂ ಅವಳು ನಿರ್ವಹಿಸಬೇಕಾಗಿರುವ ದ್ವಿಪಾತ್ರಗಳ ಮೂಲ ಸಾಮಾಜಿಕ ಆಶಯವೇ ಅವಳ ಮುಂದೆ ನಿಂತಿರುವ ದೊಡ್ಡ ಸವಾಲಾಗಿರುವುದು.

ಸಮಾಜವು ಆರೋಗ್ಯಕರವಾಗಿ ಸಂತೃಪ್ತವಾಗಿ ಮುನ್ನೆಡೆಯುವಲ್ಲಿ ಕುಟುಂಬ ಎಂಬ ಸಂಸ್ಥೆಯ ಪಾತ್ರವೇ ಅತ್ಯಂತ ಮಹಾತ್ತರವಾದದ್ದು. ಈ ಸಂಸ್ಥೆಯು ಸದೃಢವಾಗಿ ನಿಲ್ಲಬೇಕೆಂದರೆ ಮಹಿಳೆ ಮುಖ್ಯ ಕಾರಣ. ಹಿಂದಿನಿಂದ ಹೆಣ್ಣೆ ಮನೆಯ ಕೇಂದ್ರ ಶಕ್ತಿಯಾಗಿ ದುಡಿಯುತ್ತಾ ಬಂದಿದ್ದಾಳೆ. ಅವಳು ಆತ್ಮ ವಿಕಾಸದ ಹಾದಿಯನ್ನು ಶೋಧಿಸುತ್ತಿರುವಾಗಲೂ ಮೂಲ ಕೇಂದ್ರವನ್ನು ಮರೆಯದೆ ಸಾಗಬೇಕೆಂಬ ಬಗ್ಗೆ ಪ್ರೀತಿಯನ್ನು ಹೊಂದಿದ್ದಾಳೆ. ಇಂದಿನ ಸಮಾಜವು ಅವಳನ್ನು ಕೃತಜ್ಞತೆಯಿಂದ ಕಾಣಬೇಕು ಎಂಬುದಕ್ಕೆ ಇದಕ್ಕಿಂತ ದೊಡ್ಡ ಕಾರಣ ಬೇಕಾಗಿಲ್ಲ. ಅಂಥದ್ದರಲ್ಲಿ ಅವಳನ್ನು ಛಿದ್ರಗೊಳಿಸಲು ಹೊಸ ಹೊಸ ಉಪಯೋಗಗಳನ್ನು ಶೋಧಿಸುತ್ತಾ ಸಾಗಿರುವ ಈ ಸಮಾಜದ ಎದುರು ಮಹಿಳೆ ಸಾವಾಲೆಸೆದು ನಿಲ್ಲುವ ಪ್ರತಿ ಘಟನೆಯ ಮಾದರಿಯಾಗಿ ಬೆಳೆಯುವುದು ಅನಿವಾರ್ಯವಾಗಿ ಬಿಡಬಹುದು. ಇದನ್ನು ಇನ್ನಾದರೂ ಈ ಸಮಾಜವು ಅರಿತು ಮಹಿಳೆಯನ್ನು ಮನ್ನಿಸಿ ಗೌರವಿಸಬೇಕು. ಪ್ರೀತಿ ಸಹಾನುಭೂತಿಗಳಿಂದ ಅವಳನ್ನು ಕಾಣುವುದು ಅವಳ ವಿಕಾಸದ ಹಾದಿಗಳಿಗೆ ತೊಡಕಾಗದೆ ನೆರವಾಗುವುದು ಸಮಾಜದ ಏಳಿಗೆಯ ಅಗತ್ಯಗಳಾಗಿವೆ" (ಶ್ರೀಮತಿ.ಎಚ್.ಎಸ್.೨೦೦೪, ಪುಟ ೧೧೧). ಶಿಕ್ಷಣ ಕಲಿತು ಉದ್ಯೋಗದಲ್ಲಿರುವಂತಹ ಮಹಿಳೆಯರೇ ಈ ರೀತಿಯಾದ ಸಮಸ್ಯೆಗಳನ್ನು ಎದುರುಗೊಳ್ಳುತ್ತಿರುವಾಗ ಇನ್ನು ಅಕ್ಷರ ಜ್ಞಾನವಿಲ್ಲದ ಮಹಿಳೆಯರ ಜೀವನಕ್ಕೆ ಭರವಸೆ ಉಂಟೆ. ಇಂತಹ ಹಲವು ಸಮಸ್ಯೆಗಳನ್ನು ಮೀರಿ ಸಮಾಜದ ಮುಖ್ಯವಾಹಿನಿಗೆ ಬರಲು ಸಾಧ್ಯವೆ ಎನ್ನುವಂತಹ ಸಂಗತಿ ನಮಗೆ ಬಹುಮುಖ್ಯವಾಗುತ್ತದೆ.

೨೧ನೇ ಶತಮಾನದಲ್ಲಿ ಕಾಲಿರಿಸಿದ ಮಹಿಳೆಯೂ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರವೇಶಕ್ಕೆ ಅರ್ಹತೆ ಪಡೆದುಕೊಂಡಿದ್ದಾಳೆ. ಅದು ಅಲ್ಲದೆ ಈ ಶತಮಾನದ ಪ್ರಧಾನ ಚರ್ಚೆಯಲ್ಲಿ ಮಹಿಳೆಯೂ ಒಬ್ಬಳು. ಮಹಿಳೆಯರ ಪರವಾಗಿ ಅನೇಕ ಸಂಘ, ಸಂಸ್ಥೆ, ಸಂಘಟನೆಗಳು ಅಸ್ತಿತ್ವದಲ್ಲಿವೆ. ಸರಕಾರ ಸಂವಿಧಾನಗಳು ಸಹ ಮಹಿಳೆಯರ ಪರ ಚಿಂತನೆ ಮಾಡಿ ಸ್ತ್ರೀಯರಿಗೆಂದೇ ಅನೇಕ ಕಾನೂನು ಮತ್ತು ಯೋಜನೆಗಳನ್ನು ತಂದಿವೆ. ಇದುವರೆಗೆ ಆಕೆ ಅನುಭವಿಸಿದ ಅನಿಷ್ಟ ಪದ್ಧತಿ, ಆಚರಣೆಗಳಿಂದ, ಲಿಂಗ ತಾರತಮ್ಯಗಳಿಂದ ಪಾರು ಮಾಡಲು ಪ್ರಯತ್ನಿಸುತ್ತಿವೆ. ಮಹಿಳೆಯರ ಅಭಿವೃದ್ಧಿ, ಆರೋಗ್ಯ, ಶಿಕ್ಷಣ ಮೊದಲಾದ ವಿಷಯಗಳಿಗೆ ಅನ್ವಯಿಸಿದಂತೆ ವಿಚಾರ ಸಂಕಿರಣಗಳು ಚರ್ಚೆಗಳು ಏರ್ಪಡುತ್ತವೆ. ಅಲ್ಲದೆ ಮಹಿಳೆಯರನ್ನು ಒಳಗೊಂಡು ಮಹಿಳಾ ಕೇಂದ್ರಗಳು ಹುಟ್ಟಿಕೊಂಡಿವೆ.

ಸರ್ವೇಸಾಧಾರಣವಾಗಿ ಮಹಿಳೆಯರ ಜೀವನದಲ್ಲಿ ಶಿಕ್ಷಣವು ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಅದರಲ್ಲಿಯೂ ಗ್ರಾಮೀಣ ಮಹಿಳೆಯರಲ್ಲಿನ ಅನಕ್ಷರತೆಯ ಪ್ರಮಾಣ ಹೆಚ್ಚಿದ್ದು, ಅವರಿಗೆ ಸಾಕ್ಷರರನ್ನಾಗಿ ಮಾಡುವಲ್ಲಿ ಅನೇಕ ರೀತಿಯ ತಾರತಮ್ಯವನ್ನು ಅನುಸರಿಸಲಾಗುತ್ತದೆ. ಭಾರತದ ಸಾಂಪ್ರದಾಯಿಕ ಸಮಾಜ ಮಹಿಳೆಗೆ ಶಿಕ್ಷಣ ನೀಡುವುದು ಅತಿ ಅವಶ್ಯಕವಾಗಿದೆಯೆಂಬ ಸತ್ಯವನ್ನು ಇನ್ನೂ ಅರಿತುಕೊಂಡಿಲ್ಲ. ಇದಕ್ಕೆ ಕಾರಣ ಮಹಿಳೆಗೆ ಶಿಕ್ಷಣ ನೀಡುವುದಕ್ಕಿಂತ ಆಕೆಗೆ

ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವಲ್ಲಿಯೇ ಜನ ಆಸಕ್ತರಾಗಿದ್ದಾರೆ. ಗ್ರಾಮೀಣ ಜನರಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸಿದರೆ ಅವರಿಗೆ ಓದಿನ ಖರ್ಚಿನ ಜೊತೆ ಮದುವೆ ಮಾಡುವ ಖರ್ಚು. ಒಂದು ವೇಳೆ ಓದಿಸಿದರೂ ಅವಳಿಗೆ ಕೆಲಸ ಸಿಕ್ಕರೆ ನಮಗೇನು ದುಡಿದು ಕೊಡುವುದಿಲ್ಲ. ಗಂಡನ ಮನೆಗೆ ದುಡಿದು ಕೊಡುತ್ತಾಳೆ ಎನ್ನುವ ಮನೋಭಾವನೆ. ಜೊತೆಗೆ ಎಷ್ಟೇ ವಿದ್ಯಾಭ್ಯಾಸ ಮಾಡಿದರೂ ಉದ್ಯೋಗಕ್ಕೆ ಹೋದರೂ ಮಹಿಳೆಗೆ ಅಡುಗೆ ಮಾಡುವ ಕೆಲಸವೇನು ತಪ್ಪುವುದಿಲ್ಲ. ಇಂತಹ ಮನೋಭಾವನೆಯಿಂದಾಗಿ ಮಹಿಳೆಗೆ ಶಿಕ್ಷಣ ನೀಡುವುದು ಕಡಿಮೆ. ಹೀಗಾಗಿ ಗ್ರಾಮೀಣ ಪ್ರದೇಶದಲ್ಲಿ ಪ್ರಸ್ತುತ ದಿನದಲ್ಲಿಯೂ ಮಹಿಳೆಗೆ ಶಿಕ್ಷಣ ಕೈಗೆಟುಕುವುದು ಕಷ್ಟವಾಗಿದೆ. ಆಸಕ್ತಿ ಇದ್ದರೂ ಪುರುಷ ಪ್ರಧಾನ ವ್ಯವಸ್ಥೆಯು ಆಕೆಯ ಹಿತಾಸಕ್ತಿಯನ್ನು ಗಣನೆಗೆ ತೆಗೆದುಕೊಳ್ಳದೇ ತನ್ನ ಮೂಗಿನ ನೇರಕ್ಕೆ ಮಹಿಳೆ ಜೀವನ ಸಾಗಿಸುವಂತಹ ಅನಿವಾರ್ಯತೆಯನ್ನು ಕಲ್ಪಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಮಹಿಳಾ ಶಿಕ್ಷಣವು ಸಾರ್ವತ್ರಿಕವಾಗಿ ಮಾನ್ಯತೆ ನೀಡಿರಲಿಲ್ಲ. ಭಾರತೀಯ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ನಂಬಿಕೆಗಳು ಮತ್ತು ಮೌಲ್ಯಗಳು ಹಾಗೂ ಆಚರಣೆಗಳು ಮಹಿಳೆಯನ್ನು ಶಿಕ್ಷಣದಿಂದ ದೂರವೇ ಇಟ್ಟಿದ್ದವು. ಶಿಕ್ಷಣ ಪಡೆದ ಮಹಿಳೆಯನ್ನು ಅಶಿಕ್ಷಿತ ಮಹಿಳೆಗೆ ಹೋಲಿಸಿದಾಗ ಕೆಲವು ವಿಷಯಗಳಲ್ಲಾದರೂ ತನ್ನ ಮನೆಯ ಎಲ್ಲಾ ಜವಾಬ್ದಾರಿಗಳನ್ನು ಆದೇಶಿತ, ಸ್ವಯಂ ಮಾಡಲೇಬೇಕಾದ ಜವಾಬ್ದಾರಿ ತೆಗೆದುಕೊಳ್ಳುವುದರ ಜೊತೆಗೆ ಆರ್ಥಿಕ ಚಟುವಟಿಕೆಗಳ ನಿರ್ವಹಣೆ ಮಾಡಲು ಸಾಧ್ಯವೆನ್ನಲಾಗಿದೆ.

ಯಾವುದೇ ರಾಜ್ಯ ಅಥವಾ ರಾಷ್ಟ್ರ ಪ್ರಗತಿಗೆ ಅಲ್ಲಿಯ ಶಿಕ್ಷಣ ಕ್ರಮವೇ ಕಾರಣವಾಗಿದೆ. ಶಿಕ್ಷಣವು ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ವ್ಯಕ್ತಿತ್ವವನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಳ್ಳಲು ಮತ್ತು ಉತ್ತಮ ಪ್ರಜೆಯಾಗಿ ಬಾಳಲು ಅತಿ ಅವಶ್ಯಕವಾಗಿದೆ. ಮಗು ಹುಟ್ಟುವಾಗ ಸ್ವತಂತ್ರವಾಗಿ ಹುಟ್ಟುತ್ತದೆ. ಆದರೆ ಸಮಾಜದಲ್ಲಿ ಹುಟ್ಟಿದ ಮೇಲೆ ಜಾತಿ, ಧರ್ಮ, ಲಿಂಗಗಳಿಗೆ ಸಂಬಂಧಿಸಿದಂತೆ ತಾನು ಯಾವ ಕುಟುಂಬದ ವ್ಯವಸ್ಥೆಯಲ್ಲಿ ಹುಟ್ಟಿರುತ್ತಾನೋ ಅದೇ ಕುಟುಂಬದ ಪ್ರತಿಯೊಂದು ಆಚರಣೆಗಳನ್ನು ವಿವೇಚನೆ ಇಲ್ಲದೆ ಚಾಚು ತಪ್ಪದೇ ಎಷ್ಟರಮಟ್ಟಿಗೆ ಪಾಲಿಸುತ್ತಾನೆ. ಇದಕ್ಕೆ ಅಜ್ಞಾನದ ಬಂಧನವೆ ಕಾರಣ ಎನ್ನಬಹುದು. ಇಂತಹ ಅಜ್ಞಾನದ ಬಂಧನದಿಂದ ಮುಕ್ತಗೊಳಿಸಿ ಮಾನವೀಯ ವರ್ತನೆಯನ್ನು ಕಲಿಸಿ ಉತ್ತಮ ಪ್ರವೃತ್ತಿಗಳನ್ನು ಬೆಳೆಸುವಂತೆ ಮಾಡುವುದೇ ಶಿಕ್ಷಣ.

ಮಹಿಳೆ ಕಲಿಯುವುದು ಯಾರಿಗೂ ಬೇಡವಾದ ವಿಷಯವಾಗಿತ್ತು. ಅವಳಿಗೆ ಈಗಾಗಲೇ ಬುದ್ಧಿ ಕಡಿಮೆ, ಕಲಿತು ಇವಳೇನು ಮಾಡುತ್ತಾಳೆ. ಈ ಮೊದಲು ಅಂದರೆ ಹಿಂದಿನ ಕಾಲದಲ್ಲಿ "ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿತೆಂದು" ಅವಳಿಗಾಗಿ ಖರ್ಚು ಮಾಡುವುದು ಅನಾವಶ್ಯಕ ಎಂದು ತಿಳಿಯಲಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರ ಹೆಣ್ಣು ಮಕ್ಕಳಿಗಾಗಿ ಅನೇಕ ಯೋಜನೆಗಳನ್ನು ತರುವುದರ ಮೂಲಕ ಉದಾ:- ಭಾಗ್ಯ ಲಕ್ಷ್ಮೀ ಯೋಜನೆ. ಹೆಣ್ಣು ಹುಟ್ಟಿದರೆ

ಹುಣ್ಣು ಹುಟ್ಟಿತೆಂಬ ಭಾವನೆ ಕಡಿಮೆಯಾಗುತ್ತಿದೆ. ಎಷ್ಟು ಕಲಿತರು ಗಂಡನ ಮನೆಗೆ ಹೋಗುವಳೆಂದು ಮನೆಯ ಕೆಲಸ ಮಾಡಿ ಒಳ್ಳೆಯ ಗೃಹಿಣಿಯಾದರೆ ಸಾಕೆಂಬ ನೀತಿ ಪಾಠವಿದೆ. ಆದರೂ ಕೆಲವು ಮಹಿಳೆಯರು ಶಿಕ್ಷಣದೆಡೆಗೆ ಒಲವು ತೋರುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಇಂದಿನ ಆಧುನಿಕ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳನ್ನು ನೋಡಿದಾಗ ಹೆಣ್ಣು ಮಕ್ಕಳಿಗೆ ಶಿಕ್ಷಣಕ್ಕಾಗಿ ಹಣ ಖರ್ಚು ಮಾಡುವುದು ಕುಟುಂಬ ಮತ್ತು ಸಮಾಜ ನಂಬಿರುವಂತೆ ಅಭಿವೃದ್ಧಿಯ ಒಂದು ಭಾಗವೆಂದು ಅಭಿಪ್ರಾಯ ಪಡಲಾಗಿದೆ.

ಉಳಿತಾಯ, ಖರ್ಚು, ಆರೋಗ್ಯದ ಸಮಸ್ಯೆಗಳು, ಹೆಚ್ಚಿನ ಸ್ಥಾನಮಾನ ಗಳಿಸುವ ಆಸೆ, ವ್ಯಕ್ತಿತ್ವ ಚಲನೆ ಇದೆಲ್ಲದರ ಬಗ್ಗೆ ಸಾಕ್ಷರತೆಯ ಅರಿವು ಮೂಡಿಸುವುದಕ್ಕಿಂತ ಮೇಲಾಗಿ ಶಿಕ್ಷಣದ ಒಂದು ಪ್ರಮುಖವಾದ ಕಾರ್ಯವೆಂದರೆ ಕಲಿಯುವವರಿಗೆ ಕಲಿತವರಿಂದ ಅನುಭವಗಳನ್ನು ಹಂಚಲು ಸಹಾಯ ಮಾಡುತ್ತದೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಹುಡುಗಿಯರು ಋತುಮತಿ ಆದ ಮೇಲೆ ಹೊರಗಡೆ ಹೋಗಲು ಹೆಚ್ಚಿನ ಸಂಖ್ಯೆ ತಂದೆ-ತಾಯಿಗಳು ಅನುಮತಿ ನೀಡುವುದಿಲ್ಲ. ಹಾಗೆಯೇ ಉದ್ಯೋಗದ ವಿಷಯದಲ್ಲಿ ಸಹ ಮಹಿಳೆಯರು ಹೊರಗಡೆ ಹೋಗಿ ಉದ್ಯೋಗ ಮಾಡಿ ಹಣ ಗಳಿಸುವ ಅವಶ್ಯಕತೆಯಿಲ್ಲವೆಂದು ಮನೆ ನೋಡಿಕೊಂಡರೆ ಸಾಕು. ಹೆಣ್ಣು ದುಡಿಯಲಿಕ್ಕೆ ಹೊರಗೆ ಹೋಗುವುದನ್ನು, ದುಡಿಯುವುದೇನು, ಗಳಿಸುವುದೇನು, ಗಳಿಸಿ ತಂದಿರುವುದರಿಂದ ಮನೆ ನಡೆಯುತ್ತೆ ಅನ್ನೋದು ಈಗಲೂ ಗ್ರಾಮೀಣ ಪ್ರದೇಶದ ಜನರ ಅಭಿಪ್ರಾಯವಾಗಿದೆ.

ಸಾಕ್ಷರತೆಯು ಸಮಾಜದ ಬದಲಾವಣೆಯಲ್ಲಿ ಪೂರಕವಾದ ಮತ್ತು ಪ್ರಮುಖವಾದ ಸಾಧನವಾಗಿದೆ. ಆರಂಭಿಕ ಶಿಕ್ಷಣವು ಗ್ರಾಮೀಣ ಸಮುದಾಯದ ಭಾಗಗಳಲ್ಲಿರುವ ಕೂಲಿ-ಕಾರ್ಮಿಕರು, ಒಕ್ಕಲಿಗರು, ಕುಶಲಕರ್ಮಿಗಳು, ಹಾಲು, ಹಣ್ಣು, ತರಕಾರಿ ಮಾರುವುದು, ಸಣ್ಣಪುಟ್ಟ ವ್ಯಾಪಾರ ಮಾಡುವರು. ಗೃಹಿಣಿಯರಿಗೆ ಅಂಗಡಿಗಳು, ಬಸ್ಸಿನ ನಾಮಫಲಕಗಳನ್ನು ಓದಲು, ಕ್ರಿಮಿನಾಶಕ ಔಷಧಿಗಳ ಹೆಸರುಗಳನ್ನು ಓದಲು, ರಶೀದಿಗಳ ಬಗ್ಗೆ ತಿಳಿದುಕೊಳ್ಳಲು, ಎಣಿಕೆ ಮಾಡಲು ಪತ್ರ ಓದಲಿಕ್ಕೆ ಮತ್ತು ಬರೆಯಲಿಕ್ಕೆ ಹಾಗೂ ಗ್ರಾಮೀಣ ಜನರ ದೈನಂದಿನ ಕೆಲಸ ಕಾರ್ಯಗಳನ್ನು ಅರ್ಥ ಮಾಡಿಕೊಂಡು ಜವಾಬ್ದಾರಿಯುತವಾಗಿ ಪ್ರಾಮಾಣಿಕತೆಯಿಂದ, ದಕ್ಷತೆಯಿಂದ ಜೀವನ ನಿರ್ವಹಿಸಲಿಕ್ಕೆ ಇದು ಸಹಕಾರಿಯಾಗಿದೆ.

ದೇಶದ ಅಭಿವೃದ್ಧಿಯನ್ನು ನಿರ್ಧರಿಸುವಲ್ಲಿ ಶಿಕ್ಷಣವು ಒಂದು ಪ್ರಮುಖ ಅಂಶವಾಗಿದೆ. ದೇಶದ ಜನಸಂಖ್ಯೆಯ ಅರ್ಧದಷ್ಟು ಜನರು ಮಹಿಳೆಯರಿದ್ದಾರೆ. ಆದರೆ ಭಾರತೀಯ ಸಂದರ್ಭದಲ್ಲಿ ಮಹಿಳೆಯನ್ನು ಕೇವಲ ಒಂದು ಭೋಗದ ವಸ್ತುವಾಗಿ ಪರಿಗಣಿಸುವುದು ಹೆಚ್ಚು. ಮಹಿಳೆಯನ್ನು ಕೇವಲ ತನ್ನ ಅಡಿಯಾಳಾಗಿ ನೋಡುವ ಪರಿಪಾಠವನ್ನು ಪುರುಷ ವರ್ಗ ಅನುಸರಿಸುತ್ತಾ ಬಂದಿದೆ. ಶಿಕ್ಷಣವು ಮಾನವನ ಶಕ್ತಿಯ ಪರ್ಯಾಯ ಪದವಾಗಿ ಮಾರ್ಪಟ್ಟರೆ ಶಕ್ತಿ ಹೀನರಿಗೆ ಮಾನಸಿಕ ಸ್ಥೈರ್ಯವನ್ನು ನೀಡುವ ಶಕ್ತಿಯು ಶಿಕ್ಷಣಕ್ಕಿದೆ ಎಂದು ಹೇಳಬಹುದು.

ಯಾವ ದೇಶ ಶಿಕ್ಷಣದಲ್ಲಿ ಪರಿಪೂರ್ಣತೆಯನ್ನು ಹೊಂದಿರುತ್ತದೆಯೋ ಅಂತಹ ದೇಶವೂ ಸಾರ್ವಾಂಗೀಣವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗುವುದು. ಈ ನಿಟ್ಟಿನಲ್ಲಿ ಸರ್ಕಾರವು ಹಲವು ಹತ್ತು ಯೋಜನೆಗಳನ್ನು ರೂಪಿಸಿ ಚಲನೆಗೆ ತಂದಿದೆ. ಇಷ್ಟಾಗಿಯೂ ಭಾರತವು ಶೇಕಡ ೧೦೦ರಷ್ಟು ಸಾಕ್ಷರತೆಯ ಪ್ರಮಾಣವನ್ನು ತಲುಪಲಾಗುತ್ತಿಲ್ಲ. ಆದರೆ ಸಂತೋಷದ ವಿಚಾರವೆಂದರೆ ಸರ್ಕಾರದ ಯೋಜನೆಗಳಿಗೆ ಪೂರಕವಾಗಿ ವರ್ಷದಿಂದ ವರ್ಷಕ್ಕೆ ಸಾಕ್ಷರತೆಯ ಪ್ರಮಾಣ ಅಧಿಕವಾಗುತ್ತಿದೆ. ಆದರೆ ಗುಣಮಟ್ಟದ ಶಿಕ್ಷಣವನ್ನು ನೀಡುವಲ್ಲಿ ಶಿಕ್ಷಣ ವ್ಯವಸ್ಥೆ ಹಿಂದೆ ಬೀಳುತ್ತಿದೆ.

ಗ್ರಾಮೀಣ ಸಮುದಾಯದಲ್ಲಿ ಮಹಿಳಾ ಶಿಕ್ಷಣಾವಕಾಶಗಳ ಸಮಾನ ಬಳಕೆಗೆ ಅಡ್ಡಿಬರುವ ಪ್ರಮುಖ ಅಂಶಗಳೆಂದರೆ ಬಡತನ, ಅಜ್ಞಾನ, ಮೌಢ್ಯ ಹಾಗೂ ಸ್ತ್ರೀ ಶಿಕ್ಷಣವನ್ನು ಕುರಿತಂಥ ಸಾಮಾಜಿಕ ಧೋರಣೆ. ಅನೇಕ ಹೆಣ್ಣು ಮಕ್ಕಳ ಜೀವನದಲ್ಲಿ ಈ ನಾಲ್ಕು ಅಂಶಗಳು ಅವರ ಶೈಕ್ಷಣಿಕ ಪ್ರಗತಿಗೆ ಬಲವಾದ ಗದಾಪ್ರಹಾರವನ್ನು ನೀಡುತ್ತವೆ. ಅದರಲ್ಲಿ ಕುಟುಂಬವು ಲಿಂಗಾಧಾರಿತ ಶೈಕ್ಷಣಿಕ ಅಸಮಾನತೆಯನ್ನು ಸೃಷ್ಟಿಸುವ ಮೊದಲನೆಯ ಮೂಲ ಎಂದು ಹೇಳಿದರು ತಪ್ಪಾಗಲಾರದು. ಕುಟುಂಬ ಆರ್ಥಿಕವಾಗಿ ಅನುಕೂಲಕರವಾದ ಪರಿಸ್ಥಿತಿಯಲ್ಲಿರುವಾಗಲೇ ಅನೇಕ ಪೋಷಕರು ಹೆಣ್ಣು ಮಕ್ಕಳ ಶಿಕ್ಷಣಕ್ಕಿಂತ ಅವರ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವಂಥ ಪರಿಸ್ಥಿತಿ ಇರುವಾಗ ಅನೇಕ ಪೋಷಕರು ಬಡ ಕುಟುಂಬಗಳ ಪರಿಸ್ಥಿತಿಯ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಅವರಲ್ಲಿರುವ ಸನಾತನ ಕಲ್ಪನೆಯೊಂದು ವೈಚಾರಿಕತೆ ಹಾದಿಯನ್ನು ಬದಲಾಯಿಸಿದೆ. ಗಂಡು ಮಗು ಭವಿಷ್ಯದ ಎಲ್ಲ ಸಮಸ್ಯೆಗಳಿಗೂ ಪರಿಹಾರ ನೀಡಬಲ್ಲಂಥವನು ಎಂಬ ಭ್ರಮೆಗೆ ಬಲಿಯಾಗಿ ತಮಗಿರುವ ನಿಯಮಿತ ಸಂಪನ್ಮೂಲಗಳನ್ನು ಗಂಡು ಮಕ್ಕಳ ಶಿಕ್ಷಣದ ಮೇಲೆ ವ್ಯಯ ಮಾಡುವ ಕುಟುಂಬಗಳು ಅನೇಕ ಇವೆ.

## ಕೋಷ್ಟಕ-೧

ಹಿರಿಯ ಪ್ರಾಥಮಿಕ ಪಾಠಶಾಲೆ ೧ನೇ ತರಗತಿಯಿಂದ ೭ನೇ ತರಗತಿಯ ತಮಟಕಲ್ಲಿನ ವಿವಿಧ ವರ್ಷಗಳ ವಿದ್ಯಾರ್ಥಿಗಳ ದಾಖಲಾತಿ ಮತ್ತು ಹಾಜರಾತಿ ಸಂಖ್ಯೆ

| ಶೈಕ್ಷಣಿಕ ವರ್ಷ | ದಾಖಲಾತಿ | ಹಾಜರಾತಿ |
|---|---|---|
| ೨೦೦೭-೨೦೦೮ | ೧೮೮ | ೧೮೮ |
| ೨೦೦೮-೨೦೦೯ | ೧೮೧ | ೧೮೧ |
| ೨೦೦೯-೨೦೧೦ | ೧೮೮ | ೧೮೮ |
| ೨೦೧೦-೨೦೧೧ | ೧೮೩ | ೧೮೩ |
| ೨೦೧೧-೨೦೧೨ | ೨೦೦ | ೨೦೦ |
| ೨೦೧೨-೨೦೧೩ | ೧೬೭ | ೧೬೭ |
| ೨೦೧೩-೨೦೧೪ | ೧೬೧ | ೧೬೧ |
| ೨೦೧೪-೨೦೧೫ | ೧೫೧ | ೧೫೧ |
| ೨೦೧೫-೨೦೧೬ | ೧೪೫ | ೧೪೫ |
| ೨೦೧೬-೨೦೧೭ | ೧೪೦ | ೧೪೦ |
| ೨೦೧೭-೨೦೧೮ | ೧೪೦ | ೧೪೦ |

೨೦೦೭-೨೦೦೮ನೇ ವರ್ಷದಿಂದ ಇಂದಿನವರೆಗಿನ ಅಂದರೆ ೨೦೧೭-೧೮ನೇ ಸಾಲಿನವರೆಗಿನ ವಿದ್ಯಾರ್ಥಿಗಳ ದಾಖಲಾತಿ ಮತ್ತು ಹಾಜರಾತಿ ನೋಡಿದರೆ ಇವೆರಡರ ಮಧ್ಯೆ ಸಾಕಷ್ಟು ವ್ಯತ್ಯಾಸವಿದೆ. ಶೈಕ್ಷಣಿಕ ವರ್ಷದ ಮಧ್ಯದಲ್ಲಿ ಶಾಲೆ ಬಿಟ್ಟ ಯಾವುದೇ ಉದಾಹರಣೆಗಳು ಇಲ್ಲ. ಆದರೆ ಅಂದಿನಿಂದ ಇಂದಿನವರೆಗೆ ಪ್ರತಿವರ್ಷದಿಂದ ವರ್ಷಕ್ಕೆ ದಾಖಲಾತಿ ಸಂಖ್ಯೆ ಕಡಿಮೆಯಾಗುತ್ತಿದೆ. ೨೦೦೭-೨೦೦೮ರಲ್ಲಿ(ಕೋಷ್ಟಕ ಒಂದನ್ನು ನೋಡಿ) ದಾಖಲಾದ ಶಾಲೆಯ ಒಟ್ಟು ಮಕ್ಕಳ ಸಂಖ್ಯೆ ೧೮೮ ಮಕ್ಕಳು, ೨೦೧೭-೨೦೧೮ರಲ್ಲಿ ದಾಖಲಾದ ಶಾಲೆಯ ಮಕ್ಕಳ ಸಂಖ್ಯೆ ೧೪೦ಕ್ಕೆ ಇಳಿದಿದೆ. ಸರ್ಕಾರಿ ಶಾಲೆಯಲ್ಲಿ ಓದುವ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ.

**ಕೋಷ್ಟಕ-೨**

**೨೦೦೭-೨೦೦೮ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ**

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೭ | ೯ | ೧೬ | ೮ | ೬ | ೧೪ | ೩ | ೧ | ೪ |
| ೨ನೇ | ೩ | ೨ | ೫ | ೫ | ೬ | ೧೧ | ೪ | ೨ | ಸ೬ |
| ೩ನೇ | ೨ | ೧೨ | ೧೪ | ೭ | ೫ | ೧೨ | ೨ | ೨ | ೪ |
| ೪ನೇ | ೨ | ೨ | ೪ | ೧೦ | ೭ | ೧೭ | ೩ | ೨ | ೫ |
| ೫ನೇ | ೪ | ೪ | ೮ | ೫ | ೮ | ೧೩ | ೨ | ೧ | ೩ |
| ೬ನೇ | ೭ | ೨ | ೯ | ೨ | ೧ | ೩ | ೨ | ೩ | ೫ |
| ೭ನೇ | ೫ | ೮ | ೧೩ | ೧೦ | ೮ | ೧೮ | ೨ | ೨ | ೪ |
| ಒಟ್ಟು | ೩೦ | ೩೯ | ೬೯ | ೪೭ | ೪೧ | ೮೮ | ೧೮ | ೧೩ | ೩೧ |

## ೨೦೦೮-೨೦೦೯ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೭ | ೪ | ೧೧ | ೫ | ೭ | ೧೨ | ೪ | ೨ | ೬ |
| ೨ನೇ | ೭ | ೬ | ೧೩ | ೭ | ೫ | ೧೨ | ೧ | ೧ | ೨ |
| ೩ನೇ | ೫ | ೧ | ೬ | ೫ | ೬ | ೧೧ | ೪ | ೨ | ೬ |
| ೪ನೇ | ೨ | ೧೨ | ೧೪ | ೬ | ೫ | ೧೧ | ೨ | ೨ | ೪ |
| ೫ನೇ | ೨ | ೩ | ೫ | ೧೦ | ೭ | ೧೭ | ೩ | ೨ | ೫ |
| ೬ನೇ | ೪ | ೬ | ೧೦ | ೫ | ೬ | ೧೧ | ೨ | ೧ | ೩ |
| ೭ನೇ | ೭ | ೨ | ೯ | ೩ | ೫ | ೮ | ೨ | ೩ | ೫ |
| ಒಟ್ಟು | ೩೪ | ೩೪ | ೬೮ | ೪೧ | ೪೧ | ೮೨ | ೧೮ | ೧೩ | ೩೧ |

## ೨೦೦೯-೨೦೧೦ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೧೨ | ೬ | ೧೮ | ೮ | ೪ | ೧೨ | ೩ | ೧ | ೪ |
| ೨ನೇ | ೩ | ೪ | ೭ | ೪ | ೭ | ೧೧ | ೪ | ೨ | ೬ |
| ೩ನೇ | ೭ | ೬ | ೧೩ | ೭ | ೫ | ೧೨ | ೧ | ೧ | ೨ |
| ೪ನೇ | ೩ | ೨ | ೫ | ೬ | ೫ | ೧೧ | ೫ | ೨ | ೭ |
| ೫ನೇ | ೩ | ೧೨ | ೧೫ | ೬ | ೫ | ೧೧ | ೧ | ೨ | ೩ |
| ೬ನೇ | ೩ | ೪ | ೭ | ೯ | ೬ | ೧೫ | ೨ | ೩ | ೫ |
| ೭ನೇ | ೫ | ೪ | ೯ | ೫ | ೭ | ೧೨ | ೨ | ೧ | ೩ |
| ಒಟ್ಟು | ೩೬ | ೩೮ | ೭೪ | ೪೫ | ೩೯ | ೮೪ | ೧೮ | ೧೨ | ೩೦ |

## ೨೦೧೦-೨೦೧೧ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೪ | ೧ | ೫ | ೭ | ೧೦ | ೧೭ | – | ೧ | ೧ |
| ೨ನೇ | ೯ | ೬ | ೧೫ | ೭ | ೫ | ೧೨ | ೨ | ೧ | ೩ |
| ೩ನೇ | ೪ | ೪ | ೮ | ೪ | ೭ | ೧೧ | ೪ | ೨ | ೬ |
| ೪ನೇ | ೭ | ೬ | ೧೩ | ೬ | ೫ | ೧೧ | ೧ | ೧ | ೨ |
| ೫ನೇ | ೪ | ೨ | ೬ | ೬ | ೫ | ೧೧ | ೫ | ೨ | ೭ |
| ೬ನೇ | ೨ | ೧೩ | ೧೫ | ೮ | ೫ | ೧೩ | ೧ | ೧ | ೨ |
| ೭ನೇ | ೩ | ೩ | ೬ | ೯ | ೬ | ೧೫ | ೧ | ೩ | ೪ |
| **ಒಟ್ಟು** | **೩೩** | **೩೫** | **೬೮** | **೪೭** | **೪೩** | **೯೦** | **೧೪** | **೧೧** | **೨೫** |

## ೨೦೧೧-೨೦೧೨ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೮ | ೧೨ | ೨೦ | ೫ | ೪ | ೯ | ೨ | ೬ | ೮ |
| ೨ನೇ | ೨ | ೧ | ೩ | ೫ | ೧೦ | ೧೫ | ೦ | ೧ | ೧ |
| ೩ನೇ | ೮ | ೩ | ೧೧ | ೬ | ೬ | ೧೨ | ೨ | ೧ | ೩ |
| ೪ನೇ | ೪ | ೪ | ೮ | ೪ | ೧ | ೫ | ೩ | ೧೩ | ೧೬ |
| ೫ನೇ | ೭ | ೭ | ೧೪ | ೭ | ೫ | ೧೨ | ೧ | ೧ | ೨ |
| ೬ನೇ | ೮ | ೧ | ೯ | ೭ | ೫ | ೧೨ | ೨ | ೨ | ೪ |
| ೭ನೇ | ೭ | ೧೩ | ೨೦ | ೮ | ೫ | ೧೩ | ೧ | ೨ | ೩ |
| **ಒಟ್ಟು** | **೪೪** | **೪೧** | **೮೫** | **೪೨** | **೩೬** | **೭೮** | **೧೧** | **೨೬** | **೩೭** |

೨೦೧೨-೨೦೧೩ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೫ | ೭ | ೧೨ | ೩ | ೧ | ೪ | ೧ | ೦ | ೧ |
| ೨ನೇ | ೮ | ೮ | ೧೬ | ೪ | ೪ | ೮ | ೨ | ೬ | ೮ |
| ೩ನೇ | ೧ | ೧ | ೨ | ೬ | ೧೦ | ೧೬ | ೦ | ೧ | ೧ |
| ೪ನೇ | ೮ | ೪ | ೧೨ | ೬ | ೬ | ೧೨ | ೨ | ೧ | ೩ |
| ೫ನೇ | ೪ | ೫ | ೯ | ೪ | ೭ | ೧೧ | ೩ | ೧ | ೪ |
| ೬ನೇ | ೮ | ೭ | ೧೫ | ೬ | ೫ | ೧೧ | ೧ | ೧ | ೨ |
| ೭ನೇ | ೧ | ೧ | ೨ | ೮ | ೫ | ೧೩ | ೩ | ೨ | ೫ |
| ಒಟ್ಟು | ೩೪ | ೩೩ | ೬೭ | ೩೭ | ೩೮ | ೭೫ | ೧೨ | ೧೨ | ೨೪ |

೨೦೧೩-೨೦೧೪ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೪ | ೭ | ೧೧ | ೬ | ೩ | ೯ | ೧ | ೧ | ೨ |
| ೨ನೇ | ೪ | ೫ | ೯ | ೩ | ೧ | ೪ | ೧ | ೦ | ೧ |
| ೩ನೇ | ೬ | ೮ | ೧೪ | ೩ | ೫ | ೮ | ೨ | ೬ | ೮ |
| ೪ನೇ | ೨ | ೧ | ೩ | ೫ | ೯ | ೧೪ | ೦ | ೧ | ೧ |
| ೫ನೇ | ೮ | ೪ | ೧೨ | ೬ | ೬ | ೧೨ | ೩ | ೧ | ೪ |
| ೬ನೇ | ೩ | ೪ | ೭ | ೪ | ೮ | ೧೨ | ೨ | ೧ | ೩ |
| ೭ನೇ | ೭ | ೭ | ೧೪ | ೫ | ೪ | ೯ | ೦ | ೧ | ೧ |
| ಒಟ್ಟು | ೩೪ | ೩೬ | ೭೦ | ೩೨ | ೩೬ | ೬೮ | ೯ | ೧೧ | ೨೦ |

## ೨೦೧೪-೨೦೧೫ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೫ | ೬ | ೧೧ | ೩ | ೫ | ೮ | ೧ | ೨ | ೩ |
| ೨ನೇ | ೨ | ೮ | ೧೦ | ೬ | ೩ | ೯ | ೧ | ೧ | ೨ |
| ೩ನೇ | ೭ | ೬ | ೧೩ | ೩ | ೧ | ೪ | ೧ | ೦ | ೧ |
| ೪ನೇ | ೭ | ೫ | ೧೨ | ೩ | ೫ | ೮ | ೨ | ೮ | ೧೦ |
| ೫ನೇ | ೩ | ೧ | ೪ | ೫ | ೯ | ೧೪ | ೦ | ೧ | ೧ |
| ೬ನೇ | ೮ | ೫ | ೧೩ | ೪ | ೪ | ೮ | ೩ | ೧ | ೪ |
| ೭ನೇ | ೨ | ೩ | ೫ | ೩ | ೬ | ೯ | ೧ | ೧ | ೨ |
| ಒಟ್ಟು | ೩೪ | ೩೪ | ೬೮ | ೨೭ | ೩೩ | ೬೦ | ೯ | ೧೪ | ೨೩ |

## ೨೦೧೫-೨೦೧೬ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೪ | ೪ | ೮ | ೨ | ೩ | ೫ | ೧ | ೧ | ೨ |
| ೨ನೇ | ೫ | ೬ | ೧೧ | ೪ | ೫ | ೯ | ೧ | ೨ | ೩ |
| ೩ನೇ | ೨ | ೭ | ೯ | ೬ | ೩ | ೯ | ೧ | ೧ | ೨ |
| ೪ನೇ | ೭ | ೪ | ೧೧ | ೩ | ೧ | ೪ | ೧ | ೦ | ೧ |
| ೫ನೇ | ೬ | ೬ | ೧೨ | ೪ | ೫ | ೯ | ೨ | ೭ | ೯ |
| ೬ನೇ | ೨ | ೧ | ೩ | ೫ | ೭ | ೧೨ | ೦ | ೧ | ೧ |
| ೭ನೇ | ೭ | ೫ | ೧೨ | ೪ | ೫ | ೯ | ೩ | ೧ | ೪ |
| ಒಟ್ಟು | ೩೩ | ೩೩ | ೬೬ | ೨೮ | ೨೯ | ೫೭ | ೯ | ೧೩ | ೨೨ |

## ೨೦೧೬-೨೦೧೭ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೬ | ೬ | ೧೨ | ೩ | ೮ | ೧೧ | ೨ | ೩ | ೫ |
| ೨ನೇ | ೪ | ೪ | ೮ | ೨ | ೩ | ೫ | ೧ | ೧ | ೨ |
| ೩ನೇ | ೫ | ೬ | ೧೧ | ೪ | ೫ | ೯ | ೧ | ೨ | ೩ |
| ೪ನೇ | ೪ | ೭ | ೧೧ | ೭ | ೪ | ೧೧ | ೧ | ೧ | ೨ |
| ೫ನೇ | ೭ | ೪ | ೧೧ | ೩ | ೧ | ೪ | ೧ | ೦ | ೧ |
| ೬ನೇ | ೬ | ೨ | ೮ | ೪ | ೩ | ೭ | ೦ | ೪ | ೪ |
| ೭ನೇ | ೧ | ೧ | ೨ | ೫ | ೭ | ೧೨ | ೦ | ೧ | ೧ |
| ಒಟ್ಟು | ೩೩ | ೩೦ | ೬೩ | ೨೮ | ೩೧ | ೫೯ | ೬ | ೧೨ | ೧೮ |

## ೨೦೧೭-೨೦೧೮ನೇ ಸಾಲಿನ ೧ ರಿಂದ ೭ನೇ ತರಗತಿಯವರೆಗಿನ ವಿವಿಧ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಓಬಿಸಿ | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ನೇ | ೨ | ೨ | ೪ | ೪ | ೫ | ೯ | ೨ | ೨ | ೪ |
| ೨ನೇ | ೫ | ೮ | ೧೩ | ೩ | ೫ | ೮ | ೨ | ೩ | ೫ |
| ೩ನೇ | ೪ | ೪ | ೮ | ೩ | ೩ | ೬ | ೧ | ೧ | ೨ |
| ೪ನೇ | ೫ | ೬ | ೧೧ | ೫ | ೫ | ೧೦ | ೧ | ೨ | ೩ |
| ೫ನೇ | ೩ | ೭ | ೧೦ | ೭ | ೪ | ೧೧ | ೧ | ೦ | ೧ |
| ೬ನೇ | ೫ | ೩ | ೮ | ೪ | ೩ | ೭ | – | – | – |
| ೭ನೇ | ೬ | ೨ | ೮ | ೪ | ೩ | ೭ | – | ೪ | ೪ |
| ಒಟ್ಟು | ೩೦ | ೩೨ | ೬೨ | ೩೦ | ೨೮ | ೫೮ | ೭ | ೧೨ | ೯ |

## ಕೋಷ್ಟಕ-೩

### ೨೦೦೮-೨೦೦೯ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಅಲ್ಪಸಂಖ್ಯಾತರು | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೪ | ೭ | ೧೧ | ೬ | ೬ | ೧೨ | ೧ | ೫ | ೬ |
| ೯ನೇ | ೫ | ೧೧ | ೧೬ | ೬ | ೩ | ೯ | – | – | – |
| ೧೦ನೇ | ೫ | ೫ | ೧೦ | ೭ | ೬ | ೧೩ | – | ೧ | ೧ |
| ಒಟ್ಟು | ೧೪ | ೨೩ | ೩೭ | ೧೯ | ೧೫ | ೩೪ | ೧ | ೬ | ೭ |

### ೨೦೦೯-೨೦೧೦ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಅಲ್ಪಸಂಖ್ಯಾತರು | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೪ | ೩ | ೭ | ೨ | ೧೩ | ೧೫ | – | ೧ | ೧ |
| ೯ನೇ | ೪ | ೭ | ೧೧ | ೬ | ೬ | ೧೨ | ೧ | ೫ | ೬ |
| ೧೦ನೇ | ೫ | ೧೧ | ೧೬ | ೬ | ೩ | ೯ | – | – | – |
| ಒಟ್ಟು | ೧೩ | ೨೧ | ೩೪ | ೧೪ | ೨೨ | ೩೬ | ೧ | ೬ | ೭ |

### ೨೦೧೦-೨೦೧೧ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಅಲ್ಪಸಂಖ್ಯಾತರು | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೫ | ೧೧ | ೧೬ | ೪ | ೮ | ೧೨ | – | ೧ | ೧ |
| ೯ನೇ | ೪ | ೩ | ೭ | ೨ | ೧೩ | ೧೫ | – | ೫ | ೫ |
| ೧೦ನೇ | ೪ | ೭ | ೧೧ | ೬ | ೬ | ೧೨ | ೧ | ೫ | ೬ |
| ಒಟ್ಟು | ೧೩ | ೨೧ | ೩೪ | ೧೨ | ೨೭ | ೩೯ | ೧ | ೧೧ | ೧೨ |

೨೦೧೧-೨೦೧೨ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಅಲ್ಪಸಂಖ್ಯಾತರು | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೬ | ೨ | ೮ | ೯೯ | ೧೮ | ೭ | – | ೭ | |
| ೯ನೇ | ೬ | ೧೧ | ೧೭ | ೫೭ | ೧೨ | – | ೧ | ೧ | |
| ೧೦ನೇ | ೪ | ೩ | ೭ | ೨೧೩ | ೧೫ | – | ೧ | ೧ | |
| ಒಟ್ಟು | ೧೬ | ೧೬ | ೩೨ | ೧೬ | ೨೯ | ೪೫ | ೨ | ೨ | ೪ |

೨೦೧೨-೨೦೧೩ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಅಲ್ಪಸಂಖ್ಯಾತರು | | |
|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೬ | ೮ | ೧೪ | ೬ | ೯ | ೧೫ | – | – | ೦ |
| ೯ನೇ | ೬ | ೨ | ೮ | ೯ | ೯ | ೧೮ | ೨ | – | ೨ |
| ೧೦ನೇ | ೫ | ೧೧ | ೧೬ | ೪ | ೮ | ೧೨ | – | ೧ | ೧ |
| ಒಟ್ಟು | ೧೭ | ೨೧ | ೩೮ | ೧೯ | ೨೬ | ೪೫ | ೨ | ೧ | ೩ |

## ೨೦೧೩-೨೦೧೪ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಸಮಾನ್ಯ ವರ್ಗ | | | ಓಬಿಸಿ | | |
|---|---|---|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೬ | ೩ | ೯ | ೭ | ೬ | ೧೩ | ೧ | ೧ | ೧ | ೨ | – | ೨ |
| ೯ನೇ | ೬ | ೮ | ೧೪ | ೬ | ೯ | ೧೫ | – | – | – | – | – | – |
| ೧೦ನೇ | ೬ | ೨ | ೮ | ೯ | ೯ | ೧ | ೮ | – | – | – | ೨ | ೨ |
| ಒಟ್ಟು | ೧೮ | ೧೩ | ೩೧ | ೨೨ | ೨೪ | ೪೬ | ೧ | ೧ | ೧ | ೪ | – | ೪ |

## ೨೦೧೪-೨೦೧೫ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಸಾಮಾನ್ಯ ವರ್ಗ | | | ಓಬಿಸಿ | | |
|---|---|---|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೫ | ೮ | ೧೩ | ೫ | ೪ | ೯ | – | ೧ | ೧ | ೨ | ೧ | ೩ |
| ೯ನೇ | ೬ | ೩ | ೯ | ೭ | ೬ | ೧೩ | ೧ | ೧ | ೨ | ೨ | – | ೨ |
| ೧೦ನೇ | ೬ | ೮ | ೧೪ | ೬ | ೯ | ೧೫ | – | – | – | – | – | – |
| ಒಟ್ಟು | ೧೭ | ೧೯ | ೩೬ | ೧೮ | ೧೯ | ೩೭ | ೧ | ೨ | ೩ | ೪ | ೧ | ೫ |

## ೨೦೧೫-೨೦೧೬ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಸಾಮಾನ್ಯ ವರ್ಗ | | | ಓಬಿಸಿ | | |
|---|---|---|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೨ | ೧೦ | ೧೨ | ೩ | ೮ | ೧೧ | ೧ | ೧ | ೨ | ೨ | – | ೨ |
| ೯ನೇ | ೫ | ೮ | ೧೩ | ೫ | ೪ | ೯ | – | ೧ | ೧ | ೨ | ೧ | ೩ |
| ೧೦ನೇ | ೬ | ೩ | ೯ | ೭ | ೬ | ೧೩ | ೧ | ೧ | ೨ | ೨ | – | ೨ |
| ಒಟ್ಟು | ೧೨ | ೨೧ | ೩೪ | ೧೫ | ೧೮ | ೩೩ | ೨ | ೩ | ೫ | ೬ | ೧ | ೭ |

೦೧೬-೨೦೧೭ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಸಾಮಾನ್ಯ ವರ್ಗ | | | ಓಬಿಸಿ | | |
|---|---|---|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೩ | ೮ | ೧೧ | ೫ | ೬ | ೧೧ | ೧ | – | ೧ | – | – | – |
| ೯ನೇ | ೨ | ೧೦ | ೧೨ | ೩ | ೮ | ೧೧ | ೧ | ೧ | ೨ | ೨ | – | ೨ |
| ೧೦ನೇ | ೫ | ೮ | ೧೩ | ೫ | ೪ | ೯ | – | ೧ | ೧ | ೨ | ೧ | ೩ |
| ಒಟ್ಟು | ೧೦ | ೨೬ | ೩೬ | ೧೩ | ೧೮ | ೩೧ | ೨ | ೨ | ೪ | ೪ | ೧ | ೫ |

೨೦೧೭-೨೦೧೮ನೇ ಸಾಲಿನ ಪ್ರೌಢ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ವಿವಿಧ ಸಮುದಾಯಗಳಲ್ಲಿ

| | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಸಾಮಾನ್ಯ ವರ್ಗ | | | ಓಬಿಸಿ | | |
|---|---|---|---|---|---|---|---|---|---|---|---|---|
| ತರಗತಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೮ನೇ | ೪ | ೬ | ೧೦ | ೩ ೭ | ೧೦ | ೪ | ೩ | ೭ | – | | – | – |
| ೯ನೇ | ೩ | ೮ | ೧೧ | ೫ ೬ | ೧೧ | ೧ | – | ೧ | – | | – | – |
| ೧೦ನೇ | ೨ | ೧೦ | ೧೨ | ೩ ೮ | ೧೧ | ೧ | ೧ | ೨ | ೨ | | ೧ | ೩ |
| ಒಟ್ಟು | ೯ | ೨೪ | ೩೩ | ೧೧ ೨೧ | ೩೨ | ೬ | ೪ | ೧೦ | ೨ | | ೧ | ೩ |

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಹತ್ತು ವರ್ಷಗಳ ಹಿಂದಿನ ದಾಖಲಾತಿಗೆ ಹೋಲಿಸಿದಾಗ ಶಾಲೆಯ ಒಟ್ಟು ಮಕ್ಕಳ ಪ್ರಮಾಣ ಹಂತ ಹಂತವಾಗಿ ನಿಧಾನವಾಗಿ ಕಡಿಮೆಯಾಗುತ್ತಿದೆ. ಶಾಲೆಯ ಒಟ್ಟು ಮಕ್ಕಳ ದಾಖಲಾತಿಯಲ್ಲಿ ಗಂಡು ಮಕ್ಕಳ ದಾಖಲಾತಿಗಿಂತ ಹೆಣ್ಣು ಮಕ್ಕಳ ದಾಖಲಾತಿ ಹೆಚ್ಚಾಗಿರುವುದು ಕಂಡು ಬರುತ್ತದೆ. ಆದರೆ ಇದು ಇತ್ತೀಚಿನ ದಿನಗಳಿಂದ ಹತ್ತು ವರ್ಷಗಳ ಹಿಂದೆ ಹೆಣ್ಣು ಮಕ್ಕಳನ್ನು ಅಷ್ಟಾಗಿ ಶಾಲೆಗೆ ಕಳುಹಿಸುತ್ತಿರಲಿಲ್ಲ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಹೆಣ್ಣುಮಕ್ಕಳ ಸಂಖ್ಯೆಗಿಂತ ಓಬಿಸಿ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆ ಪ್ರಮಾಣದಲ್ಲಿದೆ. ೨೦೦೮, ೨೦೧೫, ೨೦೧೬, ೨೦೧೭ನೇ ಸಾಲಿನಲ್ಲಿ ಪರಿಶಿಷ್ಟ ಪಂಗಡದ ಹೆಣ್ಣುಮಕ್ಕಳಿಗಿಂತ ಪರಿಶಿಷ್ಟ ಜಾತಿಯ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಪ್ರಸ್ತುತ ತಮಟಕಲ್ಲು ಗ್ರಾಮದಲ್ಲಿ ಎರಡು – ಮೂರು ವರ್ಷಗಳಿಂದ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಒತ್ತು ನೀಡುತ್ತಿರುವುದಾಗಿ ಗಂಡು ಮಕ್ಕಳು ಪ್ರೌಢ ಶಾಲೆಯವರೆಗೂ ಮಾತ್ರ ವಿದ್ಯಾಭ್ಯಾಸ ಮಾಡಿ ಆಟೋ ಓಡಿಸುವುದು ಅಥವಾ ಪಟ್ಟಣಕ್ಕೆ ಹತ್ತಿರವಾಗಿರುವುದರಿಂದ ಚಿತ್ರದುರ್ಗಕ್ಕೆ ಕಡ್ಲೆಬಟ್ಟಿ, ಹತ್ತಿಮಿಲ್, ಗಾರೆ ಕೆಲಸಕ್ಕೆ ದುಡಿಯಲು ಹೋಗುತ್ತಾರೆ. ಇವರಲ್ಲಿ ಓದುವ ಆಸಕ್ತಿ ಕಡಿಮೆ. ಇಲ್ಲಿ ಓಬಿಸಿ ಮಕ್ಕಳ ಸಂಖ್ಯೆ ಕಡಿಮೆ ಇದೆ. ಆದ ಮಾತ್ರಕ್ಕೆ ಇವರು ಓದುವುದಿಲ್ಲವೆಂದಲ್ಲ, ಇವರು ತಮ್ಮ ಮಕ್ಕಳನ್ನು ಚಿತ್ರದುರ್ಗದ ಖಾಸಗಿ ಶಾಲೆಗಳಿಗೆ ಕಳುಹಿಸಿ ಓದಿಸುವುದರಿಂದ ಓಬಿಸಿ ಮಕ್ಕಳ ಸಂಖ್ಯೆ ಕಡಿಮೆ ಇದೆ. ಆದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಹೆಣ್ಣು ಮಕ್ಕಳನ್ನು ಹೆಚ್ಚಾಗಿ ಶಾಲೆಗಳಿಗೆ ಕಳುಹಿಸುತ್ತಿರುವುದರಿಂದ ಇಲ್ಲಿನ ಹೆಣ್ಣು ಮಕ್ಕಳು ಶೈಕ್ಷಣಿಕವಾಗಿ ಮುಂದುವರೆದಿದ್ದಾರೆ (ಶೈಕ್ಷಣಿಕ ಪ್ರಗತಿ). ತಮಟಕಲ್ಲಿನ ಶಾಲೆ ೧೯೧೮ರಲ್ಲಿ ಪ್ರಾರಂಭವಾಗಿದೆ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಪ್ರಾರಂಭವಾಗಿ ೧೦೦ ವರ್ಷವಾಗಿದೆ. ಆದರೂ ಸಹ ಶಿಕ್ಷಣದ ಬಗ್ಗೆ ಆಸಕ್ತಿ ತೋರುತ್ತಿರುವುದು ಇತ್ತೀಚಿನ ದಿನಗಳಲ್ಲಿ. ಶೈಕ್ಷಣಿಕ ಪ್ರಗತಿಯಲ್ಲಿ ಇಷ್ಟೆಲ್ಲಾ ಅಡೆತಡೆಗಳಿದ್ದರೂ ಗ್ರಾಮದ ಶೈಕ್ಷಣಿಕ ಸಾಧನೆಯಲ್ಲೂ ಸ್ವಲ್ಪಮಟ್ಟಿಗೆ ಸಾಧನೆಗೈದ ವ್ಯಕ್ತಿಗಳಿದ್ದಾರೆ. ಇಂತಹ ಸಣ್ಣ ಗ್ರಾಮದಲ್ಲಿ ಜನಿಸಿದ ಅನೇಕರೂ ಹಲವಾರು ಅಡೆ-ತಡೆಗಳ ಮಧ್ಯೆಯು ಉಪನ್ಯಾಸಕರು, ಟೀಚರ್(ಶಿಕ್ಷಕರು), ಇಂಜಿನಿಯರ್ಸ್, ಲ್ಯಾಬ್ ಟೆಕ್ನಿಷಿಯನ್, ಪೊಲೀಸ್, ಶೂಶ್ರೂಷಕಿಯರು, ಬ್ಯಾಂಕ್ ಕೆಲಸಗಳಿಗೆ, ಲೈನ್ ಮ್ಯಾನ್, ಇನ್ನು ಕೆಲವರು ಇಂಜಿನಿಯರ್‌ಗಳು ಖಾಸಗಿ ಸಂಸ್ಥೆಗಳಲ್ಲಿ ದುಡಿಯುತ್ತಾರೆ. ಹೀಗೆ ಒಂದೊಂದು ಸಮುದಾಯದಲ್ಲಿ ಕೇವಲ ೩–೪ ಜನ ಮಾತ್ರ ಉದ್ಯೋಗಕ್ಕೆ ಹೋಗಿದ್ದಾರೆ.

ಸ್ತ್ರೀ ಪರವಾದ ನೆಲೆಯಲ್ಲಿ ಮಹಿಳೆಯನ್ನು ಕುರಿತಂತೆ ಸಾಹಿತ್ಯ, ಚರಿತ್ರೆ, ರಾಜಕಾರಣ ಮೊದಲಾದವುಗಳಲ್ಲಿ ಪ್ರಧಾನವಾಗಿ ಚರ್ಚಿಸಲಾಗುತ್ತಿದ್ದು, ಸಮಕಾಲೀನ ಸಾಹಿತ್ಯದ ಕಾಲಘಟ್ಟವನ್ನು ಸ್ತ್ರೀವಾದ, ಸ್ತ್ರೀಪರ ನಿಲುವು ಎಂದು ಕರೆಯುತ್ತಾರೆ. ಸ್ತ್ರೀಯು ನಾಲ್ಕು ಗೋಡೆಗಳ ಆಚೆ ಬಂದು ಹಲವು ಬಗೆಯ ಕಾರ್ಯಚಟುವಟಿಕೆಗಳಲ್ಲಿ ತೊಡಗಿದ್ದಾಳೆ. ಆದರೆ ಎಂದಾದರೂ ಆಕೆ ನವೀನ

ಬಗೆಯ ಸವಾಲುಗಳನ್ನು ಎದುರಿಸಬೇಕಾದರೆ ಒಂದು ಸಮಸ್ಯೆಯನ್ನು ತಡೆಯಲು ಪ್ರಯತ್ನಿಸಿ ಅದರಿಂದ ಮುಕ್ತಳಾದೆ ಎಂದು ಸ್ತ್ರೀಯ ಭಾವಿಸುವಂತಿಲ್ಲ. ಒಂದು ಸಮಸ್ಯೆ ಹೋಗಿ ಸ್ವಲ್ಪ ಅನುಕೂಲಗಳಾದರೂ ಅದಕ್ಕೆ ಹೊಂದಿಕೊಂಡಂತೆ ವಿವಿಧ ಬಗೆಯ ಹೊಸ ಸವಾಲುಗಳು ಎದುರಾಗುತ್ತವೆ. ಇಂತಹ ಸಂದಿಗ್ಧ ಸಮಕಾಲೀನ ಸಂದರ್ಭದಲ್ಲಿ ಮಹಿಳೆಯರು ಪುರುಷನ ಸರಿಸಮಾನವಾದ ಅವಕಾಶಗಳನ್ನು ತಮ್ಮದಾಗಿಸಿಕೊಳ್ಳುವಲ್ಲಿ ಅಥವಾ ಧಾರಣ ಮಾಡಿಕೊಳ್ಳುವಲ್ಲಿ ಶತಶತಮಾನದಿಂದಲೂ ವಿಫಲರಾಗುತ್ತಾ ಬಂದಿದ್ದಾರೆ. ಇದಕ್ಕೆ ಬಹುಮುಖ್ಯವಾದ ಕಾರಣವೆಂದರೆ ಪುರುಷ ಪ್ರಧಾನ್ಯ ಸಮಾಜದ ಒತ್ತಡಗಳು ಕಾರಣವಾಗಿವೆ.

**ಕೋಷ್ಟಕ-೪**

**ಪ್ರೌಢ ಶಾಲೆಯ ೧೦ನೇ ತರಗತಿಯ ವಿವಿಧ ವರ್ಷಗಳ ಫಲಿತಾಂಶ ಶೇಕಡವಾರುಗಳಲ್ಲಿ**

| ಶೈಕ್ಷಣಿಕ ವರ್ಷ | ಪರೀಕ್ಷೆಗೆ ಕುಳಿತವರು | ಉತ್ತೀರ್ಣರಾದವರು | ಶೇಕಡಾವಾರು |
|---|---|---|---|
| ೨೦೦೮-೨೦೦೯ | ೧೦ | ೦೩ | ೩೦% |
| ೨೦೦೯-೨೦೧೦ | ೧೪ | ೦೩ | ೨೧.೪% |
| ೨೦೧೦-೨೦೧೧ | ೧೮ | ೧೬ | ೮೮.೮% |
| ೨೦೧೧-೨೦೧೨ | ೧೩ | ೧೦ | ೭೬.೯% |
| ೨೦೧೨-೨೦೧೩ | ೧೬ | ೧೫ | ೭೩.೭೫% |
| ೨೦೧೩-೨೦೧೪ | ೧೭ | ೧೫ | ೮೮.೨೩% |
| ೨೦೧೪-೨೦೧೫ | ೨೮ | ೨೫ | ೮೯.೨೮% |
| ೨೦೧೫-೨೦೧೬ | ೨೩ | ೧೮ | ೭೮.೨೬% |
| ೨೦೧೬-೨೦೧೭ | ೨೬ | ೧೩ | ೫೦% |
| ೨೦೧೭-೨೦೧೮ | ೧೫ | ೧೨ | ೮೦% |

ತಮಟಕಲ್ಲು ಗ್ರಾಮದಲ್ಲಿರುವ ಪ್ರೌಢ ಶಾಲೆ ಅನುದಾನ ರಹಿತ ಶಾಲೆಯಾಗಿದ್ದು ಇಲ್ಲಿಗೆ ಸೇರುವ ಮಕ್ಕಳ ಸಂಖ್ಯೆಯು ಕಡಿಮೆ. ಹತ್ತಿರದ ಪಟ್ಟಣಕ್ಕೆ ಹೋಗುತ್ತಾರೆ. ಹತ್ತು ವರ್ಷಗಳ ಹಿಂದಿನ ಫಲಿತಾಂಶಕ್ಕೆ ಹೋಲಿಸಿದರೆ ಈಗಿನ ಫಲಿತಾಂಶ ಅತ್ಯುತ್ತಮವಾಗಿದೆ. ಪ್ರತಿ ವರ್ಷವು ಹತ್ತನೇ ತರಗತಿಯ ಪರೀಕ್ಷೆಗೆ ಕುಳಿತ ಮಕ್ಕಳ ಸಂಖ್ಯೆ ಉತ್ತಮಗೊಳ್ಳುತ್ತಿದೆ. ಫಲಿತಾಂಶದಲ್ಲಿ ಹೆಣ್ಣು ಮಕ್ಕಳದ್ದೇ ಮೇಲುಗೈ ಎಂದು ಶಾಲೆಯ ಮುಖ್ಯೋಪಾಧ್ಯಾಯರು ತಿಳಿಸಿದರು.

ಪದವಿ ಪೂರ್ವ ಮತ್ತು ಪದವಿ ಶಿಕ್ಷಣ ಪಡೆಯಲು ತಾಲ್ಲೂಕು ಕೇಂದ್ರವಾದ ಚಿತ್ರದುರ್ಗಕ್ಕೆ ಹೋಗಬೇಕು. ತಮಟಕಲ್ಲಿನಿಂದ ೫ ಕಿ.ಮೀ. ದೂರವಿರುವ ಚಿತ್ರದುರ್ಗದಲ್ಲಿ ಎರಡು ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಇವೆ.

ಕೆಲವು ಪೋಷಕರು ನಾವು ದಡ್ಡರಾಗಿದ್ದೇವೆ, ನಮ್ಮ ಮಕ್ಕಳು ದಡ್ಡರಾಗುವುದು ಬೇಡ. ನಾವು ಅನುಭವಿಸಿದ ಕಷ್ಟ-ನಷ್ಟಗಳು ನಮ್ಮ ಹೆಣ್ಣು ಮಕ್ಕಳಿಗೆ ಬರಲೇಬಾರದು. ನಮ್ಮ ಮಕ್ಕಳು ಓದಿ ಬುದ್ಧಿವಂತರಾಗಬೇಕು. ಸಮಾಜದ ಸತ್ಪ್ರಜೆಗಳಾಗಬೇಕು. ಉತ್ತಮ ಜೀವನ ಮಾಡಬೇಕು ಎಂಬಂತಹ ಪ್ರಮಾಣಿಕವಾದ ರೀತಿಯಲ್ಲಿ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿಯನ್ನು ತೋರಿಸುತ್ತಾರೆ.

ಆದರೆ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೋಲಿಸಿದಾಗ ಸ್ವಲ್ಪ ವ್ಯತ್ಯಾಸಗಳನ್ನು ಕಾಣುತ್ತೇವೆ. ಗಂಡು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡುತ್ತಾರೆ. ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸುವುದೇ ಇಲ್ಲವೆಂದು ಅರ್ಥವಲ್ಲ. ಬಹುತೇಕವಾಗಿ ತಮ್ಮ ಮಕ್ಕಳಿಗೆ ಕೊಡಿಸುವ ಶಿಕ್ಷಣವನ್ನು ಕೇವಲ ಆದಾಯವನ್ನು ಹೆಚ್ಚಿಸುವ ಒಂದು ಆರ್ಥಿಕ ಸಾಧನವನ್ನಾಗಿ ಪರಿಗಣಿಸುತ್ತಾರೆ. ಕೆಲವು ಜನ ಸರ್ಕಾರಿ ಕೆಲಸಕ್ಕೆ ಸೀಮಿತವೆಂದರೆ ಇನ್ನೂ ಕೆಲವರು ಗಂಡನ ಮನೆಯಲ್ಲಿ ಮಕ್ಕಳಿಗೆ ಕಲಿಸಲು ಎಂದು ಹೇಳುತ್ತಾರೆ. ಈ ದೃಷ್ಟಿಕೋನದಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದರಿಂದ ಹಣದ ದುಂದುವೆಚ್ಚವಾಗುತ್ತದೆ ಎಂದು ಗಂಡು ಮಕ್ಕಳನ್ನು ಸಾಕಷ್ಟು ವೆಚ್ಚವಿಟ್ಟು ಕಾನ್ವೆಂಟಗಳಿಗೆ, ಶಾಲೆಗಳಿಗೆ ಸೇರಿಸಿದರೆ ಹೆಣ್ಣು ಮಕ್ಕಳನ್ನು ಸರ್ಕಾರಿ ಶಾಲೆಯಲ್ಲಿ ಓದಿಸುವುದನ್ನು ಗುರುತಿಸಬಹುದು.

ಹೆಣ್ಣುಮಕ್ಕಳ ಶಿಕ್ಷಣ ಕುರಿತಾದ ಸಕಾರಾತ್ಮಕ ಭಾವನೆಗಳು ಕೇವಲ ವ್ಯಕ್ತಿಗತವಾಗಿ ಹೆಚ್ಚಳವಾದರೆ ಸಾಮಾಜಿಕ ಮತ್ತು ಸಾಂಸ್ಥಿಕ ಮಟ್ಟದಲ್ಲಿ ಬದಲಾವಣೆಯಾಗಬೇಕಾದ ಅಗತ್ಯವಿದೆ. ವಿವಿಧ ಶೈಕ್ಷಣಿಕ ಕಾರ್ಯ ಯೋಜನೆಗಳ ಅನುಷ್ಠಾನ ಮತ್ತು ಇತರೆ ಅಂಶಗಳಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಹೆಣ್ಣು ಮಕ್ಕಳ ಹಾಗೂ ಶಾಲಾ ಭಾಗವಹಿಸುವಿಕೆ ಪ್ರಮಾಣ ಹೆಚ್ಚಾಗಿದೆ ಎಂಬುದೇನೋ ನಿಜ.

ಸರ್ಕಾರ ಹಲವು ಕಾರ್ಯಕ್ರಮಗಳಾದ ಬಿಸಿಯೂಟ ಯೋಜನೆಗೆ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ, ಕನಿಷ್ಠ ಕಲಿಕಾ ಮಟ್ಟದ ಕಾರ್ಯಕ್ರಮ, ಪ್ರತಿಭಾ ಕಾರಂಜಿ, ಚಿಣ್ಣರ ಜಿಲ್ಲಾದರ್ಶನ,

ಪರಿಸರ ಗ್ರಂಥಾಲಯ ಸೌಲಭ್ಯ, ಸಮವಸ್ತ್ರ, ಶಾಲಾ ಬ್ಯಾಗ್‌ಗಳ ವಿತರಣೆ, ವಿದ್ಯಾರ್ಥಿವೇತನ ಸಂದಾಯ, ಸರ್ವಶಿಕ್ಷಣ ಅಭಿಯಾನ ಇನ್ನೂ ಮುಂತಾದ ಕಾರ್ಯ ಯೋಜನೆಗಳ ಮೂಲಕವಾಗಿ ಸರ್ಕಾರದ ಗಮನ, ಪ್ರಯತ್ನಗಳು ಶಿಕ್ಷಣದ ಕಡೆಗೆ ಇವೆ. ಆದರೂ ಶಿಕ್ಷಣದಲ್ಲಿ ಸಂಪೂರ್ಣ ಸುಧಾರಣೆಗಳಾಗಿಲ್ಲವೆಂದೆನಿಸುವುದು.

ಒಟ್ಟಾರೆಯಾಗಿ ಹೇಳುವುದಾದರೆ ಮಹಿಳಾ ಶಿಕ್ಷಣಕ್ಕೆ ವಿಶೇಷವಾದ ಒತ್ತನ್ನು ನೀಡಿ ಸರ್ಕಾರ ಎಷ್ಟೆಲ್ಲಾ ಯೋಜನೆ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುತ್ತಿದೆ. ಆದರೆ ಅಷ್ಟೇ ಪ್ರಮಾಣದಲ್ಲಿ ಮಹಿಳೆಯರು ಮತ್ತು ಅವರ ಪೋಷಕರು ಶಿಕ್ಷಣ ಕೊಡಿಸುವುದಕ್ಕೆ ಸ್ಪಂದಿಸದೇ ಇರುವುದು ಕಂಡು ಬರುತ್ತಿದೆ. ಆದರೆ ಆಶಾದಾಯಕ ವಿಚಾರವೆಂದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದ ಶಿಕ್ಷಣದಲ್ಲಿ ಹೆಣ್ಣು ಮಕ್ಕಳ ದಾಖಲಾತಿ ಮತ್ತು ಹಾಜರಾತಿಯಲ್ಲಿ ಸುಧಾರಣೆಯಾಗಿರುವುದು.

# ಅಧ್ಯಾಯ ನಾಲ್ಕು:
# ಆಚರಣೆಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ನೆಲೆಗಳು

## ಅಧ್ಯಾಯ : ನಾಲ್ಕು
## ಆಚರಣೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ನೆಲೆಗಳು

ಜನಪದ ಸಂಸ್ಕೃತಿ ಆಚರಣೆಗಳ ಆಗರವಾಗಿದೆ. ಬದಲಾದ ಜೀವನ ಕ್ರಮಗಳಿಂದ ಆಚರಣೆಗಳು ಸ್ಥಿತ್ಯಂತರಗೊಳ್ಳುತ್ತಿವೆ. ಇಂದು ಸಂಶೋಧನಾ ದೃಷ್ಟಿಯಿಂದ ಅವುಗಳನ್ನು ಪರಿಶೀಸಬೇಕಾದ ಅನಿವಾರ್ಯತೆ ಇದೆ. ಆಚರಣೆಗಳಲ್ಲಿ ಕೂಡಿ ಬಾಳುವ ಗುಣವಿದೆ. ಹಂಚಿ ಉಣ್ಣುವ ನೀತಿ ಇದೆ. ಇಂದಿನ ಜಾಗತೀಕರಣ ಅಬ್ಬರದಲ್ಲೂ ಸಾಂಸ್ಕೃತಿಕವಾಗಿ ಆಚರಣೆಗಳು ತಮ್ಮ ಅಸ್ತಿತ್ವವನ್ನು ಕಾಪಾಡಿಕೊಂಡು ಆಚರಿಸಲ್ಪಡುತ್ತವೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಬದುಕಿನ ಜೀವಂತಿಕೆಯ ನೆಲೆಯಾಗಿ ಆಚರಣೆಗಳು ಯಾವ ರೀತಿ ಪ್ರತಿನಿಧಿಸುತ್ತವೆಂಬುದನ್ನು ಇದರಲ್ಲಿ ಮಹಿಳೆಯ ಪಾತ್ರವೇನು ಎಂಬುದನ್ನು ವಿಶ್ಲೇಷಿಸುವ ಉದ್ದೇಶ ಈ ಅಧ್ಯಯನದ್ದು.

ಪೂರ್ವಿಕರ ಅನುಭವಗಳ ಹಿನ್ನಲೆಯಲ್ಲಿ ಉದಯಿಸಿದ ಆಚರಣೆಗಳು ಪರಂಪರಾಗತ ಅನುಭವಗಳು ಕಿರಿಯ ತಲೆಮಾರುಗಳಿಗೆ ಮಾರ್ಗ ಸೂಚಿಗಳಿದ್ದಂತೆ. ಈ ಅನುಭವಗಳು ಸರಿಯಾದ ರೀತಿಯಲ್ಲಿ ರವಾನೆಯಾದಾಗ ಮಾತ್ರ ಆಚರಣೆಗಳ ಪ್ರತಿಫಲ ಪಡೆಯಲು ಸಾಧ್ಯ. ಬದಲಾದ ಜೀವನ ಕ್ರಮಗಳಿಂದ ಇಂದು ಆಚರಣೆಗಳು ಸ್ಥಿತ್ಯಂತರಗೊಳ್ಳುತ್ತವೆ. ಪುರುಷ ಪ್ರಧಾನ ಸಂಪ್ರದಾಯ ಚೌಕಟ್ಟಿನಲ್ಲಿ ಕೆಲವೊಂದು ಕಟ್ಟುಪಾಡುಗಳನ್ನು ಮಹಿಳೆಯರಿಗೆ ವಿಧಿಸಲಾಗಿದೆ. ಅಂಥವುಗಳನ್ನು ಆಚರಣಾ ಕೇಂದ್ರಿತ ಅಧ್ಯಯನಕ್ಕೆ ಒಳಪಡಿಸಿ ಸಾಧ್ಯವಾದ ಮಟ್ಟಿಗೆ ಪರಾಮರ್ಶಿಸಲಾಗಿದೆ.

ದೇಜಗೌ ಅವರು ಹೇಳಿದಂತೆ ಸಂಪ್ರದಾಯಗಳ ಮೊತ್ತವೇ ಸಮಾಜ. ಅವುಗಳ ಆಚರಣೆಯೇ ಜೀವನ (ದೇಜೀಗೌ; ೨೦೦೧, ಪುಟ ೫೫೭). ಮಾನವನ ಜೀವನವು ಹುಟ್ಟಿನಿಂದ ಸಾವಿನವರೆಗೂ ಒಂದಲ್ಲಾ ಒಂದು ರೀತಿ ಸಂಪ್ರದಾಯ, ಆಚರಣೆಗಳ ಮೂಲಕ ಸಾಗಿ ಬರಲೇಬೇಕು. ತಲೆಮಾರಿನಿಂದ ತಲೆಮಾರಿಗೆ ಹಿರಿಯರಿಂದ ಕಿರಿಯರಿಗೆ ವರ್ಗಾವಣೆಗೊಳ್ಳುತ್ತಾ ಬರುತ್ತಿವೆ. ಇವಕ್ಕೆ ಲಿಖಿತ ಶಾಸನಗಳಿಲ್ಲ, ಆದರೂ ನಿರಾತಂಕವಾಗಿ ಸಾಗಿ ಬರುವ ಶಕ್ತಿ ಪಡೆದಿವೆ. ಜನಪದರ ಬದುಕಿಗೆ ಪೂರಕವಾದ ಅಂಶಗಳನ್ನು ಹೊಂದಿರುವುದೇ ಇದಕ್ಕೆ ಕಾರಣ. ಹಾಗಾಗಿ 'ಜಾನಪದಕ್ಕೆ

ಎಂದೂ ಸಾವಿಲ್ಲ' ಎಂದು ಫಾಟರ್ ಹೇಳಿರುವುದು ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಜನಪದ ಆಚರಣೆಗಳಿಗೆ ಜೀವಂತಿಕೆಯಿದೆ. ಆಚರಣೆಯನ್ನು ಹಿರಿಯರು ಹಿಂದಿನಿಂದ ಮಾಡಿಕೊಂಡು ಬಂದಿದ್ದಾರೆ. ಕಿರಿಯರು ನಾವು ಮಾಡಿಕೊಂಡು ಬರುತ್ತವೆ ಎನ್ನುವುದಲ್ಲ, ಆಚರಣೆಯನ್ನು ಏಕೆ ಮಾಡುತ್ತಾರೆ ಎಂಬ ಅರ್ಥವನ್ನು ತಿಳಿದುಕೊಂಡು ಮಾಡಬೇಕು. ಆಚರಣೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಮಾತ್ರ ಅವುಗಳಲ್ಲಿಯ ಸತ್ಯಾಂಶಗಳನ್ನು ತಿಳಿಯಲು ಸಾಧ್ಯ.

ಜನಪದರು ಹುಟ್ಟಿನಿಂದ ಸಾವಿನವರೆಗೂ ಚಾಚೂ ತಪ್ಪದೆ ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ಆಚರಣೆಗಳಿಗೆ ಸಮಾಜವನ್ನು ಒಂದುಗೂಡಿಸುವ, ವ್ಯಕ್ತಿಗಳನ್ನು ಅಡ್ಡದಾರಿಗೆ ಹೋಗದಂತೆ ತಡೆಯುವ ಶಕ್ತಿಯಿದೆ. ವಿಧಿ-ನಿಷೇಧಗಳು ಮಾನವನಲ್ಲಿ ಭಕ್ತಿಯ ಜೊತೆ ಭಯ ಮೂಡಿಸಿ, ವ್ಯವಸ್ಥಿತವಾಗಿ ಆಚರಣೆಗಳು ಏರ್ಪಡುವಲ್ಲಿ ಸಹಾಯಕವಾಗಿವೆ. ವೈಜ್ಞಾನಿಕವಾಗಿ ಎಷ್ಟೇ ಮುಂದುವರಿದರೂ ದೈವಕ್ಕೆ ಮೊರೆ ಹೋಗುತ್ತಿರುವುದು ಗಮನಾರ್ಹ. ದೈವೀ ಭಯದ ಹಿನ್ನೆಲೆಯಲ್ಲಿ ಆಚರಣೆಗಳು ಇಂದಿಗೂ ಸಮಾಜದ ಶಾಂತಿಯನ್ನು ಕಾಪಾಡುತ್ತಿವೆ. ಸಮಸ್ತ ಜನರ ಭಾಗವಹಿಸುವಿಕೆಯಿಂದ ಪರಸ್ಪರ ಸಹಕಾರ ಭಾವ, ಒಗ್ಗಟ್ಟು ಹಾಗೂ ನೆಮ್ಮದಿಯಿಂದಿರಲು ಸಾಧ್ಯ. ಆಚರಣೆಗಳಲ್ಲಿ ಹಲವಾರು ರೀತಿ ನೀತಿಗಳಂಟು. ಆಚರಣೆಗಳು ಜನಪದ ಬಾಳಿನ ಸಮೃದ್ಧಿಯ ಸಂಕೇತವಾಗಿವೆ.

ಜನಪದ ಆಚರಣೆಗಳ ಮೂಲ ಆಶಯ ಕೃಷಿ ಅಭಿವೃದ್ಧಿಯ ಮೂಲಕ ಸರಳ ಸಹಜ ಬದುಕು ಹೊಂದುವುದಾಗಿದೆ. ಆಚರಣೆಗಳು ಭೂಮಿ, ಮಳೆ, ಬೀಜ, ಪ್ರಕೃತಿಯೊಂದಿಗೆ ಗಾಢ ಸಂಬಂಧ ಹೊಂದಿವೆ. ಗ್ರಾಮ ಸಮುದಾಯದೊಂದಿಗೆ ಸಮಗ್ರತೆಯನ್ನು ಕಾಯ್ದುಕೊಂಡಿವೆ. ಕೃಷಿ ಚಟುವಟಿಕೆಯ ಪ್ರತಿಹಂತದಲ್ಲೂ ಪರಸ್ಪರ ಸಾಮರಸ್ಯದ ಆಶಯ ಹೊಂದಿ ಆಚರಿಸಲ್ಪಡುತ್ತಿವೆ. ನಮ್ಮ ನೆಲಕ್ಕೆ ಮಳೆ ಬರಲಿ ಎನ್ನುತ್ತಾರೆಯೇ ಹೊರತು ತನ್ನ ಹೊಲಕ್ಕೆ ಮಳೆಯಾಗಲೆಂದು ಯಾರು ಕೇಳುವುದಿಲ್ಲ. ಅವರ ಬಯಕೆಗಳಲ್ಲಿರುವ ಸಮಷ್ಟಿ ಹಿತಕ್ಕೆ ಪೂರಕವಾದ ಆಶಯಗಳನ್ನು ಗಮನಿಸಬೇಕು. ಎಂ.ಜಿ. ಈಶ್ವರಪ್ಪನವರ ಪ್ರಕಾರ "ಸಮುದಾಯ ಒಂದು ನಿರ್ದಿಷ್ಟ ಜಾಗದಲ್ಲಿ, ನಿರ್ದಿಷ್ಟ ಕಾಲದಲ್ಲಿ ಕ್ರಮಬದ್ಧವಾಗಿ ನಡೆಸುವ ವಿಧಿಯೇ ಆಚರಣೆ. (ಎಮ್.ಜಿ.ಈಶ್ವರಪ್ಪ ೧೯೯೯, ಪು ೫೦). ಇಲ್ಲಿ ಒಂದು ಆಚರಣೆ ನೆರವೇರಲು ಕಾಲ, ಸ್ಥಳ ಹಾಗೂ ವಿಧಿವಿಧಾನಗಳು ಮುಖ್ಯವಾಗುತ್ತವೆ. ಅವುಗಳಲ್ಲಿ ದೈವೀ ಭಯದ ಜೊತೆಗೆ ಧಾರ್ಮಿಕ ಶ್ರದ್ಧೆಯೂ ಅತ್ಯಗತ್ಯ. ಅವು ಕೇವಲ ಆಚರಣೆಯಾಗಿರದೇ ಬದುಕಿನ ಭಾಗವಾಗಿದ್ದಾಗ ಮಾತ್ರ ಅದು ಸಾಧ್ಯ. ವರ್ಷವೆಲ್ಲಾ ಕೃಷಿಕರು ಮತ್ತು ಗ್ರಾಮೀಣ ಆಚರಣೆಗಳ ಮೂಲಕ ಕೃಷಿ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಕೃಷಿಕರ ಮತ್ತು ಗ್ರಾಮೀಣ ಜನರ ಬದುಕಲ್ಲಿ ಆಚರಣೆಗಳು ಬೆಸುಗೆಯಾಗಿವೆ. ಅವುಗಳಿಗೆ ಸ್ಥಳ, ಕಾಲ, ವಿಧಿ, ನಿಯಮ, ಆಹಾರ ಪದ್ಧತಿ, ಸಮಷ್ಟಿ ಹಿತಗಳು ಕೊಂಡಿಯಾಗಿರುತ್ತವೆ.

ಜನಪದ ದೈವಗಳು ಮಾತೃಸ್ವರೂಪದ ನೆಲೆಯಿಂದ ಆರಂಭಗೊಂಡಿರಬೇಕು. ತನಗೆ ಗೋಚರವಾದ ವಸ್ತುಗಳಲ್ಲಿ ಮಾತೃ ಸ್ವರೂಪದ ಅಮ್ಮ ಎಂಬ ಕಲ್ಪನೆಯಿದೆ. ಇವನ್ನು ಸ್ತ್ರೀದೈವಗಳ ಹೆಸರುಗಳಿಂದಲೇ ಕರೆಯಲಾಗುತ್ತದೆ. ಇಲ್ಲಿ ಅಮ್ಮ ಎಂದರೆ ತಾಯಿಯು ಹೌದು ವೈದ್ಯೆಯೂ ಹೌದು. ಅಮ್ಮನ ಆಚರಣೆಗಳಲ್ಲಿ ಮಕ್ಕಳ ಪೋಷಣೆ ಮತ್ತು ಆರೋಗ್ಯ ಪಾಲನಾತತ್ವ ಔಷಧೋಪಚಾರಣೆಗಳು ನಡೆಯುತ್ತಿರುತ್ತವೆ. ಅಮ್ಮನ ಆಚರಣೆಯಲ್ಲಿ ಗುಳೇ ಹೋಗುವ ಸಂಪ್ರದಾಯ ಇಂದಿಗೂ ಪ್ರಚಲಿತದಲ್ಲಿದೆ. ಒಂದು ದಿನದಮಟ್ಟಿಗೆ ಗ್ರಾಮ ತೊರೆಯುವ ಮೂಲಕ ಗ್ರಾಮ ನೈರ್ಮಲ್ಯ, ಸಾಂಕ್ರಾಮಿಕ ರೋಗ ನಿವಾರಣೆ, ಪರಸ್ಪರ ಸಾಮೂಹಿಕ ವನ ಭೋಜನ ಹೀಗೆ ಅಚರಣೆ ನೆಪದಲ್ಲಿ ಮಾನವ ಸಂಬಂಧಗಳನ್ನು ಬೆಸೆಯುವ ಆಶಯಗಳು ಕಂಡುಬರುತ್ತವೆ. ಜನಪದರ ಆಚರಣೆಗಳು ಪರಿಸರ ಸಂರಕ್ಷಣೆಯ ಸಮತೋಲನವನ್ನು ಕಾಪಾಡುವ ಆಶಯ ಹೊಂದಿದವುಗಳಾಗಿವೆ.

ಕೃಷಿಕರ ಜೀವನಾಧಾರ ಜಾನುವಾರುಗಳು. ಅವುಗಳ ಸಂರಕ್ಷಣೆ ಅವುಗಳ ಜೊತೆಗಿನ ಅನ್ಯೋನ್ಯ ಒಡನಾಟಕ್ಕೆ ಸಂಬಂಧಿಸಿದಂತೆ ಹಲವಾರು ಆಚರಣೆಗಳು ಇಂದಿಗೂ ಪ್ರಚಲಿತದಲ್ಲಿವೆ. ಜನಪದರು ತಮ್ಮ ಜಾನುವಾರುಗಳಿಗೆ ತೋರುವ ಗೌರವ ಪೂಜನೀಯತೆ ಆಚರಣೆಗಳ ಪ್ರತಿ ಹಂತದಲ್ಲೂ ಕಂಡು ಬರುತ್ತದೆ. ಜಾತ್ರೆ, ಉತ್ಸವ, ವಿಶೇಷ ದಿನಗಳಲ್ಲಿ ಬಲಿಷ್ಠ ಎತ್ತುಗಳು ಪ್ರದರ್ಶಿಸಲ್ಪಡುತ್ತವೆ. ಉತ್ತಮ ತಳಿ ಹೊಂದಲು ಜಾನುವಾರುಗಳನ್ನು ದೈವಕ್ಕೆ ಬಿಡುಲಾಗುತ್ತದೆ. ಈ ರೀತಿಯ ಆಚರಣೆಗಳು ಚಿಕ್ಕ ಚಿಕ್ಕ ಕ್ರಿಯಗಳಾಗಿದ್ದರೂ ಕೃಷಿಕರ ಮನಸ್ಸಿಗೆ ಮುದ ನೀಡುವ ಅವರ ಮನಸ್ಸಲ್ಲಿ ಆತ್ಮ ವಿಶ್ವಾಸ ಹೆಚ್ಚಿಸುವ ಆಶಯ ಹೊಂದಿವೆ. ಇಂತಹ ಸಮಾಜಮುಖಿ ಆಚರಣೆಗಳಿಂದು ಶಾಶ್ವತವಾಗಿ ಮರೆಯಾಗುವ ಸ್ಥಿತಿ ತಲುಪಿವೆ. ಸಗಣಿ ಗೊಬ್ಬರದ ಬೇಡಿಕೆ ಕಡಿಮೆಯಾದಂತೆ ಜಾನುವಾರುಗಳ ಸಂಖ್ಯೆ ಕುಂಠಿತಗೊಳ್ಳುತ್ತಿದೆ. ಜಾನುವಾರುಗಳಿಗಾಗಿಯೇ ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದಂಥ ಗೋಮಾಳಗಳೂ ಕಣ್ಮರೆಯಾಗುತ್ತಿವೆ. ಕೃಷಿಭೂಮಿ ಇಂದು ಹೆಚ್ಚು ಇಳುವರಿ ನೀಡುತ್ತದೆ. ಆದರೆ ವಿಷ ಪೂರಿತ ಆಹಾರ ತಯಾರಿಕಾ ಕಾರ್ಖಾನೆಗಳಾಗಿ ಮಾರ್ಪಟಾಗುತ್ತಿವೆ.

ಜನಪದರು ಹಲವಾರು ವರ್ಷಗಳಿಂದ ತಮ್ಮ ಅನುಭವದ ನೆಲೆಯಲ್ಲಿ ಆಚರಣೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಇಂದು ಜಾಗತೀಕರಣದ ಅಬ್ಬರದಲ್ಲಿ ಕೃಷಿಕಾರ್ಯ ವಾಣಿಜ್ಯೀಕರಣಗೊಳ್ಳುತ್ತಿದೆ.

ಆಚರಣೆಗಳು ಕುಟುಂಬ, ಕುಲ, ಸಮುದಾಯ, ಊರು, ಪೀಳಿಗೆ, ಕಾಲ ಎಲ್ಲವನ್ನು ಒಳಗೊಂಡು ಸಂಸ್ಕೃತಿಯ ಭಾಗವಾಗಿರುತ್ತವೆ. ಕೆ.ವೈ.ನಾರಾಯಣಸ್ವಾಮಿಯವರ ಅಭಿಪ್ರಾಯದಂತೆ ಆಚರಣೆಗಳ ಉದ್ದೇಶ ಸಾಮಾನ್ಯವಾಗಿ ವ್ಯಕ್ತಿ ಮತ್ತು ಸಮಾಜದ ಒಳಿತನ್ನು ಗುರಿಯಾಗಿಟ್ಟುಕೊಂಡು ರೂಪ ಪಡೆದಿರುತ್ತವೆ. (ಕೆ.ವೈ.ನಾರಯಣಸ್ವಾಮಿ ೨೦೦೦ ಪುಟ ೧೧೨) ಆದಿಮ ಹಂತದಿಂದಲೂ

ಆಚರಣೆಗಳು ಸಮಷ್ಟಿ ಹಿತವನ್ನು ಕಾಪಾಡಿಕೊಂಡು ಬಂದಿವೆ. ಗ್ರಾಮ ಸಮುದಾಯದ ಸಹಭಾಗಿತ್ವ, ಪರಸ್ಪರ ಸಹಕಾರ ಭಾವ, ಹಂಚಿ ಉಣ್ಣುವ, ಅನುಸರಿಸಿ ಬಾಳುವ ನೀತಿಗಳು, ಅಚರಣೆಗಳು ಪ್ರತಿ ಹಂತದಲ್ಲೂ ಅಂತರ್ಗತಗೊಂಡಿವೆ. ಅಚಲವಾದ ದೈವೀಭಯದ ಜೊತೆ ನಂಬಿಕೆ, ವಿಧಿ-ನಿಷೇಧಗಳ ಮೂಲಕ ಸಾಗಿಬಂದ ಆಚರಣೆಗಳಲ್ಲಿ ಹಲವಾರು ಸಮಸ್ಯೆಗಳಿಗೆ ಪರಿಹಾರಗಳುಂಟು.

ಹಬ್ಬ ಆಚರಣೆಗಳಲ್ಲಿ ತಮ್ಮದೇ ಆದ ಆಹಾರ ಪದ್ಧತಿಗಳನ್ನು ಅನುಸರಿಸುತ್ತಾರೆ. ಒಂದೆಡೆ ಸೇರಿ ಸಾಮೂಹಿಕ ಭೋಜನ ಮಾಡುವುದು ಸಾಮರಸ್ಯ ಬದುಕಿನ ಪ್ರತೀಕ. ನಿರ್ದಿಷ್ಟ ಸ್ಥಳದಲ್ಲಿ ನಿಯಮಕ್ಕೆ ಅನುಸಾರವಾಗಿ ಆಹಾರ ಸೇವಿಸುವ ಕ್ರಮಗಳುಂಟು. ಆಚರಣೆಗಳಲ್ಲಿ ಬಳಸಲ್ಪಡುವ ರಾಸಾಯನಿಕಗಳು ಆಧುನಿಕ ಸಾಮಗ್ರಿಗಳ ಬಳಕೆ ಜಗಮಗಿಸುವ ವಿದ್ಯುತ್ ಹಾಗೂ ಧ್ವನಿವರ್ಧಗಳ ಬಳಕೆಯಿಂದ ಆಚರಣೆಗಳು ವ್ಯಾಪಾರೀಕರಣಗೊಳ್ಳುತ್ತಿವೆ.

ಯಾವುದೇ ಜನಪದ ಆಚರಣೆಯಾಗಿರಲಿ ಅದರ ಒಟ್ಟು ಆಶಯ ಕೇವಲ ಆಚರಣೆಯಾಗಷ್ಟೆ ಆಗಿರದೆ ಅದರಲ್ಲಿ ಒಂದು ಸಮೂಹದ, ಒಂದು ಪರಿಸರದ, ಸಂಸ್ಕೃತಿಯ ಜೀವಂತ ಬೇರುಗಳಿರುತ್ತವೆ. ಸಮಾಜ ವ್ಯವಸ್ಥೆ ಸುಗಮವಾಗಲು ಹಲವಾರು ಆಚರಣೆಗಳು ರೂಪುಗೊಂಡಿವೆ.

ಮಾನವ ಅದಿಮ ಬದುಕಿನಿಂದ ಆಧುನಿಕ ಬದುಕಿನೆಡೆಗೆ ದಾಪುಗಾಲು ಹಾಕುತ್ತಿರುವ ಸಂದರ್ಭದಲ್ಲಿ ಹಲವಾರು ಸ್ಥಿತ್ಯಂತರಗಳಿಗೆ ಒಳಗಾಗಿದ್ದಾನೆ. ಭಯ ಮತ್ತು ಆತಂಕದ ಬದುಕಿನಿಂದ ಚೇತರಿಸಿಕೊಂಡು ಕ್ರಮೇಣ ಪ್ರಕೃತಿಯನ್ನು ಅರಿತುಕೊಳ್ಳಲು ಪ್ರಾರಂಭಿಸಿದನು. ಆಗ ಅವನ ಬದುಕಿನಲ್ಲಿ ಮಹತ್ತರ ಬದಲಾವಣೆಗಳುಂಟಾದವು.

ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಜಾಗದಲ್ಲಿ ಪೂಜೆ ಪುನಸ್ಕಾರಗಳನ್ನು ಕ್ರಮಬದ್ಧನಾಗಿ ನಡೆಸುವ ವಿಧಿಯೇ ಆಚರಣೆ. ಅದು ಪರಂಪರೆಯ ಮೇಲಿನ ಶ್ರದ್ಧೆಯಿಂದ, ಧಾರ್ಮಿಕ ಪ್ರಜ್ಞೆಯಿಂದ ದೈವ ಭಯದಿಂದ ನಡೆಯುತ್ತದೆ. ಆದು ಕೇವಲ ಪೂಜೆಯಾಗಿರದೆ ಅವರ ಬದುಕಿನ ಒಂದು ಅಂಗವಾಗಿ ಮುಂದುವರಿಯುತ್ತಿರುತ್ತದೆ. ಅವು ಜನಗಳಿಗೆ ಭರವಸೆ ಮೂಡಿಸುವಂಥ ಆತ್ಮವಿಶ್ವಾಸ ಹೆಚ್ಚು ಮಾಡುವಂತಹ ಅಂಶಗಳನ್ನು ಹೊಂದಿವೆ. ತಲಾಂತರದಿಂದ ಭೂಮಿಯ ಜೊತೆಗಿನ ಸಂಪರ್ಕದಿಂದ ಉಂಟಾದ ಅನುಭವಗಳ ಆಚರಣೆಯಲ್ಲಿ ವೈಯಕ್ತಿಕ ಆಚರಣೆಗಳು, ಕೌಟುಂಬಿಕ ಆಚರಣೆಗಳು, ಧಾರ್ಮಿಕ ಆಚರಣೆಗಳು, ಸಾಮೂಹಿಕ ಆಚರಣೆಗಳು, ಕೊಂಡ ಹಾಯುವುದು, ಬಾಯಿಗೆ ಬೀಗ ಹಾಕಿಸಿಕೊಳ್ಳುವುದು, ಮುಡಿಕೊಡುವುದು, ಸಿಡಿ ಆಡುವುದು ಇತ್ಯಾದಿ ಜನರು ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾರೆ. ನಿತ್ಯ ಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತವೆ. ಇಂತಹ ಸಂಕ್ರಮಣಗಳು ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರ ವಹಿಸುತ್ತಾನೆ. ಇಂತಹ ಕಾಳಜಿಗಳು ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗುತ್ತವೆ. ಜನಪದರ ಬದುಕು ಹುಟ್ಟಿನಿಂದ ಸಾವಿನವರೆಗೂ ಅನೇಕ ನಂಬಿಕೆಗಳಿಂದ ಕೂಡಿದ್ದು ಆಚರಣೆಗಳ ಮೂಲಕ ಅವನು ಈಡೇರಿಸಿಕೊಳ್ಳುತ್ತಾನೆ.

ಈ ಆಚರಣೆಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿ ಕಂಡರೂ ಹೆಚ್ಚಾಗಿ ಸಾಮ್ಯತೆಗಳಿಂದ ಕೂಡಿರುತ್ತವೆ. ತಮಟಕಲ್ಲು ಪರಿಸರದಲ್ಲಿ ಮುಖ್ಯ ಹಬ್ಬ, ಜಾತ್ರೆಗಳು, ಉತ್ಸವಗಳು, ರೋಗ ರುಜಿನಗಳ ನಿವಾರಣೆಗೆ ಸಂಬಂಧಿಸಿದ ಆಚರಣೆಗಳು ಕಂಡು ಬರುತ್ತವೆ. ಇವು ವಾರ್ಷಿಕಾವರ್ತನ ಆಚರಣೆ ಮತ್ತು ಜೀವನಾವರ್ತನ ಆಚರಣೆಗೆ ಸಂಬಂಧಿಸಿದವು ಎಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೪.೧. ಜೀವನಾವರ್ತನ ಆಚರಣೆಗಳು :**

ಜೀವನಾವರ್ತನ ಆಚರಣೆಗಳು ಮನುಷ್ಯನ ಹುಟ್ಟಿನಿಂದ ಪ್ರಾರಂಭವಾಗಿ ಸಾವಿನಲ್ಲಿ ಕೊನೆಗೊಳ್ಳುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ತಮಟಕಲ್ಲು ಗ್ರಾಮದಲ್ಲಿ ವಿವಿಧ ಸಮುದಾಯದ ಜನರು ನೆಲೆಸಿದ್ದು ನಾಯಕ, ಆದಿ ದ್ರಾವಿಡ, ಆದಿ ಕರ್ನಾಟಕ ಸಮುದಾಯಗಳಲ್ಲಿ ಕೆಲವು ಆಚರಣೆಗಳು ಒಂದೇ ರೀತಿಯಾಗಿದ್ದರು, ಕುಂಬಾರ, ಲಿಂಗಾಯಿತ, ಬಲಿಜಿಗ ಈ ಸಮುದಾಯಗಳ ಆಚರಣೆಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಕಂಡು ಬರುತ್ತವೆ.

ತಮಟಕಲ್ಲಿನ ಪ್ರತಿಯೊಂದು ಮನೆಯಲ್ಲಿ, ಸಮುದಾಯಗಳಲ್ಲಿ ಮಂಗಳಕಾರ್ಯ ನಡೆದರೆ ಪ್ರಥಮವಾಗಿ ಶ್ರೀ ಆಂಜನೇಯಸ್ವಾಮಿ ದೇವರಿಗೆ ಪೂಜೆ ಸಲ್ಲಿಸಿ ಶುಭ ಕಾರ್ಯವನ್ನು ಮುಂದುವರೆಸುತ್ತಾರೆ. ಸಂಕಷ್ಟದ ಪರಿಸ್ಥಿತಿಯಲ್ಲಿ ಜನಪದರು ದೇವರ ಮೊರೆಹೋಗುವುದು ಸಾಮಾನ್ಯ. ಆಗ ಅವರು ದೇವರಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ಹರಕೆ ಎಂದರೆ ನಮ್ಮ ಮನಸ್ಸಿನಲ್ಲಿ ಅಂದುಕೊಂಡಿದ್ದು ನೇರವೇರಿದರೆ ಅದಕ್ಕೆ ಪ್ರತಿಯಾಗಿ ದೇವರಿಗೆ ಪೂಜೆ ಸಲ್ಲಿಸುವುದನ್ನು ಹರಕೆ ಎನ್ನಬಹುದು. ತನ್ನ ಊರಿನಲ್ಲಿರುವ ದೇವರುಗಳಿಗೆ ಮಾಡಿಕೊಂಡ ಹರಕೆ ವಿಫಲವಾದರೆ ಬೇರೆ ಊರಿನ ದೇವತೆಗಳಿಗೂ ಹರಕೆ ಹೊರುತ್ತಾರೆ.

**ಸೀಮಂತ ಕಾರ್ಯ :**

ಸಾಮಾನ್ಯವಾಗಿ ಮದುವೆಯಾದಂತಹ ಹೆಣ್ಣು ಮೊದಲ ಬಾರಿ ಗರ್ಭಿಣಿಯಾದಾಗ ನಡೆಸುವ ಒಂದು ವಿಶಿಷ್ಟವಾದ ಆಚರಣೆಗೆ ಸೀಮಂತ ಎನ್ನುವರು. ಗರ್ಭಿಣಿಯಾದ ಹೆಣ್ಣು ಮಗಳಿಗೆ ತವರು ಮನೆಯವರು ಈ ಆಚರಣೆಯನ್ನು ಮಾಡುತ್ತಾರೆ. ಆಚರಣೆಗೆ ಬೇಕಾದಂತಹ ಎಲ್ಲಾ ವಸ್ತುಗಳನ್ನು ಗಂಡನ ಮನೆಯವರು ತಂದು ಕೊಡುತ್ತಾರೆ. ತವರು ಮನೆಯವರು ಊಟದ ವ್ಯವಸ್ಥೆಯನ್ನು ಮಾಡಬೇಕು. ಸೊಸೆಗೆ ಗಂಡನ ಮನೆಯವರು ಹಸಿರು ಸೀರೆ, ಬಳೆಯನ್ನು, ಹಣ್ಣು-ಹಂಪಲನ್ನು ತಂದು ಉಡಿಯಕ್ಕಿ ಹಾಕುತ್ತಾ ಆರತಿಯೊಂದಿಗೆ ಆಚರಣೆಯನ್ನು ನಡೆಸುವರು.

ಈ ಆಚರಣೆಯನ್ನು ತಮಟಕಲ್ಲು ಗ್ರಾಮದಲ್ಲಿ ಬರುವ ಎಲ್ಲಾ ಸಮುದಾಯಗಳು ಸಾಮಾನ್ಯವಾಗಿ ಒಂದೇ ರೀತಿಯಾಗಿ ಮಾಡುತ್ತಾರೆ. ಗಂಡನ ಅಥವಾ ತವರು ಮನೆಯಲ್ಲಿ ಈ ಕಾರ್ಯವನ್ನು ೭ ಅಥವಾ ೯ ತಿಂಗಳಲ್ಲಿ ಮಾಡುತ್ತಾರೆ. ಈ ಸಂದರ್ಭದಲ್ಲಿ ಬಂಧು-ಬಳಗದವರು ಅವಳಿಗೆ ಉಡುಗೊರೆಯನ್ನು ಕೊಡುತ್ತಾರೆ. ವಯಸ್ಸಾದ ಅಜ್ಜಿಯರು ಆರತಿ ಹಾಡುಗಳನ್ನು, ಸೋಬಾನೆ ಹಾಡುಗಳನ್ನು ಹೇಳುತ್ತಾರೆ.

ಸೀಮಂತ ಕಾರ್ಯವೆಂದರೆ ಮಹಿಳೆಯ ಪಾತ್ರವೇ ಹೆಚ್ಚಾಗಿದ್ದು ಅವಳಿಗೆ ಮೊದಲ ಆದ್ಯತೆ ನೀಡಲಾಗಿದೆ. ಇಲ್ಲಿ ನೆಡೆಯುವ ಆಚರಣೆಯ ಪ್ರತಿಯೊಂದು ಹಂತದಲ್ಲಿ ಅವಳ ಸಹಭಾಗಿತ್ವ ಹೆಚ್ಚಾಗಿದ್ದು ಪುರುಷನ ಪಾತ್ರ ನಗಣ್ಯವಾಗಿರುತ್ತದೆ.

ಈ ಆಚರಣೆಯಲ್ಲಿ ಹೆಣ್ಣು ಮಕ್ಕಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದ್ದು, ಈ ಸಂದರ್ಭದಲ್ಲಿ ಬರುವ ಎಲ್ಲಾ ಕೆಲಸ-ಕಾರ್ಯ, ಶಾಸ್ತ್ರಗಳನ್ನು ಹೆಣ್ಣು ಮಕ್ಕಳೇ ಮಾಡುತ್ತಾರೆ. ಗಂಡು ಮಕ್ಕಳ ಪಾತ್ರ ತುಂಬ ಕಡಿಮೆ. ಲಿಂಗಾಯಿತ ಸಮುದಾಯದವರಲ್ಲಿ ತವರಿನ ಮನೆಯವರೆ ಬುತ್ತಿ ರೊಟ್ಟಿ ಮಾಡಿಕೊಂಡು ಹೋಗುವುದು ವಿಶಿಷ್ಠವಾಗಿದೆ. ಗರ್ಭಿಣಿಯರಿಗೆ ಇರಬಹುದಾದ ತಿಂಡಿ ತಿನಿಸುಗಳ ಬಯಕೆಗಳನ್ನು ಪೂರೈಸುವ ವಾಡಿಕೆಯಿದೆ.

**ನಿಷಿದ್ದಗಳು** : ಗರ್ಭಿಣಿ ಹೆಣ್ಣು ಮಕ್ಕಳು ಸೂರ್ಯ ಗ್ರಹಣ ಕಾಲದಲ್ಲಿ ಹೊರ ಬರಬಾರದು, ಕುಡುಗೋಲು ಅಥವಾ ಚಾಕುವಿನಿಂದ ಏನನ್ನು ಕತ್ತರಿಸಬಾರದು ಎನ್ನುವ ನಂಬಿಕೆ ಇದೆ. ಇದನ್ನು ಮೀರಿ ಈ ಸಂದರ್ಭದಲ್ಲಿ ಕೆಲಸ ಮಾಡಿದರೆ ಹೊಟ್ಟೆ ಒಳಗಿನ ಮಗುವಿನ ದೇಹದ ಭಾಗಗಳ ರಚನೆ ಸರಿಯಾಗಿ ಆಗಿರುವುದಿಲ್ಲ ಎನ್ನುವ ನಂಬಿಕೆ ಇದೆ. ರಾತ್ರಿ ವೇಳೆ ಗರ್ಭಿಣಿ ಹೊರಗಡೆ ನಿದ್ರಿಸಬಾರದು. ಹಾಲಕ್ಕಿ (ಜೋಲಬಲ್ಲಕ್ಕಿ) ಪಕ್ಷಿಯ ನೆರಳು ಬಿದ್ದರೆ ಮಗು ಸಹ ಅದರಂತೆ ಕಪ್ಪಾಗಿ ತೆಳ್ಳಗೆ ಹುಟ್ಟುತ್ತದೆ ಎನ್ನುವ ನಂಭಿಕೆಯಿದೆ.

**ಜನನ ಮತ್ತು ನಾಮಕರಣ :**

ಸಾಮಾನ್ಯವಾಗಿ ಹೆಣ್ಣು ಮೊದಲ ಹೆರಿಗೆಗೆ ತವರು ಮನೆಗೆ ಹೋಗುತ್ತಾಳೆ. ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ ಹೆರಿಗೆಯನ್ನು ಊರಿನಲ್ಲಿರುವ ಅನುಭವಸ್ಥ ಸೂಲಗಿತ್ತಿಯರು ಮಾಡಿಸುತ್ತಿದ್ದರು. ಗರ್ಭಿಣಿ ಹೆಂಗಸಿನ ಮುಖದ ಹಾವ ಭಾವವನ್ನು ನೋಡಿಯೇ ಇವರಿಗೆ ಇಷ್ಟು ದಿನಗಳಲ್ಲಿ ಹೆರಿಗೆ ಆಗುತ್ತದೆ. ಸೂಕ್ಷ್ಮವಾಗಿ ಇರುವುದನ್ನು ತಿಳಿಸಿಕೊಡುತ್ತಿದ್ದರು. ಹೆರಿಗೆಯ ದಿನ ಹತ್ತಿರವಾಗುತ್ತಿದ್ದಂತೆ ಸೂಲಗಿತ್ತಿಯರು ಆ ಸಂದರ್ಭದಲ್ಲಿ ಹೊಕ್ಕಳು ಬಳ್ಳಿಯನ್ನು ಬ್ಲೇಡಿನಿಂದ ಅಥವಾ ಕುಡುಗೋಲಿನಿಂದ ಕತ್ತರಿಸಿ ಬೇರ್ಪಡಿಸುತ್ತಿದ್ದರು. ನಂತರ ಮಗುವನ್ನು ಕಾಳು ಮಾಡುವ ಮರದಲ್ಲಿ ಬಟ್ಟೆಯನ್ನು ಹಾಸಿ ಹಾಕಿದ ತಕ್ಷಣ ಮಗುವಿಗೆ ಮೆತ್ತಿಕೊಂಡಿದ್ದ ರಕ್ತವೆಲ್ಲವನ್ನು ಒರೆಸಿ ಮಗು ಉಸಿರಾಡಲು ಅನುವು ಮಾಡಿಕೊಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಜನರು ಅನಕ್ಷರಸ್ಥರಾದಂತೆ

ಆಧುನಿಕತೆ ಪ್ರಭಾವದಿಂದ ಗ್ರಾಮೀಣ ಜನರು ಹೆರಿಗೆಗೆಂದು ಆಸ್ಪತ್ರೆಗೆ ತೆರಳುವುದನ್ನು ನೋಡಬಹುದು. ಹಿಂದೆ ಎಲೆ ಅಡಿಕೆಯಲ್ಲಿ ೫೧ ರೂ. ಇಲ್ಲ ೧೦೧ ರೂ ಇಟ್ಟುಕೊಡುತ್ತಿದ್ದರು. ಇಲ್ಲಿ ಉಚಿತವಾಗಿ ಆಗುತ್ತಿದ್ದ ಹೆರಿಗೆಗಳು ಈ ದಿನಗಳಲ್ಲಿ ಸಾವಿರಾರು ರೂ.ಗಳನ್ನು ಆಸ್ಪತ್ರೆಗಳಲ್ಲಿ ಖರ್ಚು ಮಾಡುತ್ತಾರೆ. ಹೆರಿಗೆಯನ್ನು ಸಾಮಾನ್ಯವಾಗಿ ಮಹಿಳೆಯರೇ ಹೆಚ್ಚಾಗಿ ಮಾಡಿಸುವುದು. ಆದರೆ ಇತ್ತೀಚಿನ ದಿನಗಳಲ್ಲಿ ಪುರುಷರು ಸಹ ಹೆರಿಗೆಗಳನ್ನು ಮಾಡಿಸುತ್ತಾರೆ. ಪುರುಷರಿಗಿಂತ ಕಡಿಮೆ ಇಲ್ಲ ಎನ್ನುವಂತೆ ಮಹಿಳೆ ಹಿಂದಿನ ದಿನಮಾನಗಳಲ್ಲಿ ವೈದ್ಯೆಯಾಗಿ ಯಾವುದೇ ಹಣ ವಸ್ತುಗಳ ನಿರೀಕ್ಷೆಯಿಟ್ಟುಕೊಳ್ಳದೆ ಸ್ವಚ್ಛ ಮನಸ್ಸಿನಿಂದ ಹೆರಿಗೆ ಮಾಡಿಸುತ್ತಿದ್ದರು.

ತಮಟಕಲ್ಲಿನ ಜನರು ಹುಟ್ಟಿದ ಮಗುವಿಗೆ ಹೆಸರಿಡುವುದನ್ನು ನಾಮಕರಣ ಎಂದು ಕರೆಯುತ್ತಾರೆ. ಹೆಸರಿಡುವುದು ಎಂದು ಕೂಡ ಕರೆಯುತ್ತಾರೆ. ಹುಟ್ಟಿದ ಮಕ್ಕಳಿಗೆ ಹೆಸರಿಡುವುದು ಅವಶ್ಯ. ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಪ್ರಸವವಾದ ೩ ಅಥವಾ ೯ ತಿಂಗಳು ತುಂಬುವ ಒಳಗೆ ಮಗುವಿಗೆ ನಾಮಕರಣ ಮಾಡುತ್ತಾರೆ. ಈ ಸಂದರ್ಭದಲ್ಲಿ ಮಗುವಿಗೆ ತಮ್ಮ ಒಕ್ಕಲಿನ ಮತ್ತು ಮನೆ ದೇವರು ಹೆಸರಿಡುವುದು ಇಂದಿಗೂ ಉಳಿದುಕೊಂಡು ಬಂದಿದೆ. ಜೊತೆಗೆ ಇತರ ಎರಡು ಹೆಸರುಗಳನ್ನು ಶಾಸ್ತ್ರ ಕೇಳಿ ಜನ್ಮ ನಾಮ ಬಂದಿರುವ ಹೆಸರನ್ನು ಒಳ್ಳೆಯ ಶುಭ ದಿನವನ್ನು ನಿಗದಿಮಾಡಿ ಬಂಧು ಮಿತ್ರರೆಲ್ಲರಿಗೂ ತಿಳಿಸಿ ನಾಮಕರಣ ಶಾಸ್ತ್ರವನ್ನು ಮಾಡುತ್ತಾರೆ. ಅಲ್ಲಿಯವರೆಗೆ ತಾಯಿ-ತಂದೆಯವರು ತಮಗೆ ಪ್ರಿಯವಾದ ಹೆಸರುಗಳಾದ ಚಿನ್ನ, ರನ್ನ, ಮುದ್ದು, ಬಂಗಾರ, ಬುಜ್ಜಿ, ಚಿನ್ನಾಡಿ, ಪುಟ್ಟ, ಜಿಂಕಿ, ಚಿಂಟು ಈ ರೀತಿಯಾಗಿ ಪ್ರೀತಿಯಿಂದ ಕರೆಯುವುದು ರೂಢಿಯಲ್ಲಿರುತ್ತದೆ. ನಾಮಕರಣವು ಸಾಮಾನ್ಯವಾಗಿ ಹೆಣ್ಣಿನ ತವರು ಮನೆಯಲ್ಲಿಯೇ ಆಗಬೇಕು. ಇದು ಈ ಪರಿಸರದಲ್ಲಿರುವ ಪದ್ಧತಿ. ಆಧುನಿಕತೆಗೆ ಒಳಗಾದ ನಂತರ ಜನರಲ್ಲಿ ಎರಡು ಹೆಸರುಗಳು ಚಾಲ್ತಿಯಲ್ಲಿರುತ್ತವೆ. ಒಂದು ಹುಟ್ಟು ಹೆಸರು ಮತ್ತೊಂದು ಅಡ್ಡ ಹೆಸರು. ಇತ್ತೀಚಿಗೆ ಇಡುವ ಹೆಸರುಗಳಲ್ಲಿ ಯಾವುದೇ ಹಿನ್ನೆಲೆ ಇಲ್ಲ. ಕರೆಯಲು ಚೆನ್ನಾಗಿದ್ದರೆ ಸಾಕೆನಿಸುತ್ತದೆ. ಹಿಂದೆಯೆಲ್ಲ ಇಡುತ್ತಿದ್ದ ಹೆಸರುಗಳು ಅವರ ಕುಲದೇವರ ಹೆಸರುಗಳಾಗಿರುತ್ತಿದ್ದವು. ತಮಟಕಲ್ಲು ಪರಿಸರದಲ್ಲಿ ಬರುವ ಕೆಲವು ಸಮುದಾಯಗಳು ಒಂದೇ ರೀತಿಯ ಆಚರಣೆಯನ್ನು ಮಾಡುತ್ತಾರೆ.

ಮಗುವಿನ ಸೋದರ ಅತ್ತೆ ನಾಮಕರಣ ಸಮಾರಂಭದಲ್ಲಿ ಮಹತ್ವದ ಪಾತ್ರವಹಿಸುತ್ತಾರೆ. ತವರು ಮನೆಯವರು ತಂದ ತೊಟ್ಟಿಲಿಗೆ ಮೊದಲು ಪೂಜೆ ಮಾಡಿ ಮಗುವಿನ ತಂದೆಯ ತಂಗಿ ಮತ್ತು ಮಗುವಿನ ತಾಯಿಯ ಅಣ್ಣ ಮತ್ತು ತಮ್ಮ ಅಂದರೆ ಮಗುವಿನ ಸೋದರ ಅತ್ತೆ ಮತ್ತು ಸೋದರ ಮಾವ ತವರು ಮನೆಯವರು ತಂದ ತೊಟ್ಟಿಲಿಗೆ ಮೊದಲು ಪೂಜೆ ಮಾಡಿ ಮಗುವಿನ ಅತ್ತೆ ಮತ್ತು ಮಾವ ಮಗುವನ್ನು ಮೂರು ಬಾರಿ ತೊಟ್ಟಿಲ ಕೆಳ ಭಾಗದಿಂದ ತೆಗೆದುಕೊಂಡು ತೊಟ್ಟಿಲ ಒಳಗೆ ಹಾಕುತ್ತಾರೆ. ತೊಟ್ಟಿಲ ಮೂರು ಮೂಲೆಗಳಲ್ಲಿ ಸಜ್ಜೆ, ಜೋಳ ಹುರುಳಿಯನ್ನು ಬೇಯಿಸಿ ಬಿಳಿಯ ಬಟ್ಟೆಯಲ್ಲಿ ಮೂರು ಗಂಟು ಕಟ್ಟಿ ಮೂಲೆಗಳಲ್ಲಿ ಹಾಕುತ್ತಾರೆ.

ಇವನ್ನು ಹೇಲ್‌ಗುಗ್ಗರಿ ಎಂಬ ಕರೆಯುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಧಾನ್ಯಗಳಿಗೆ ಬದಲಾಗಿ ಲಡ್ಡು ಅಥವಾ ಕಡಲೆ, ಸಕ್ಕರೆ ಮೂರು ಗಂಟುಗಳನ್ನು ಮಗುವಿನ ತಲೆ, ಕಾಲು ಸೊಂಟ ಭಾಗದಲ್ಲಿ ಇಡುತ್ತಾರೆ. ಗಂಟುಗಳನ್ನು ಮಗುವಿನ ಸೋದರ ಅತ್ತೆ ಮಾವಂದಿರು ಬಾಯಿಯಲ್ಲಿ ಕಚ್ಚಿಕೊಂಡು ತಟ್ಟಿ ಬಡಿದುಕೊಂಡು ಹೆಸರನ್ನು ಕೂಗುತ್ತಾ ಹೊರ ಹೋಗಬೇಕು. ಬಾಗಿಲ ಬಳಿ ಹೊರಗಡೆ ನಿಂತಿರುವವರು ಬಟ್ಟೆಯಿಂದ ಸುತ್ತಿರುವ ಟವಲ್ಲನಿಂದ ಬೆನ್ನಿಗೆ ಹೊಡೆಯುತ್ತಾರೆ. ನಂತರ ಸಂಬಂಧಿಕರಿಗೆಲ್ಲಾ ಸಿಹಿ ಊಟ ಹಾಕುತ್ತಾರೆ. ೯ ತಿಂಗಳ ನಂತರ ಮಗುವನ್ನು ತಾಯಿಯೊಂದಿಗೆ ಗಂಡನ ಮನೆಗೆ ಮಗುವಿನ ಸೋದರ ಮಾವ ತೊಟ್ಟಿಲು ತೆಗೆದುಕೊಂಡು ಬಿಟ್ಟು ಬರುತ್ತಾರೆ. ಆಕೆಯ ಗಂಡನ ಮನೆಯವರು ಅವಳ ಅಣ್ಣನಿಗೆ ತುಂಬು ಉಡುಗೊರೆ ಕೊಡುವ ವಿಶಿಷ್ಟ ಆಚರಣೆಗಳನ್ನು ಗುರುತಿಸಬಹುದು.

ಕುಂಬಾರ ಸಮುದಾಯದಲ್ಲಿ ಹೆಣ್ಣು ಮಗು ಹುಟ್ಟಿದರೆ ನಾಮಕರಣ ಸಂದರ್ಭದಲ್ಲಿ ತಟ್ಟೆಯಾಕಾರದ ಅಗಲವಾದ ಬಿದಿರಿನ ತಟ್ಟೆ (ಸಿಬ್ಬ)ಗೆ ಕೋಲಿನಿಂದ ಬಾರಿಸುತ್ತಾರೆ. ಗಂಡು ಮಗು ಹುಟ್ಟಿದಾಗ ಸ್ಟೀಲ್ ತಟ್ಟೆಯನ್ನು ಬಾರಿಸುತ್ತಾ ಶಬ್ದವನ್ನು ಮಾಡುತ್ತಾರೆ. ಈ ಆಚರಣೆಯನ್ನು ನೋಡಿದರೆ ಮಗು ಹುಟ್ಟಿನಿಂದಲೇ ಗಂಡು ಹೆಣ್ಣು ಎನ್ನುವ ತಾರತಮ್ಯವನ್ನು, ಗಂಡು ಹೆಣ್ಣಿಗಿಂತ ಶ್ರೇಷ್ಠ, ಹೆಣ್ಣು ಗಂಡಿಗಿಂತ ಕನಿಷ್ಠ ಎನ್ನುವ ಭಾವನೆಯನ್ನು ಕುಟುಂಬದ ಸದಸ್ಯರಿಂದಲೇ ಪ್ರಾರಂಭವಾಗುವುದನ್ನು ಗುರುತಿಸಬಹುದು. ಲಿಂಗಾಯತ ಸಮುದಾಯದಲ್ಲಿ ಮಗು ಹುಟ್ಟಿದ ೩ ದಿನದಲ್ಲಿ ನಾಮಕರಣ ಮಡುತ್ತಾರೆ. ಲಿಂಗದ ಕಾಯಿಯನ್ನು ಕೈಗೆ ಕಟ್ಟಿ ಐನೋರು ಮೂರು ಭಾರಿ ಹೆಸರನ್ನು ಕರೆಯುತ್ತಾರೆ. ಮತ್ತೆ ಮೂರು ತಿಂಗಳಲ್ಲಿ ತೊಟ್ಟಿಲ ಪೂಜೆ ಮಾಡಿ ತೊಟ್ಟಿಲಿಗೆ ಮಗುವನ್ನು ಹಾಕುತ್ತಾರೆ. ಮಗುವಿನ ಸೋದರ ಅತ್ತೆ ಮಗುವಿನ ಹೆಸರನ್ನು ಮತ್ತೆ ಕರೆಯುತ್ತಾರೆ. ಇದು ಈ ಸಮುದಾಯಗಳ ವಿಶಿಷ್ಟತೆಯಾಗಿದೆ.

**ತಲೆ ಮಂಡೆ ಕೊಡುವುದು ಅಥವಾ ಜವಳ :**

ಮಗುವು ಹುಟ್ಟಿದ ಒಂದು ಅಥವಾ ಮೂರು ವರ್ಷದಲ್ಲಿದ್ದಾಗ ಹರಕೆ ಹೊತ್ತು ದೇವರಿಗೆ ತಲೆ ಕೂದಲು ಕೊಡುವುದಕ್ಕೆ ಮಂಡೆ ಕೊಡುವುದು ಎನ್ನುತ್ತಾರೆ. ಮಗು ಚಿಕ್ಕನಿಂದಲೂ ತುಂಬ ಹಟ ಮಾಡಿದರೆ, ತಮಗೆ ಕಷ್ಟಬಂದಾಗ ಅಥವಾ ಮಗು ಅನಾರೋಗ್ಯದಿಂದ ಬಳಲುತ್ತಿದ್ದರೆ ಇಂತಹ ಸಂದರ್ಭದಲ್ಲಿ ಮಂಡೆಕೊಡುವ ಪದ್ಧತಿ ಇದೆ.

ಹಿಂದೂ ಸಮುದಾಯದ ಗಂಡು ಮಕ್ಕಳಿಗೆ ಬೆಸ ವರ್ಷದಲ್ಲಿ ಅಥವಾ ೭,೯,೧೧ನೇ ತಿಂಗಳಲ್ಲಿ ತಲೆ ಕೂದಲು ತೆಗೆಯುವ ಶಾಸ್ತ್ರ ಮಾಡುತ್ತಾರೆ. ಇದನ್ನೇ ಜವುಳ ಅಥವಾ ಮುಡಿ ತೆಗೆಯುವುದು ಎನ್ನುತ್ತಾರೆ. ಈ ಜವಳ ತೆಗೆಯುವ ಕಾರ್ಯಕ್ರಮವನ್ನು ಮನೆಯಲ್ಲಿ, ದೇವಸ್ಥಾನದಲ್ಲಿ, ಕುಲದೇವರ ಅಥವಾ ಹರಕೆ ಹೊತ್ತ ದೇವರ ಸನ್ನಿಧಿಯಲ್ಲಿ ಮಾಡುತ್ತಾರೆ. ಹಿಂದೂಗಳಲ್ಲಿ ಜವಳ ಕಾರ್ಯವನ್ನು ಸೋದರ ಮಾವ ಮಾಡಿಸುತ್ತಾನೆ. ಮಗುವನ್ನು ಮೊದಲು ತೊಡೆಯ ಮೇಲೆ

ಕೂಡಿಸಿ ಸೀಳಿದ ವೀಳ್ಯದೆಲೆಯಿಂದ ಐದು ಕಡೆಗೆ ಎಲೆಗತ್ತರಿ ಮಾಡಿ ನಂತರ ಕತ್ತರಿಯಿಂದ ೩ ಅಥವಾ ೫ ಕಡೆ ಶಾಸ್ತ್ರಕ್ಕೆ ಕತ್ತರಿಸುತ್ತಾರೆ. ಸೋದರ ಮಾವನಿಗೆ ತುಂಬ ಉಡುಗೊರೆ ಕೊಡಬೇಕು. ನಂತರ ಕ್ಷೌರಿಕರಿಂದ ತಲೆಯನ್ನು ಬೋಳಿಸುತ್ತಾರೆ. ಮಗುವಿಗೆ ಸ್ನಾನ ಮಾಡಿಸಿ ದೇವರಿಗೆ ಪೂಜೆಯಾದ ನಂತರ ಬಂಧುಗಳು ಜವಳ ತೆಗೆಸಿಕೊಂಡು ಮಗುವಿಗೆ ಬಟ್ಟೆ ಕೊಡುತ್ತಾರೆ. ಜವಳ ತೆಗೆದ ಕೂದಲನ್ನು ಬಟ್ಟೆಯಲ್ಲಿ ಕಟ್ಟಿ ದೇವರ ಸನ್ನಿಧಿಯಲ್ಲಿ ಅಥವಾ ನದಿಯಲ್ಲಿ ಬಿಟ್ಟು ಬರುತ್ತಾರೆ.

ಇನ್ನು ಕೆಲವು ಸಂದರ್ಭದಲ್ಲಿ ಮಂಡೆಯನ್ನು ಕೊಡುತ್ತಾರೆ. ಹಿಂದೂ ಧರ್ಮದಲ್ಲಿ ತಂದೆ–ತಾಯಿ ತೀರಿಕೊಂಡರೆ ಮಂಡೆ ಕೊಡುವ ಪದ್ಧತಿ ಇದೆ. ಕೆಲವರು ಹೆಂಡತಿ ಬಸುರಿಯಾದಾಗ ಗಡ್ಡ, ತಲೆಕೂದಲು ಬೋಳಿಸದೆ ಹೆರಿಗೆಯಾದ ನಂತರ ಕೂದಲು ಕೊಡುತ್ತಾರೆ. ಈ ರೀತಿ ಮಾಡುವುದರಿಂದ ಆಕೆಗೆ ಕಂಟಕ ಬಾರದಂತೆ ದೇವರಿಗೆ ಸಲ್ಲಿಸುವ ಹರಕೆಯಾಗಿದೆ. ಹೀಗೆ ಕೂದಲು ತೆಗೆಸುವುದು ಬೇರೆ ಬೇರೆ ಸಂದರ್ಭಗಳಿದ್ದರೂ ಒಟ್ಟು ಆಶಯ ಮಾತ್ರ ಒಂದೇ ಎನಿಸುತ್ತದೆ.

**ಋತುಮತಿ :** ಹುಡುಗಿಯರು ಪ್ರೌಢಾವಸ್ಥೆಗೆ ಬಂದಾಗ ಮಾಡುವ ಆಚರಣೆ ಇದಾಗಿದೆ. ಋತುಮಾತಿಯಾದವಳನ್ನು ದೊಡ್ಡವಳಾದವಳು ಎಂದು ಕರೆಯುತ್ತಾರೆ. ಹೆಣ್ಣಿಗೆ ಪ್ರಥಮ ಬಾರಿ ಋತುಸ್ರಾವ ಪ್ರಾರಂಭವಾದಾಗ ಮಾತ್ರ ಋತುಮತಿ ಕಾರ್ಯ ಮಾಡುತ್ತಾರೆ. ಸಾಮಾನ್ಯವಾಗಿ ೧೨ ಅಥವಾ ೧೪ ವರ್ಷದ ಅವಧಿಯಲ್ಲಿ ಈ ಆಚರಣೆ ಬರುತ್ತದೆ. ಋತುಮತಿಯಾದ ಹುಡುಗಿಗೆ ಹೊಸ ಬಟ್ಟೆ ತರುವುದು, ಆರತಿ ಬೆಳಗುವುದು. ಬಂಧುವರ್ಗದವರಿಗೆ ಭೋಜನವನ್ನು ಏರ್ಪಡಿಸುವುದು ಇವೇ ಮುಂತಾದ ಸಂಪ್ರದಾಯಗಳು ಇಂದಿಗೂ ಹಿಂದೂಗಳಲ್ಲಿ ಕಂಡುಬರುತ್ತವೆ. ಋತುಮತಿಯಾದಾಗ ಅವಳನ್ನು ಯಾರು ಮುಟ್ಟುವಂತಿಲ್ಲ. ಋತುಮತಿ ಆದ ಹುಡುಗಿಗೆ ಸ್ನಾನ ಮಾಡಿಸಲು ಸೋದರ ಮಾವ ಗುಂಡಿಯನ್ನು ತೆಗೆಯುತ್ತಾನೆ. ಗುಂಡಿಗೆ ಹುಡಿಗಿಯ ಅತ್ತೆಯರು ಪೂಜೆ ಮಾಡುತ್ತಾರೆ. ೫ ಅಥವಾ ೯ ಜನ ಹುಡುಗಿಯ ನೆತ್ತಿಗೆ ಹಾಲನ್ನು ವೀಳ್ಯದೆಲೆಯಲ್ಲಿ ತೆಗೆದುಕೊಂಡು ಒತ್ತುತ್ತಾರೆ. ಐದು ದಿನಗಳ ಕಾಲ ಸೋದರ ಮಾವನ ಹೆಂಡತಿ ನೀರನ್ನು ಹಾಕುತ್ತಾರೆ. ಈ ಕಾಲಾವಧಿಯಲ್ಲಿ ಮೈನೆರೆದ ಹುಡುಗಿಗೆ ಕೆಲವು ವಿಶಿಷ್ಟ ಆಹಾರವನ್ನು ಕೊಡುತ್ತಾರೆ. ಕೊಬ್ಬರಿ, ಉತ್ತುತ್ತಿ, ಒಣದ್ರಾಕ್ಷಿ, ಗೋಡಂಬಿ, ಹಣ್ಣುಗಳನ್ನು ತಿನ್ನಲು ಕೊಡುತ್ತಾರೆ. ಓಗೆ ಸಿಹಿ ತಿನ್ನುವುದರಿಂದ ಒಳಗಿನ ಕೆಟ್ಟ ರಕ್ತ ಪೂರ್ತಿಯಾಗಿ ಹೊರ ಹೋಗುತ್ತದೆ ಎಂಬ ನಂಬಿಕೆ ಇದೆ. ಮೈನೆರೆದ ಸಮಯ ಚೆನ್ನಾಗಿಲ್ಲದಿದ್ದರೆ ದಾನ ಕೊಡುತ್ತಾರೆ. ಕಾರ್ಯಕ್ರಮದ ಕೊನೆಯ ದಿನ ಊಟದ ವ್ಯವಸ್ಥೆ ಇಡುತ್ತಾರೆ. ಹುಡುಗಿಗೆ ಕೊನೆ ದಿನ ಆರತಿಯನ್ನು ಮಾಡುತ್ತಾರೆ. ಹೀಗೆ ಮಾಡುವಾಗ ಹುಡುಗಿಗೆ ಮೊದಲೇ ಗಂಡು ಗೊತ್ತಾಗಿದ್ದರೆ ಆ ಹುಡುಗನನ್ನು ಅವಳ ಜೊತೆ ಕೂರಿಸಿ ಆರತಿ ಮಾಡುತ್ತಾರೆ. ಅವರು ಸಹ ಅವಳಿಗೆ ಉಡುಗೊರೆಯನ್ನು ಕೊಡುತ್ತಾರೆ.

ಲಿಂಗಾಯಿತ ಸಮುದಾಯದಲ್ಲಿ ಈ ಆಚರಣೆಯಲ್ಲಿ ಸ್ವಲ್ಪ ಭಿನ್ನತೆ ಇರುವುದನ್ನು ನೋಡಬಹುದು. ಹೆಣ್ಣು ಋತುಮತಿಯಾದಾಗ ದಿನ ನಿತ್ಯದಂತೆ ಮನೆಯ ಒಳಗೆ ಸ್ನಾನ ಮಾಡಿಸುತ್ತಾರೆ. ಇವರಲ್ಲಿ ಐನೋರನ್ನು ಕರೆಸಿ ಋತುಮತಿಯಾದ ಹೆಣ್ಣಿಗೆ ಕರುಣಾ ಪ್ರಸಾದ ಕೊಡಿಸಿ, ಅಗಸರಿಂದ ಗೋಮಂತ್ರವನ್ನು ಹಾಕಿಸಿ ಮನೆಯನ್ನು ಶುದ್ಧಿಮಾಡಿಕೊಂಡು ಗಂಗಾ ಪೂಜೆಯನ್ನು ಮಾಡುತ್ತಾರೆ. ಋತುಮತಿಯಾದ ಸಮಯ ಚೆನ್ನಾಗಿಲ್ಲದಿದ್ದರೆ ದಾನ ಕೊಡುವುದು, ನಿಗದಿತ ದಿನಗಳವರೆಗೆ ದೇವರ ಪೂಜೆಯನ್ನು ಮಾಡಿಸುತ್ತಾರೆ.

ಆದರೆ ಇತ್ತೀಚಿನ ದಿನಗಳಲ್ಲಿ ಈ ಎಲ್ಲಾ ಆಚರಣೆಗಳು ಕಡಿಮೆಯಾಗಿ ಮೇಲ್ವರ್ಗದ ಜನರು ಮಾತ್ರವಲ್ಲದೆ ಕೆಳವರ್ಗದ ಜನರು ಸಹ ಈ ಆಚರಣೆಗಳನ್ನು ವಿಜೃಂಭಣೆಯಿಂದ ಆಚರಿಸದೆ ಗೌಪ್ಯವಾಗಿ ಕೆಲವೊಂದು ಆಚರಣೆಗಳನ್ನು ಮಾಡಿ ಮುಗಿಸುತ್ತಾರೆ. ಕಾರಣ ನೆರೆ ಹೊರೆಯವರಿಗೂ ಗೊತ್ತಾಗದಂತೆ ಮತ್ತು ಮಕ್ಕಳು ಶಾಲೆಗೆ ಹೋಗಲು ತೊಂದರೆ ಆಗುತ್ತದೆ ಎನ್ನುವ ಕಾರಣಕ್ಕೆ ವಿಜೃಂಭಣೆಯಿಂದ ಆಚರಿಸುವುದಿಲ್ಲ.

ಈ ಆಚರಣೆಯ ಸಂದರ್ಭದಲ್ಲಿ ಮಹಿಳೆಯ ಭಾಗವಹಿಸುವಿಕೆ ಹೆಚ್ಚಾಗಿರುತ್ತದೆ ಹೆಚ್ಚು ಪ್ರಾಶಸ್ತ್ಯವಿದೆ.

**ಕನ್ಯಾ ನೋಡುವ ಶಾಸ್ತ್ರ :** ಸಾಮಾನ್ಯವಾಗಿ ಬ್ರಾಹ್ಮಣ ಸಮುದಾಯ ಬಿಟ್ಟು ಉಳಿದೆಲ್ಲಾ ಸಮುದಾಯದಲ್ಲಿ ವಧುವಿದ್ದ ಕಡೆಗೆ ವರನು ಕನ್ಯಾ ನೋಡಲು ಹೋದರೆ ಬ್ರಾಹ್ಮಣರಲ್ಲಿ ವರನಿರುವ ಕಡೆಗೆ ವಧು ಹೋಗಬೇಕು. ಕನ್ಯಾ ನೋಡುವುದನ್ನು ಮುಂಚಿತವಾಗಿ ಪರಿಚಯವಿರುವವರ ಬಳಿ ಕನ್ಯೆಯ ಕಡೆಯವರ ಬೆಡಗು, ಕುಲ, ಗೋತ್ರ, ಮನೆದೇವರು ಇವುಗಳನ್ನು ಕೇಳಿ ಕೊಂಡ ನಂತರ ಹುಡುಗಿಯನ್ನು ನೋಡುತ್ತಾರೆ. ಹುಡುಗನಿಗೆ ಹುಡುಗಿ ಇಷ್ಟವಾದರೆ ಮಾತ್ರ ಹುಡುಗನ ಮನೆ ನೋಡಲು ಕರೆಯುತ್ತಾರೆ. ಇಲ್ಲವಾದರೆ ಏನು ತಿಳಿಸುವುದಿಲ್ಲ. ಸಂಪ್ರದಾಯಸ್ಥ ಮನೆಗಳಲ್ಲಿ ಇನ್ನೂ ಸಹ ಹೆಣ್ಣಿಗೆ ಗಂಡನ ಆಯ್ಕೆ ಸ್ವಾತಂತ್ರವಿಲ್ಲ. ಹೆಣ್ಣಿಗೆ ಒಪ್ಪಿಗೆ ಇರಲಿ ಬಿಡಲಿ ಹಿರಿಯರು ಒಪ್ಪಿದರೆ ನಿಶ್ಚಿತಾರ್ಥ ಮಾಡುತ್ತಾರೆ. ಪ್ರತಿಯೊಬ್ಬ ಹೆಣ್ಣು ಸಹ ತಾನು ಮದುವೆ ಆಗುವ ವ್ಯಕ್ತಿ ಹೇಗೆ ಇರಬೇಕು ಎನ್ನುವ ಕನಸೊಂದನ್ನು ಕಟ್ಟಿಕೊಂಡಿರುತ್ತಾಳೆ. ಅಭಿವ್ಯಕ್ತಿ ಸ್ವಾತಂತ್ರ್ಯವಿಲ್ಲದೆ ಅವಳ ಕನಸುಗಳು ಕನಸಾಗಿಯೇ ಉಳಿಯುತ್ತವೆ. ಇನ್ನು ಕೆಲವು ಹೆಣ್ಣು ಮಕ್ಕಳು ಹಿರಿಯರ ಮಾತನ್ನು ಧಿಕ್ಕರಿಸಿ ತಮಗೆ ಇಷ್ಟ ಬಂದವರನ್ನು ವಿವಾಹವಾಗುತ್ತಾರೆ. ಈಗಿನ ದಿನಗಳಲ್ಲಿ ಗಂಡಿನವರ ಮನೆಯನ್ನು ಹೆಣ್ಣಿನ ಕಡೆಯವರು ನೋಡಲು ಹೋಗುತ್ತಾರೆ. ಮನೆತನ ಒಪ್ಪಿಗೆಯಾದಲ್ಲಿ ಅವರವರ ಅನುಕೂಲದ ಮೇಲೆ ಮಾತುಕತೆ, ಕೊಡುಕೊಳ್ಳುವ ವಿಚಾರ ನಡೆಯುತ್ತದೆ. ಕೊಡುಕೊಳ್ಳುವ ವಿಚಾರ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ವರನಿಗೆ ಏನು ಕೊಡಬೇಕು ವಧುವಿಗೆ ಏನು ಕೊಡಬೇಕು ಎಂದು ನಿರ್ಧರಿಸುವುದು ಗಂಡು ಮಕ್ಕಳೇ ಆಗಿರುತ್ತಾರೆ. ಮಧ್ಯೆ ಹೆಣ್ಣು ಏನಾದರೂ ಹೇಳಿದರು ಅದಕ್ಕೆ ಲಕ್ಷ್ಯ ಕೊಡದೆ ಅವರದೇ ಅಂತಿಮ ತೀರ್ಮಾನವಾಗಿರುತ್ತಾದೆ.

**ನಿಶ್ಚಿತಾರ್ಥ :** ಗಂಡಿನ ಕಡೆಯ ಹಿರಿಯರಿಗೆ ಹಾಗೂ ಹೆಣ್ಣಿನ ಕಡೆಯ ಹಿರಿಯರಿಗೆ ಕನ್ಯಾ ವರಗಳು ಪರಸ್ಪರ ಒಪ್ಪಿಗೆಯಾದರೆ ಮಾತುಕತೆ ಮುಗಿಸುವ ಕಾರ್ಯ ನಡೆಸುತ್ತಾರೆ. ಈ ಕಾರ್ಯವನ್ನು ಹೆಣ್ಣಿನವರ ಮನೆಯಲ್ಲಿ ಒಂದು ಗೊತ್ತಾದ ದಿನದಂದು ನೆಡೆಸುತ್ತಾರೆ. ಇದು ಬಹುತೇಕ ಎಲ್ಲ ಸಮುದಾಯದಲ್ಲೂ ಕಂಡುಬರುತ್ತದೆ. ಆಯಾ ಸಮುದಾಯದ ಹೆಣ್ಣಿನ ಗಂಡಿನ ಕಡೆಯ ಹಿರಿಯರು ಸೇರಿ ಗಂಡು ಮತ್ತು ಹೆಣ್ಣನ್ನು ಜೊತೆಯಲ್ಲಿ ಕೂರಿಸಿ ತಾಂಬೂಲವನ್ನು ಬದಲಾಯಿಸಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿಯ ಕೆಲಸವು ಮಹಿಳೆಯರದ್ದೇ ಆಗಿದೆ. ಆದರೆ ನಿರ್ಧಾರಗಳಲ್ಲಿ ಪುರುಷರದ್ದೇ ಅಂತಿಮವಾಗಿರುತ್ತದೆ. ಕೆಲವರು ನಿಶ್ಚಿತಾರ್ಥವನ್ನು ಮದುವೆ ಹಿಂದಿನ ದಿನವು ಮಾಡುತ್ತಾರೆ. ಇನ್ನು ಕೆಲವರು ೧೫ ದಿನ ಮುಂಚಿತವಾಗಿ ಮಾಡುತ್ತಾರೆ. ಹಿಂದೆಯೆಲ್ಲ ೩ ಅಥವಾ ೪ ತಿಂಗಳ ಕಾಲ ನಿಶ್ಚಿತಾರ್ಥವಾಗಿ ಅನಂತರ ಮದುವೆ ಮಾಡಿಕೊಳ್ಳುತ್ತಿದರು. ಯಾವುದೇ ಸಣ್ಣ ಕಾರಣಕ್ಕೆ ಮದುವೆ ಮುರಿದುಕೊಳ್ಳುವ ಸಾಧ್ಯತೆ ಕಡಿಮೆ ಎನ್ನುವುದು ಜನರ ನಂಬಿಕೆಯಾಗಿತ್ತು. ವಿವಾಹ ನಿಶ್ಚಯ ಸಂಪೂರ್ಣ ಹಿರಿಯರಿಂದ ಕೂಡಿತ್ತು. ಆದರೆ ಇತ್ತೀಚಿಗೆ ವಿವಾಹ ನಿಶ್ಚಯದಲ್ಲಿ ಗಂಡು ಹೆಣ್ಣಿನ ನಿರ್ಧಾರವೇ ಅಂತಿಮವಾಗುತ್ತದೆ. ಅದಕ್ಕೆ ಹಿರಿಯರು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕು.

ತಮಟಕಲ್ಲು ಪರಿಸರದಲ್ಲಿ ಆದಿ ಕರ್ನಾಟಕ ಸಮುದಾಯದವರು ನಿಶ್ಚಿತಾರ್ಥವಾದ ಮರುದಿನ ಹೆಣ್ಣಿನ ಊರಿನಲ್ಲಿ ಗಂಡಿನ ಕಡೆಯ ಒಬ್ಬರು, ಹೆಣ್ಣಿನ ಕಡೆಯ ಒಬ್ಬರು ತಮ್ಮ ಸಂಬಂಧಿಕರಿಗೆಲ್ಲ ವೀಳ್ಯವನ್ನು ಹಂಚುತ್ತಾರೆ. ಗಂಡಿನ ಅಣ್ಣ ಮತ್ತು ಹೆಣ್ಣಿನ ಅಣ್ಣ ಪರಸ್ಪರ ಬಾಯಿಯಲ್ಲಿ ಸಕ್ಕರೆಯನ್ನು ಹಾಕಿಕೊಳ್ಳುತ್ತಾರೆ. ಈ ಆಚರಣೆ ಸಂದರ್ಭದಲ್ಲಿ ಮಹಿಳೆಯರ ಭಾಗವಹಿಸುವಿಕೆ ಮತ್ತು ಮಹಿಳೆಗೆ ತುಂಬ ಪ್ರಾಮುಖ್ಯತೆ ಕೊಡಲಾಗಿದೆ.

**ಲಗ್ನ ಪತ್ರಿಕೆ ಕಟ್ಟಿಸುವುದು :**

ಮದುವೆಗೆ ನಾಲ್ಕು-ಐದು ದಿನ ಮುಂಚಿತವಾಗಿ ಗಂಡು ಮತ್ತು ಹೆಣ್ಣಿನ ಕಡೆಯ ಹಿರಿಯರು ಬಂಧು ಬಳಗದವರ ಸಮಕ್ಷಮದಲ್ಲಿ ಲಗ್ನ ಪತ್ರಿಕೆಗಳನ್ನು ಪೂಜೆ ಮಾಡುತ್ತಾರೆ. ಆಯಾ ಸಮುದಾಯಕ್ಕೆ ತಕ್ಕಂತೆ ಈ ಕಾರ್ಯವನ್ನು ಐನೋರು, ಪುರೋಹಿತರು, ಪೂಜಾರಿ ಹತ್ತಿರ ಮಾಡಿಸುತ್ತಾರೆ. ಕೆಲವರು ಮನೆ ದೇವರಿಗೆ ಮೊದಲು ಲಗ್ನಪತ್ರಿಕೆ ಕೊಡುತ್ತಾರೆ. ದೇವರೂಟದ ಹಿಂದಿನ ದಿನ ಹತ್ತಿರದ ಸಂಬಂಧಿಕರಿಗೆ, ಊರಿನವರಿಗೆ, ಅನುಕೂಲದ ಮೇರೆಗೆ ದೂರದ ಊರಿನ ಬಳಗಕ್ಕೆ ಲಗ್ನ ಪತ್ರಿಕೆ ಹಂಚುತ್ತಾರೆ.

**ಮದುವೆ :**

ಮದುವೆ ಎನ್ನುವ ಪದವನ್ನು ಗ್ರಾಮದ ಜನರು ಲಗ್ನ, ಮದುವಿ ಎಂದು ಉಚ್ಚರಿಸುತ್ತಾರೆ. ಕುಟುಂಬ ರಚನೆಯ ಚಾಲನಶಕ್ತಿಯೇ ಮದುವೆ. ಹಿಂದೂ ಸಂಪ್ರದಾಯದಲ್ಲಿ ಸಾಮಾನ್ಯವಾಗಿ

ಗಂಡಿನ ಮನೆಯಲ್ಲಿ ಮದುವೆ ನಡೆಯುತ್ತದೆ. ಈ ಹಿಂದೆ ಮದುವೆಯ ಸಂಪ್ರದಾಯ ಆಚರಣೆಗಳು ಒಂದು ವಾರದಿಂದ ೫ ದಿನಗಳವರೆಗೆ ನಡೆಯುತ್ತಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ೩ ದಿನ ಮದುವೆಯನ್ನು ಮಾಡುತ್ತಾರೆ. ಅಕ್ಕನ ಮಗಳು, ಸೋದರ ಅತ್ತೆ, ಸೋದರ ಮಾವನ ಮಗಳು ಮದುವೆಯನ್ನು ಮಾಡುತ್ತಾರೆ. ಉಳಿದ ಆಚರಣೆಗಳನ್ನು ಮನೆಯವರೆ ಮಾಡಿ ಮುಗಿಸುತ್ತಾರೆ. ವಿವಾಹವು ವಿಭಿನ್ನ ಗೋತ್ರದಲ್ಲಿ ನಡೆಯುತ್ತದೆ. ಅಕ್ಕನ ಮಗಳು, ಸೋದರ ಅತ್ತೆ, ಸೋದರ ಮಾವನ ಮಗಳ ಮದುವೆಗೆ ಹಿಂದು ಸಮಾಜದಲ್ಲಿ ಒಪ್ಪಿಗೆ ಇದೆ. ಗಂಡು ಹೆಣ್ಣುಗಳ ಜಾತಕ ಸರಿ ಬರಬೇಕು. ಇವರಿಬ್ಬರ ಕುಲ ಒಂದೇ ಆಗಿದ್ದರೆ ಮದುವೆಗೆ ಒಪ್ಪಿಗೆ ಸಿಗುವುದಿಲ್ಲ. ಅಣ್ಣ–ತಂಗಿ ಮಧ್ಯೆ ಮದುವೆ ಸಮಾಜದಲ್ಲಿ ನಿಷಿದ್ದ. ಹಿಂದೆ ರಕ್ತ ಸಂಬಂಧದಲ್ಲಿ ಮದುವೆ ಹೆಚ್ಚಾಗಿ ನಡೆಯುತ್ತಿದ್ದವು. ಇದರಿಂದ ಸಂಬಂಧ ಗಟ್ಟಿಗೊಳ್ಳುತ್ತದೆ ಎಂಬ ನಂಬಿಕೆ ಜನಪದರಲ್ಲಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ರಕ್ತಸಂಬಂಧದಲ್ಲಿ ಮದುವೆಯಾದರೆ ಅಂಗವೈಕಲ್ಯ ಮಕ್ಕಳು ಹುಟ್ಟುತ್ತವೆ ಎಂಬ ವೈಜ್ಞಾನಿಕ ತಿಳುವಳಿಕೆಯಿಂದ ಈ ರೀತಿಯ ಸಂಬಂಧ ಕಡಿಮೆಯಾಗಿದೆ. ಬಾಲ್ಯ ವಿವಾಹ ನಿಷಿದ್ಧ, ಹೆಂಡತಿ ಸತ್ತ ಗಂಡನಿಗೆ ಮರು ವಿವಾಹವಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವಿಧವೆಯರಿಗೂ ಮರುವಿವಾಹ ಆಗುವ ಅವಕಾಶವಿದೆ. ಆದರೆ ಮರುವಿವಾಹವಾಗುವವರ ಸಂಖ್ಯೆ ತುಂಬ ವಿರಳವಾಗಿ ಕಂಡುಬರುತ್ತದೆ. ಅಂತರ್‌ಜಾತಿ ವಿವಾಹಕ್ಕೆ ಜನಪದರು ಮನ್ನಣೆ ನೀಡಿಲ್ಲ. ಅಂತಹ ವಿವಾಹವಾದಲ್ಲಿ ಅಂತಹವರ ಕುಟುಂಬವನ್ನು ತಮ್ಮ ಕುಲದಿಂದ ಹೊರಹಾಕುವ, ಮನೆದೇವರಿಗೆ ಹೋಗಿ ಪೂಜೆ ಮಾಡಿಸಿ ದಂಡ ಕಟ್ಟಿಸಿಕೊಳ್ಳುವುದು ಈಗಲೂ ನಡೆಯುತ್ತವೆ. ಒಟ್ಟಾರೆ ಗ್ರಾಮ ಸಮಾಜದ ಮದುವೆಯ ನಿಯಮಗಳು ಕಟ್ಟುಕಟ್ಟಳೆಗಳಿಂದ ಕೂಡಿದ್ದು ಸಾಂಪ್ರದಾಯಿಕವಾಗಿಯೇ ಮುಂದುವರೆದಿದೆ.

**ದೇವರೂಟದ ದಾಸೋಹ :**

ಮುಹೂರ್ತದ ಹಿಂದಿನ ದಿನ ಹಂದರ ಅಥವಾ ಚಪ್ಪರ ಹಾಕಿ ಮದು ಮಕ್ಕಳನ್ನು ಮಾಡಿ ದೈವದೂಟ ನೀಡುತ್ತಾರೆ. ಆದ ಕಾರಣ ಈ ಕಾರ್ಯವನ್ನು ದೇವರ ಊಟ ಎಂದು ಕರೆಯುತ್ತಾರೆ. ಚಿಕ್ಕ ಗ್ರಾತದಲ್ಲಿ ಹಂದರವನ್ನು ಹಾಕಿ ಅದರ ಮುಂದೆ ಶಾಮಿಯಾನ ಹಾಕುತ್ತಾರೆ.

ತಮಟಕಲ್ಲು ಪರಿಸದಲ್ಲಿ ಬರುವ ಸಮುದಾಯಗಳು ದೇವರೂಟದ ಆಚರಣೆಯನ್ನು ಒಂದೊಂದು ಸಮುದಾಯದವರು ವಿಭಿನ್ನ ರೀತಿ ಆಚರಿಸುವುದನ್ನು ಇಲ್ಲಿ ಗುರುತಿಸಬಹುದು.

ನಾಯಕ ಸಮುದಾಯದಲ್ಲಿ ದಾಸೋಹ ಅಥವಾ ದೇವರೂಟದ ದಿನ ಶುಭ ವೇಳೆಯನ್ನು ನೋಡಿ ಚಪ್ಪರ ಹಾಕಲು ಒಂದು ಕಂಬವನ್ನು ನೆಟ್ಟು ಅದಕ್ಕೆ ಎಳ್ಳು ಚಿಗಣೆ ಮಾಡಿ ಪೂಜೆ ಮಾಡುತ್ತಾರೆ. ನಂತರ ಚಪ್ಪರ ಹಾಕುತ್ತಾರೆ. ಮಧು ಮಗ ಅಥವಾ ಮಧು ಮಗಳು ಉಪವಾಸದಿಂದ ಮನೆ ದೇವರಿಗೆ ಹೋಗಿ ಪೂಜೆ ಸಲ್ಲಿಸಿ ಅರಿಶಿನ ನೀರನ್ನು ಐದು ಜನ ಮುತ್ತೈದೆರು ಹಾಕಿ ಸ್ನಾನ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ಮನೆದೇವರ ಪೂಜಾರಿಯು

ಅಜ್ಜಿ ಅಥವಾ ಸೊಸೆಯ ಕೈಯಲ್ಲಿ ಮದುಮಗಳಿಗೆ ತವರಿನ ತಾಳಿಯನ್ನು ಕಟ್ಟಿಸುತ್ತಾರೆ. ಮನೆ ದೇವರ ಎದುರಲ್ಲಿಯೇ ಸ್ವಲ್ಪ ಜನಕ್ಕೆ ಸಿಹಿ ಊಟ ಹಾಕಿಸುತ್ತಾರೆ. ನಂತರ ಊರಿನ ಜನರಿಗೆಲ್ಲ ಬಂಧು ಬಳಗದವರಿಗೆ ದೇವರೂಟ ಹಾಕಿಸುತ್ತಾರೆ.

ಆದಿ ದ್ರಾವಿಡರಲ್ಲಿ ಗಂಡು ಮಕ್ಕಳಿಗೆ ಮಾತ್ರ ಮನೆದೇವರಿಗೆ ಕರೆದುಕೊಂಡು ಹೋಗಿ ಆರ್ನಿನೀರು ಹಾಕಿಸಿ ಮಧುಮಗ ಮಾಡಿಕೊಂಡು ಬರುತ್ತಾರೆ. ಹೆಣ್ಣು ಮಕ್ಕಳಿಗೆ ಈ ರೀತಿ ಮಾಡುವುದಿಲ್ಲ. ಹೆಣ್ಣು ಮಕ್ಕಳಿಗೆ ಹುತ್ತದ ಪೂಜೆ ಮಾಡಿಸಿ ಹುತ್ತದ ಬಳಿ ಹುಡುಗಿಯ ಸೋದರ ಮಾವ ತಾಳಿ ಕಟ್ಟುತ್ತಾನೆ. ಅಕ್ಕ ಅಥವಾ ತಂಗಿಯ ಮಗಳ ಮೇಲೆ ಸೋದರ ಮಾವನಿಗೆ ಮದುವೆ ಆಗುವ ಹಕ್ಕು ಇರುವುದರಿಂದ ಅವನು ತಾನು ಅವಳನ್ನು ಮದುವೆಯಾಗುವುದಿಲ್ಲ ಎಂದು ನಿರಾಕರಿಸಿದಾಗ ಬೇರೆಯವರಿಗೆ ಕೊಡುತ್ತಾರೆ. ಆದ್ದರಿಂದ ಸೋದರ ಮಾವ ತಾಳಿಯನ್ನು ಕಟ್ಟುತ್ತಾನೆ. ಪೂಜೆಯನ್ನು ಮಾಡಿಸುತ್ತಾರೆ. ಹಿರಿಯರ ಆಶೀರ್ವಾದ ಪಡೆಯುವುದಕ್ಕಾಗಿ ಹಿರಿಯರನ್ನು ಅಂದರೆ ಸತ್ತ ವ್ಯಕ್ತಿಗಳ ಆಶೀರ್ವಾದ ಪಡೆಯಲು ಹಿರಿಯರನ್ನು ಕೂರಿಸಿ ಪೂಜೆ ಮಾಡಿ ನಂತರ ಮದು ಮಕ್ಕಳನ್ನು ಮಾಡುತ್ತಾರೆ.

ಇನ್ನು ಆದಿ ಕರ್ನಾಟಕ ಸಮುದಾಯದವರು ಸಹ ವಿವಾಹದ ಪ್ರಾರಂಭದಲ್ಲಿ ಮನೆ ದೇವರಿಗೆ ಹೋಗಿ ಅರಿಶಿನ ನೀರು ಹಾಕಿಸಿದ ನಂತರ ಮಧು ಮಕ್ಕಳನ್ನು ಮಾಡುತ್ತಾರೆ. ಮನೆ ದೇವರ ಬಳಿ ಅರಿಶಿನ ನೀರು ಹಾಕುವಾಗ ಅತ್ತೆ ಮಾವ ಆಗುವವರು ಅರಿಶಿನ ನೀರನ್ನು ಹಾಕುವುದು ವಿಶಿಷ್ಟವಾಗಿದೆ. ಮದುಮಕ್ಕಳ ನೆತ್ತಿಗೆ ವೀಳ್ಯದೆಲೆಯಿಂದ ಹಾಲನ್ನು ನೆತ್ತಿಗೆ ಒತ್ತುತ್ತಾರೆ.

ಬಲಿಜಿಗ ಸಮುದಾಯದಲ್ಲಿ ಮನೆದೇವರಿಗೆ ಹೋಗುವುದಿಲ್ಲ. ಮನೆಯಲ್ಲಿಯೇ ಹಿರಿಯರ ಪೂಜೆ ಮಾಡಿ ಅರಿಶಿನವನ್ನು ಹಚ್ಚಿ ನಂತರ ಸ್ನಾನವನ್ನು ಮಾಡಿಸಿ ಮದು ಮಕ್ಕಳನ್ನು ಮಾಡುವ ಸಂಪ್ರದಾಯವಿದೆ. ಕುಂಬಾರ ಸಮುದಾಯದವರ ವಿಶೇಷತೆ ಎಂದರೆ ಮನೆ ದೇವರಿಗೆ ಹೋಗಿ ಪೂಜೆ ಸಲ್ಲಿಸಿ ಅಲ್ಲಿಯೇ ಕಂಕಣ ಕಟ್ಟಿಸಿಕೊಂಡು ಬರುತ್ತಾರೆ. ನಂತರ ಮನೆಯಲ್ಲಿ ಹೆಸರು ಬಲದ ಮೇಲೆ ಮದು ಮಕ್ಕಳಿಗೆ ಅರಿಶಿನ ಹಚ್ಚುತ್ತಾರೆ. ನಂತರ ಉಳಿದವರೆಲ್ಲ ಅರಿಶಿನ ಹಚ್ಚುತ್ತಾರೆ. ಇವರು ಬೀಸುವ ಕಲ್ಲು-ಒಳ್ಳಕಲ್ಲು ಪೂಜೆ, ಮೂರು ಓನಕೆ ಇಟ್ಟು ಪೂಜೆ ಮಾಡುತ್ತಾರೆ. ನಂತರ ಬೀಸುವ, ಕುಟ್ಟುವ ಕಾರ್ಯ ಮೂರು ಜನ ಮಾಡುತ್ತಾರೆ. ಇದು ಈ ಸಮುದಾಯದ ವಿಶಿಷ್ಟತೆ.

ಲಿಂಗಾಯತ ಸಮುದಾಯದವರು ಸಹ ಮನೆದೇವರಿಗೆ ಹೋಗಿ ಪೂಜೆ ಮಾಡಿಸಿ ಊರಿನ ಜನಕ್ಕೆ ಊಟ ಹಾಕಿಸುತ್ತಾರೆ. ಇವರಲ್ಲಿರುವ ಒಂದು ವಿಶಿಷ್ಟ ಆಚರಣೆ ಎಂದರೆ ದೇವರೂಟದ ರಾತ್ರಿ "ಬರ್ಮದೇವರು" ಎಂದು ಮಾಡುತ್ತಾರೆ. ರಾತ್ರಿ ೧೦ ಗಂಟೆಯ ಮೇಲ್ಪಟ್ಟು ತಾಳಿ ವಿವಾಹಕ್ಕೆ ತಂದು ಎಲ್ಲಾ ಬಟ್ಟೆಗಳನ್ನು ಇಟ್ಟು ಪೂಜೆ ಮಾಡಿ ಬೆಳಗಿನ ಜಾವ ೪-೫ ಗಂಟೆಗೆ ಊಟ ಮಾಡುತ್ತಾರೆ. ದೇವರೂಟ ಆಚರಣೆಯ ಸಂದರ್ಭದಲ್ಲಿ ಮಹಿಳೆಯರಿಗೆ ಹೆಚ್ಚಿನ

ಪ್ರಾಮುಖ್ಯತೆ ನೀಡಲಾಗಿದೆ. ಅರಿಶಿನ ಹಚ್ಚುವುದು, ಸ್ನಾನ ಮಾಡಿಸುವುದು, ಅಡುಗೆ ಮಾಡುವುದು ಪ್ರತಿಯೊಂದು ಕಾರ್ಯಗಳಲ್ಲಿ ಹೆಣ್ಣು ಮುಂದೆ ಇರುತ್ತಾಳೆ.

**ಸುರುಗಿ ನೀರು :**

ಬಹುತೇಕ ಸಮುದಾಯಗಳಲ್ಲಿ ಸುರಗಿ ನೀರಿನ ಪದ್ಧತಿ ಕಂಡು ಬರುತ್ತದೆ. ಮದುವೆಯ ಹಿಂದಿನ ದಿನ ಮದುಮಗ ಮತ್ತು ಮದುಮಗಳನ್ನು ಮಾಡಬೇಕಾದರೆ ಸುರಿಗೆ ನೀರು ಎರೆಯುತ್ತಾರೆ. ಕಲ್ಯಾಣ ಮಂಟಪದಲ್ಲಾದರೆ ಮದುವೆಯ ದಿನ ಬೆಳಗ್ಗೆ ಸುರಿಗೆ ನೀರು ಹಾಕುತ್ತಾರೆ. ಆದರೆ ತಮಟಕಲ್ಲು ಪರಿಸರದಲ್ಲಿ ಆದಿ ಕರ್ನಾಟಕ ಮತ್ತು ಲಿಂಗಾಯಿತ ಸಮುದಾಯದಲ್ಲಿ ಮಾತ್ರ ಸುರಗಿ ನೀರನ್ನು ಹಾಕುವ ಶಾಸ್ತ್ರ ಮಾಡುತ್ತಾರೆ. ಮಿಕ್ಕ ಸಮುದಾಯಗಳಲ್ಲಿ ಈ ಆಚರಣೆ ಕಂಡು ಬರುವುದಿಲ್ಲ, ಆದಿಕರ್ನಾಟಕರಲ್ಲಿ ಸುರುಗಿ ನೀರನ್ನು ಹಾಕುವ ಮೊದಲು ಗಂಗಾ ಪೂಜೆಯನ್ನು ಮಾಡಿಕೊಂಡು ಬಂದು ದಾರದಿಂದ ಐದು ಸುತ್ತು ಸುರಗಿ ಸುತ್ತುತ್ತಾರೆ. ಹುಡುಗ ಅಥವಾ ಹುಡುಗಿಯ ಅತ್ತೆ ಮಾವ ಮದುಮಕ್ಕಳ ಜೊತೆ ಕೂರಿಸಿ ಅರಿಶಿನ ನೀರನ್ನು ಹಾಕುತ್ತಾರೆ. ಇವರನ್ನು ಕೂರಿಸಲು ಹತ್ತಿ ಮರದ ಹಲಗೆಯನ್ನು ಕೆಳ ಭಾಗಕ್ಕೆ ಹಾಕಿ ತಲೆಗೆ ಎಣ್ಣೆ ಹಾಕಿ ಮುಖಕ್ಕೆ ಮೈಗೆಲ್ಲ ಅರಿಶಿಣ ಹಚ್ಚಿ ಬಿಸಿ ನೀರು ಮತ್ತು ತಣ್ಣೀರಿನಿಂದ ಸ್ನಾನ ಮಾಡಿಸಿ ಕೊನೆಗೆ ಅರತಿ ಮಾಡಿ ಅವರೆಲ್ಲರಿಗೂ ಹೊಸ ಬಟ್ಟೆ ಕೊಡುತ್ತಾರೆ. ಸುರಿಗೆಗೆ ಮೊದಲು ಸುರಿಗೆ ಹಾಕುವ ಸ್ಥಳದಲ್ಲಿ ಗಂಗೆ ಪೂಜೆ ಮಾಡಿಕೊಂಡು ಬಂದು ಐದು ತಂಬಿಗೆಗಳನ್ನು ಇಟ್ಟು ಐದು ಸುತ್ತು ದಾರ ಸುತ್ತುತ್ತಾರೆ. ಇದರ ಒಳಗಡೆ ನಿಂತು ಸುರಿಗೆ ನೀರು ಹಾಕಬೇಕು. ವದು ವರರು ಸುರುಗಿಗೆ ಕಾಲನ್ನು ತಾಗಿಸದಂತೆ ಹೋಗಬೇಕು. ಅವರಿಗೆ ಐದು ಜನ ಮುತ್ತೈದೆರು ಹಾಲು ತುಪ್ಪವನ್ನು ಎಲೆಯಿಂದ ಒತ್ತುತ್ತಾರೆ. ನಂತರ ಸುರಗಿ ಒಳಗೆ ಸ್ನಾನ ಮಾಡಿಸುತ್ತಾರೆ.

**ಐರಾಣಿ ತರುವುದು :**

ಬಹುತೇಕ ಸಮುದಾಯಗಳಲ್ಲಿ ಈ ಆಚರಣೆ ಇದೆ. ಐರಾಣೆ ತರುವಾಗ ಕುಂಬಾರರ ಮನೆಯವರಿಗೆ ಅಕ್ಕಿ, ಬೆಳೆ, ಬೆಲ್ಲ, ಹಣ ಇವುಗಳನ್ನು ಸಾಜಾ ಕೊಟ್ಟು ಸುಣ್ಣದಿಂದ ಚಿತ್ರಗಳನ್ನು ಬರೆದ ಚಿಕ್ಕಗಡಿಗೆಗಳಿಂದ ಹಿಡಿದು ದೊಡ್ಡ ಗಡಿಗೆಗಳವರೆಗೆ ಮತ್ತು ದೀಪಗಳು, ಬಾಸಿಂಗವನ್ನು ತಂದು ಅವುಗಳನ್ನು ದೇವಸ್ಥಾನದಲ್ಲಿ ಇಟ್ಟು ಮೆರವಣಿಗೆಯ ಮೂಲಕ ತಂದು ದೇವರ ಮನೆಯಲ್ಲಿಯೇ ಪೂಜೆ ಮಾಡುತ್ತಾರೆ. ಈ ರೀತಿ ಮಾಡುವುದು ಅಭಿವೃದ್ಧಿಯ ಸಂಕೇತವೆಂದು ಹೇಳುತ್ತಾರೆ.

**ಮದುಮಕ್ಕಳನ್ನು ಮಾಡುವುದು :**

ಮದುಮಗ ಮತ್ತು ಮದುಮಗಳನ್ನು ಒಂದು ಮಣೆಯ ಮೇಲೆ ಅಥವಾ ಇತ್ತೀಚಿನ ದಿನಗಳಲ್ಲಿ ಕುರ್ಚಿಯ ಮೇಲೆ ಕೂರಿಸಿ ಹೊಸ ಬಟ್ಟೆ ತೊಡಿಸಿ, ಕೊರಳಲ್ಲಿ ಹೂವಿನ ಹಾರ

ಹಾಕಿ ನಾನಾ ರೀತಿಯಲ್ಲಿ ಶೃಂಗರಿಸಿ ಮನೆಯಲ್ಲಿ ಆರತಿ ಮಾಡುತ್ತಾರೆ. ಮದುಮಗಳಾಗಿದ್ದರೆ ಹಸಿರು ಬಳೆ ತೊಡಿಸಿ ಕಾಲಿಗೆ ಕೆನ್ನೆಗೆ ಅರಿಸಿಣ ಹಚ್ಚುತ್ತಾರೆ. ಬಳೆ ಹಾಕಲು ಬಂದ ಬಳೆಗಾರನಿಗೆ ಅಕ್ಕಿ, ಬೇಳೆ, ಬೆಲ್ಲ, ದಕ್ಷಿಣೆ ಕೊಟ್ಟು ಕಳುಹಿಸುತ್ತಾರೆ. ಮದುಮಗ ಅಥವಾ ಮದುಮಗಳನ್ನು ಕೂರಿಸಿ ಆರತಿ ಮಾಡಿದ ಮೇಲೆ ಎಲ್ಲರೂ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ಮದುಮಕ್ಕಳಿಗೆ ಅರಿಶಿಣ ಹಚ್ಚಿದಾಗಿನಿಂದ ದೂರದ ಪ್ರಯಾಣ ಮಾಡುವಂತಿಲ್ಲ. ಹೊರಗಡೆ ಹೋದರು ಯಾರಾದರು ಜೊತೆಯಲ್ಲಿ ಕರೆದುಕೊಂಡು ಹೋಗಬೇಕು. ಮದುಮಕ್ಕಳಿಗೆ ದೃಷ್ಟಿಯಾಗಬಾರದೆಂದು ಕೆನ್ನೆಗೆ ಮತ್ತು ಅಂಗಾಲಿಗೆ ಕಾಡಿಗೆ ಬೊಟ್ಟು ಇಡುತ್ತಾರೆ.

**ಒಳ್ಳುಕಲ್ಲು ಪೂಜೆ :**

ಒಳ್ಳುಕಲ್ಲು ಮತ್ತು ಓನಕೆಯನ್ನು ತೊಳೆದು ಸುಣ್ಣ ಅರಿಶಿನ ಕುಂಕುಮದಿಂದ ಶೃಂಗರಿಸುತ್ತಾರೆ. ಐದು ಅಥವಾ ಮೂರು ಜನ ಮುತ್ತೈದೆಯರು ಸೇರಿ ಕುಟ್ಟುವ ಕೆಲಸ ಮಡುತ್ತಾ ಸೋಬಾನ ಹಾಡುಗಳನ್ನು ಹಾಡುತ್ತಾರೆ. ಈ ತಮಟಕಲ್ಲು ಪರಿಸರದಲ್ಲಿ ಆದಿ ಕರ್ನಾಟಕದ ಸಮುದಾಯದವರು ಮಾತ್ರ ಈ ಆಚರಣೆ ಮಾಡುವಾಗ ಸೋಬಾನೆ ಹಾಡು ಹಾಡುವುದು ವಿಶೇಷವಾಗಿದೆ. ಈ ಸಂದರ್ಭದಲ್ಲಿ ಪುರುಷ ಭಾಗವಹಿಸುವಿಕೆಗಿಂತ ಮಹಿಳೆಯರೆ ಎಲ್ಲ ಶಾಸ್ತ್ರಗಳನ್ನು ಮುಂದೆ ನಿಂತು ಮಾಡುವುದರಿಂದ ಮಹಿಳೆಗೆ ಇಲ್ಲಿ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದನ್ನು ಗುರುತಿಸಬಹುದು.

**ಎದುರುಗೊಂಬುವ ಶಾಸ್ತ್ರ :**

ಎದುರುಗೊಂಬುವ ಶಾಸ್ತ್ರ ಸಾಮಾನ್ಯವಾಗಿ ಚಿತ್ರದುರ್ಗ ಜಿಲ್ಲೆಯ ಕಡೆ ಮದುವೆಯ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಮದು ಮಗನ ಕಡೆಯವರನ್ನು ಅಹ್ವಾನಿಸುವ ಕಾರ್ಯ ಇದಾಗಿದೆ. ಒಂದೊಂದು ಸಮುದಾಯದವರು ವಿಭಿನ್ನ ರೀತಿಯಲ್ಲಿ ಆಚರಣೆಯನ್ನು ಮಾಡುತ್ತಾರೆ. ವರನನ್ನು ಆಹ್ವಾನಿಸಲು ವಧುವಿನ ಕಡೆಯ ಹಿರಿಯರೆಲ್ಲರೂ ಬ್ಯಾಂಡಿನೊಂದಿಗೆ ಗಂಡಿನವರು ಇದ್ದಲ್ಲಿಗೆ ಬಂದು ಸೊಸೆಯಾಗುವವರ ಗಂಡಿಗೆ ಆರತಿಯನ್ನು ತೆಗೆಯುತ್ತಾರೆ. ಇಲ್ಲಿ ನಾಯಕ ಸಮುದಾಯ ಮತ್ತು ಆದಿ ಕರ್ನಾಟಕ ಸಮುದಾಯ ಎದುರುಗೊಂಬವ ಶಾಸ್ತ್ರವನ್ನು ವಿಭಿನ್ನವಾಗಿ ಮಾಡುವುದನ್ನು ಗುರುತಿಸಲಾಗಿದೆ. ವರನ ಕಡೆಯವರು ವಧುವಿನ ಊರಿಗೆ ಬಂದಾಗ ವದುವಿನ (ಮದುಮಗಳ) ತಮ್ಮ ಅಥವಾ ಅಣ್ಣ ಆಗುವವವರು ಮದುಮಗನಿಗೆ ತಂಬಿಗೆಯಲ್ಲಿ ನೀರು ಕೊಟ್ಟು ಬೀಗರ ತಂಡವನ್ನು ಸ್ವಾಗತಿಸಿ ಅವರಿಗೆ ವಿಶ್ರಾಂತಿ ಸ್ಥಳದ ವ್ಯವಸ್ಥೆ ಮಾಡುತ್ತಾರೆ. ನಂತರ ಮದುಮಗಳ ಅಣ್ಣ ಮತ್ತು ತಮ್ಮ ಅವಳ ಅತ್ತಿಗೆಯರು ಇವರಲ್ಲಿ ಗಂಡು ಮಗ ಸೀರೆಯನ್ನು ಉಟ್ಟುಕೊಂಡು ಛತ್ರಿ ಎಂದು ಹರಿದ ಬುಟ್ಟಿಯನ್ನು ಒಂದು ಕೋಲಿಗೆ ಸಿಕ್ಕಿಸಿಕೊಂಡು ವರನ ಕಡೆಯವರು ಇರುವ ಕಡೆ ಹೋಗಿ ವರನ ಕಡೆಯ ಮೂವರು ಗಂಡು ಮಕ್ಕಳಿಗೆ ಕಂಬಳಿ ಹಾಸಿ ಸೀರೆಯನ್ನು ಉಡಿಸಿ ಅದರ ಮೇಲೆ ಕೂರಿಸಿ ಮದು ಮಗಳ ಸೀರೆ ಉಟ್ಟುಕೊಂಡವ ಇವರಿಗೆ ಮುಖ ತೊಳೆದುಕೊಳ್ಳಲು ಮುಖಕ್ಕೆ ಒಂದು ಚೆಂಬು ನೀರನ್ನು ತೆಗೆದುಕೊಂಡು ಎಲ್ಲಾರ ಮುಖಕ್ಕೆ

ಜೋರಾಗಿ ಚಿಮುಕಿಸುತ್ತಾರೆ. ನಂತರ ಅವರಿಗೆ ಹಣೆಗೆ ವಿಭೂತಿ ಕುಂಕುಮ ಇಟ್ಟು, ಮುಖಕ್ಕೆ ಪೌಡರ್ ಬದಲಾಗಿ ರಾಗಿ ಹಿಟ್ಟನ್ನು ಮುಖಕ್ಕೆ ಬಳಿಯುತ್ತಾನೆ. ಮುಖ ನೋಡಿ ಕೊಳ್ಳಲು ಕನ್ನಡಿ ಎಂದು ಒಡೆದು ಹೋದ ಸೋರೆಯ ತುಂಡಾದ ಭಾಗವನ್ನು ಕೊಡುತ್ತಾರೆ. ಮಾವಿನ ಎಲೆಯ ಹಾರ ಹಾಕಿ, ೩ ಕಪ್ಪೆಗಳನ್ನು ತಂದು ಹೊಟ್ಟೆಗೆ ಹುರಿಯನ್ನು ಕಟ್ಟಿ ಗಂಡಿನ ಕಡೆಯ ಮೂವರಿಗೆ ತಾಳಿಯೆಂದು ಕಟ್ಟುತ್ತಾರೆ. ಆ ನಂತರ ಅರಿಶಿಣ ಅಕ್ಕಿ ಹಾಕಿ ಡಬ್ಬದ ಜರಡಿ (ಸಾಣಿ)ಯನ್ನು ಕಳಸವೆಂದು ಕಳಸ ಬೆಳಗುತ್ತಾ ತಲೆಗೆ ಜರಡಿಯಿಂದ ಕುಕ್ಕುತ್ತಾರೆ. ಇದೇ ರೀತಿಯಾಗಿ ಹೆಣ್ಣಿನ ಕಡೆಯವರು ಗಂಡಿನ ಊರಿನಲ್ಲಿ ಮೂಹೂರ್ತ ನಿಗದಿಪಡಿಸಿ ಅಲ್ಲಿಗೆ ಹೋದರೆ ಇದೇ ರೀತಿ ಎದುರುಗೊಂಬುವ ಶಾಸ್ತ್ರವನ್ನು ಮಾಡುತ್ತಾರೆ. ಈ ಅಚರಣೆಯನ್ನು ಎಲ್ಲರನ್ನು ನಗಿಸಲೆಂದು ಮಾಡುತ್ತಾರೆ.

ಆದಿಕರ್ನಾಟಕ ಸಮುದಾಯದಲ್ಲಿ ಎದುರುಗೊಂಬುವ ಶಾಸ್ತ್ರ ಮಾಡುವುದು ವಿಭಿನ್ನವಾಗಿದೆ. ಹೆಣ್ಣಿನ ಊರಿಗೆ ಬಂದು ಗಂಡಿನ ಕಡೆಯ ಇಬ್ಬರಿಗೆ ಸೀರೆ ಉಡಿಸಿ ಎರಡು ತಂಬಿಗೆ ನೀರನ್ನು ತಲೆಯ ಮೇಲೆ ಹೊರಿಸಿಕೊಂಡು ಹೋಗುತ್ತಾರೆ. ಸಾಣೆಯಿಂದ ಅವರ ತಲೆಗೆ ಹೊಡೆಯುತ್ತಾರೆ. 'ಬೀರುಅಕ್ಕಿ' ಎಂದು ಅಕ್ಕಿಯನ್ನು ಪರಸ್ಪರ ವಧು ಮತ್ತು ವರನ ಕಡೆಯವರು ಎಸೆದುಕೊಳ್ಳುತ್ತಾರೆ. ಇವರು ಎರಡು ಭಾರಿ ಎದುರುಗೊಂಬುವ ಶಾಸ್ತ್ರ ಮಾಡುತ್ತಾರೆ. ಮತ್ತೊಮ್ಮೆ ಮುಹೂರ್ತ ನಂತರ ಮಾಮನೆ ಶಾಸ್ತ್ರಕ್ಕೆ ಗಂಡಿನ ಮನೆಗೆ ಹೋದಾಗ ಈ ಶಾಸ್ತ್ರವನ್ನು ಮಾಡುತ್ತಾರೆ. ಇದೆಲ್ಲ ಮುಗಿದ ನಂತರ ಉಪಹಾರ ವ್ಯವಸ್ಥೆ ಮಾಡಲಾಗಿರುತ್ತದೆ.

ಈ ಶಾಸ್ತ್ರವನ್ನು ಮಾಡುವಾಗ ಮಹಿಳೆಯರಿಗಿಂತ ಪುರುಷರ ಕೆಲಸ, ಭಾಗವಹಿಸುವಿಕೆ ಹೆಚ್ಚಾಗಿದ್ದು ಪುರುಷರು ಪ್ರಧಾನ ಪಾತ್ರವಹಿಸುತ್ತಾರೆ. ಇಲ್ಲಿ ಹೆಣ್ಣಿಗೆ ಯಾವುದೇ ಶಾಸ್ತ್ರಗಳನ್ನು ಮಾಡುವ ಅವಕಾಶವಿಲ್ಲ.

**ಕುಲದ ಗದ್ದಿಗೆ :**

ಮುಹೂರ್ತದ ಹಿಂದಿನ ರಾತ್ರಿ ದೊಡ್ಡ ವೀಳ್ಯ ನಡೆಯುತ್ತದೆ. ಕಂಬಳಿ ಅಥವಾ ಜಮಖಾನದ ಮೇಲೆ ಅಕ್ಕಿಯಿಂದ ಹಾಸಕ್ಕಿ ಹಾಕುವರು. ಸಾಮಾನ್ಯವಾಗಿ ಬೇಡರು, ಭೋವಿ, ಮಾದಿಗ, ಛಲವಾದಿ ಸಮುದಾಯದವರು ಸೂರ್ಯ, ಚಂದ್ರ, ಎಂದು ಕಂಬಳಿಯ ಮೇಲೆ ಅಕ್ಕಿಯಿಂದ ಬರೆದು ಕೆಲವರು ಕಳಸವನ್ನಿಡುತ್ತಾರೆ ಕೆಲವರು ಇಡುವುದಿಲ್ಲ. ಕಳಸವನಿಟ್ಟು ಕಾಯಿ ಒಡೆಯುವರು. ಮದುಮಗಳು ಗಂಡಿನವರು ತಂದ ಹಸಿರು ಸೀರೆಯನ್ನು ಉಟ್ಟು ಗದ್ದುಗೆಯ ಮೇಲೆ ಕೂರುತ್ತಾಳೆ. ನಂತರ ಕಂಬಳಿಯ ಮೇಲೆ ಎಲೆ-ಅಡಿಕೆಯನ್ನು ರಾಶಿ ಹಾಕಿರುತ್ತಾರೆ .ಪ್ರತಿಯೊಂದು ಸಮುದಾಯದವರು ತಮ್ಮ ಕುಲದ ಪ್ರತಿಯೊಬ್ಬರಿಗೂ ಕುಲದ ಹೆಸರನ್ನು ಕೇಳಿ ಎಲೆ-ಅಡಿಕೆಯನ್ನು ಹಂಚುತ್ತಾರೆ. ಇದನ್ನು ಕುಲದ ಗದ್ದುಗೆ ಎನ್ನುತ್ತಾರೆ. ಈ ಆಚರಣೆಯನ್ನು ತಮಟಕಲ್ಲು ಪರಿಸರದ ಲಿಂಗಾಯಿತ, ಬಲಜಿಗ, ಕುಂಬಾರ ಸಮುದಾಯದಲ್ಲಿ ಮಾಡುವುದಿಲ್ಲ.

ಈ ಶಾಸ್ತ್ರವನ್ನು ಮಾಡುವಾಗ ಪುರುಷ ಮತ್ತು ಮಹಿಳೆಯರು ಇಬ್ಬರ ಭಾಗವಹಿಸುವಿಕೆಯು ಇರುತ್ತದೆ. ಆದರೆ ಕಂಬಳಿ ಹಾಸುವ, ಎಲೆ-ಅಡಿಕೆ ಇಡುವ ಹಂಚುವ ತೆಗೆದುಕೊಳ್ಳುವ ಎಲ್ಲಾ ಕಾರ್ಯವನ್ನು ಪುರುಷರೇ ಮಾಡುತ್ತಾರೆ. ಇಲ್ಲಿ ಹೆಣ್ಣಿಗೆ ಪ್ರಾಶಸ್ತ್ಯ ಕಡಿಮೆ.

**ಮಾಂಗಲ್ಯ ಕಟ್ಟುವುದು (ಧಾರೆ ಮೂಹೂರ್ತ) :**

ವರನಿಗೆ ಮಡಿ ಧೋತ್ರ ಉಡಿಸಿ ಮೈಮೇಲೆ ಕಂಬಳಿ ಹೊದಿಸಿ ಬಾಸಿಂಗ ಕಟ್ಟಿ ಕೈಯಲ್ಲಿ ತೆಂಗಿನ ಕಾಯಿಟ್ಟು ಧಾರೆ ಮಂಟಪಕ್ಕೆ ಕರೆತರುತ್ತಾರೆ. ವಧುವಿಗೆ ಬಿಳಿ ಸೀರೆ ಉಡಿಸಿ ಅಲಂಕಾರ ಮಾಡಿ ಬಾಸಿಂಗ ತೊಡಸಿ ಕೈಯಲ್ಲಿ ತೆಂಗಿನ ಕಾಯಿಟ್ಟು ಧಾರೆ ಮಂಟಪಕ್ಕೆ ಸೋದರ ಕರೆದುಕೊಂಡು ಬರುತ್ತಾನೆ. ಧರ್ಮಶಾಸ್ತ್ರಗಳ ಪ್ರಕಾರ ಸಪ್ತಪದಿ ತುಳಿಯುವುದು, ಮಾಂಗಲ್ಯ ಕಟ್ಟುವುದು ವಿವಾಹದ ಪ್ರಮುಖ ಘಟ್ಟವಾಗಿರುತ್ತದೆ. ಎಲ್ಲ ವರ್ಗಗಳಲ್ಲಿ ಈ ಆಚರಣೆ ಪ್ರಮುಖವಾಗಿ ಕಂಡು ಬರುತ್ತದೆ. ವೀರಶೈವ, ಹರಿಜನ, ಕುಂಬಾರ, ಜಲಿಜಿಗ, ನಾಯಕ ಮುಂತಾದ ಸಮುದಾಯದವರ ಮದುವೆಯಲ್ಲಿ ಐನೋರು ಕರೆಸಿ ಕಾರ್ಯ ಮಾಡಿಸುತ್ತಾರೆ. ಮನೆ ಮುಂದೆ ವಿವಾಹವಾದರೆ ಚಪ್ಪರದ ಕೆಳಗೆ ಎಲ್ಲರ ಸಮಕ್ಷಮದಲ್ಲಿ ತಾಳಿಯನ್ನು ಕಟ್ಟುತ್ತಾರೆ. ಕಲ್ಯಾಣ ಮಂಟಪದಲ್ಲಿ ಆದರೆ ಮಂಟಪದಲ್ಲಿ ಮಾಂಗಲ್ಯ ಕಟ್ಟುತ್ತಾರೆ. ಲಿಂಗಾಯಿತ ಸಮುದಾಯದವರಲ್ಲಿ ಮಾಂಗಲ್ಯಕ್ಕಿಂತ ಮುಂಚೆ ವಧುವಿನಿಂದ ಗೌರಿ ಪೂಜೆ, ವರನ ತೀರ್ಥಯಾತ್ರೆ ಅಥವಾ ಕಾಶಿಯಾತ್ರೆ ವಿಶಿಷ್ಟ ಆಚರಣೆಗಳಾಗಿವೆ. ಹುಡುಗಿಯ ತಂದೆ ತಾಯಿಯರು ಕಾಶಿಗೆ ವಿರಕ್ತನಾಗಿ ಹೊರಟ ಅಳಿಯನನ್ನು ವಾಪಸ್ಸು ಕಲ್ಲೊಳೆದು ಕರೆತಂದು ಕನ್ಯಾದಾನ ಮಾಡುವ ಸಂಕೇತ ಇದಾಗಿದೆ. ಮಾಂಗಲ್ಯ ಕಟ್ಟುವ ಶಾಸ್ತ್ರದ ನಂತರ ಹೋಮ ಅರುಂಧತಿ ನಕ್ಷತ್ರ ದರ್ಶನ ಬಹುತೇಕ ಎಲ್ಲಾ ಸಮುದಾಯಗಳಲ್ಲಿ ಕಂಡು ಬರುತ್ತದೆ. ನಂತರ ಹಾಲಿನಲ್ಲಿ ಉಂಗುರವನ್ನು ಹಾಕಿ ಹುಡುಕಿಸುತ್ತಾರೆ. ಆ ಮೂಲಕ ಜೀವನದಲ್ಲಿ ಅಧಿಕಾರ ಚಲಾಯಿಸುವವರು ಎನ್ನುವ ನಂಬಿಕೆ ಇದೆ. ಮಾಂಗಲ್ಯ ಕಟ್ಟುವಾಗ ಪ್ರತಿಯೊಂದು ಸಮುದಾಯದವರು ಬಿಳಿಸೀರೆ, ಕುಪ್ಪಸ ವರನಿಗೆ ಬಿಳಿ ಪಂಚೆ, ಶರ್ಟು ಉಡಿಸುತ್ತಾರೆ, ಲಿಂಗಾಯತ ಸಮುದಾಯದಲ್ಲಿ ವಧುವಿನ ತಲೆ ಮೇಲೆ ವರನು, ವರನ ತಲೆಯ ಮೇಲೆ ವಧು ಜೀರಿಗೆ ಬೆಲ್ಲವನ್ನು ಹಾಕುತ್ತಾರೆ.

ಮದುವೆಯಾದ ನಂತರ ಅವರವರ ಅನುಕೂಲಕ್ಕೆ ತಕ್ಕಂತೆ ಗಂಡಿನವರು ಹೇಳಿದ ದಿವಸ ಉಡಿ ತುಂಬಿ ಗಂಡನ ಮನೆಗೆ ಮಾಮನೆ ಶಾಸ್ತ್ರಕ್ಕೆ ಕಳುಹಿಸುತ್ತಾರೆ. ಇಲ್ಲಿ ಕುಂಬಾರ ಸಮುದಾಯದವರ ಆಚರಣೆ ಬಿಟ್ಟು ಮಿಕ್ಕೆಲ್ಲ ಸಮುದಾಯದವರ ಆಚರಣೆ ಒಂದೇ ರೀತಿಯಾಗಿವೆ. ಮಾಮನೆ ಶಾಸ್ತ್ರಕ್ಕೆ ಗಂಡನ ಮನೆಗೆ ಹೋದಾಗ ಮೊದಲಿಗೆ ವದು-ವರರನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಪೂಜೆ ಸಲ್ಲಿಸಿ ನಂತರ ಮನೆ ಒಳಗೆ ಕರೆದುಕೊಳ್ಳುವ ಮೊದಲು ಬಾಗಿಲ ಪೂಜೆ ಮಾಡಿ ಮೊಳೆ ಹೊಡೆಯುವ ಶಾಸ್ತ್ರ ಮಾಡುತ್ತಾರೆ. ಇಲ್ಲಿ ವರನ ಅಕ್ಕ ಅಥವಾ ತಂಗಿಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತದೆ. ಏಕೆಂದರೆ ವರನ ಅಕ್ಕ ಅಥವಾ ತಂಗಿ ಬಾಗಿಲ

ಪೂಜೆ ಆದ ನಂತರ ವರನ ಕಾಲನ್ನು ಹಿಡಿದುಕೊಳ್ಳುತ್ತಾರೆ. ಇಲ್ಲಿ ಪ್ರಶ್ನೋತ್ತಾರೋಪಾದಿಯಲ್ಲಿ ಸಂಭಾಷಣೆ ನಡೆಯುತ್ತದೆ.

ವರನು ಅಕ್ಕನನ್ನು ಏಕೆ? ಕಾಲು ಹಿಡಿದುಕೊಂಡಿರುವೆ ಬಿಡಮ್ಮ ಎಂದು ಕೇಳುತ್ತಾನೆ. ಅಕ್ಕ: ಇಲ್ಲ ತನ್ನ ಮಗಳನ್ನು ನಿನ್ನ ಮಗನಿಗೆ ಮದುವೆ ಮಾಡಿಕೊಳ್ಳುತ್ತೇನೆ ಎಂದರೆ ಬಿಡುತ್ತೇನೆ ಎನ್ನುತ್ತಾಳೆ.

ವರ : ಇಲ್ಲ ಹಸು ಕೊಡುತ್ತೇನೆ, ಬಿಡು ಎಂದು ಹೇಳುತ್ತಾನೆ,

ಅಕ್ಕ : ಇಲ್ಲ ಬಿಡುವುದಿಲ್ಲ

ವರ : ಬಂಗಾರ ಕೊಡುತ್ತೇನೆ ಬಿಡು

ಅಕ್ಕ : ಇಲ್ಲ ಬಿಡುವುದಿಲ್ಲ

ವರ : ನನ್ನ ಹೆಂಡತಿಯನ್ನು ಕೇಳುತ್ತೇನೆ ಎಂದು ವದುವನ್ನು ಕೇಳಲು ಅಕ್ಕ ತನ್ನ ಮಗಳನ್ನು ನಮ್ಮ ಮಗನಿಗೆ ವಿವಾಹ ಮಾಡಿಕೊಳ್ಳಲು ಕೇಳುತ್ತಾಳೆ. ಮಾಡಿಕೊಳ್ಳೋಣವೆ.

ವಧು : ಅತ್ತೆ ಮಾವಂದಿರನ್ನು ಕೇಳಿ.

ವರ : ತಾಯಿ ತಂದೆಯರನ್ನು ಕೇಳುತ್ತಾನೆ

ತಾಯಿ-ತಂದೆ : ಆಗ ಹುಂ ಆಯಿತು ಮಾಡಿಕೊಳ್ಳುತ್ತೇವೆ ಎಂದು ಹೇಳು.

ವರ : ಮಾಡಿಕೊಳ್ಳುತ್ತೇನೆ.

ಅಕ್ಕ : ಕಾಲು ಬಿಡುತ್ತಾಳೆ

ನಂತರ ಬಾಗಿಲಿಗೆ ಮೊಳೆ ಹೊಡೆದು ಒಳ ಬರುತ್ತಾರೆ. ಮಾರನೆ ದಿನ ಗಂಗಾ ಪೂಜೆಯನ್ನು ಮಾಡುತ್ತಾರೆ. ವದುವನ್ನು ಸಮೀಪ ನೀರು ಇರುವ ಜಾಗಕ್ಕೆ ಕರೆದುಕೊಂಡು ಹೋಗಿ ಪೂಜೆ ಮಾಡಿ ನೀರನ್ನು ತರುತ್ತಾರೆ. ವರನು ಮನೆಯ ಹೊಸ್ತಿಲ ಬಳಿ ನಿಂತು ಗಂಗೆ ಪೂಜೆ ಮಾಡಿ ಗಂಗೆಯನ್ನು ಒಳ ಕರೆದುಕೊಳ್ಳುತ್ತಾನೆ.

ಇನ್ನು ನಾಯಕ ಸಮುದಾಯದವರು ಮೇಲೆ ಹೇಳಿದ ಆಚರಣೆಯನ್ನು ಮಾಡುತ್ತಾರೆ. ಅದರ ಜೊತೆಯಲ್ಲಿ ಒಳಗೆ ಕರೆದುಕೊಳ್ಳುವ ಮೊದಲು ಮನೆಯ ಮುಂಭಾಗದಲ್ಲಿ ಸ್ವಲ್ಪ ಜಾಗದಲ್ಲಿ ವರನು ಕಬ್ಬಿಣದ ಸಲಾಕೆಯಿಂದ ನೆಲವನ್ನು ಉಳುಮೆ ಮಾಡುತ್ತಾನೆ. ವದು ಅದೇ ಸಾಲುಗಳಲ್ಲಿ ಧಾನ್ಯಗಳನ್ನು ಬಿತ್ತನೆ ಮಾಡುತ್ತಾಳೆ. ನಂತರ ವದುವು ತಂದ ಬುತ್ತಿಯನ್ನು ಇಬ್ಬರು ತಿಂದು ಬಿತ್ತನೆ ಮಾಡಿದ ಜಾಗದಲ್ಲಿ ಕೈ ತೊಳೆದು ಮಳೆ ಬಂದಿದೆ ಎನ್ನುವ ಅರ್ಥದಲ್ಲಿ ನೀರನ್ನು ಹಾಕಿ ಹೋಗುತ್ತಾರೆ. ಈ ಆಚರಣೆಯನ್ನು ಏಕೆ ಮಾಡುತ್ತಾರೆ ಎಂದರೆ ಬಿತ್ತನೆ ಮಾಡಿದ ಧಾನ್ಯಗಳು ಮರುದಿನ ಮೊಳಕೆ ಬಂದು ಚೆನ್ನಾಗಿ ಬೆಳೆದರೆ ಇವರಿಗೆ ಮಕ್ಕಳು ಆಗುತ್ತಾರೆ ಎನ್ನುವ ನಂಬಿಕೆಯಿದೆ.

ಕುಂಬಾರ ಸಮುದಾಯದವರು ಮೊದಲು ಹೇಳಿದ ಎಲ್ಲಾ ಆಚರಣೆಗಳನ್ನು ಮಾಡುತ್ತಾರೆ. ಅವರ ಇನ್ನೊಂದು ವಿಶಿಷ್ಟ ಆಚರಣೆ ಎಂದರೆ ಮೊಳೆ ಹೊಡೆಯುವ ಶಾಸ್ತ್ರವಾದ ನಂತರ ಬಾಗಿಲ ಮೇಲೆ ಸೇರಿನ ತುಂಬ ಅಕ್ಕಿ ಒಂದು ಅಚ್ಚು ಬೆಲ್ಲ ಇಟ್ಟು ವಧುವಿಗೆ ಬಲಗಾಲಿನಿಂದ ಒದೆಯಲು ಹೇಳುತ್ತಾರೆ. ಆಗ ವಧುವು ನಿಧಾನವಾಗಿ ಒದ್ದರೇ ನಿಧಾನಸ್ಥೆ ಮನೆತನ ಮಾಡಿಕೊಂಡು ಹೋಗುತ್ತಾಳೆ ಎಂದು, ಜೋರಾಗಿ ಒದ್ದ ಇವಳು ಗಂಡನ ಜೊತೆ ಸಂಸಾರ ಮಾಡುವುದಿಲ್ಲ. ಹೊಂದಿಕೊಳ್ಳುವುದಿಲ್ಲ. ಮನೆತನ ನಡೆಸುವುದಿಲ್ಲ ಎಂದು ತಿಳಿಯುತ್ತಾರೆ. ಮತ್ತೊಂದು ಆಚರಣೆ ಮನೆಯನ್ನು ಸ್ವಚ್ಛಗೊಳಿಸಲು ಹೇಳುತ್ತಾರೆ. ಆ ಸಮಯದಲ್ಲಿ ಅವಳಿಗೆ ಹಣ ಸಿಕ್ಕಾಗ ಅತ್ತೆ-ಮಾವನಿಗೆ ಕೊಡದೇ ತಾನೇ ಇಟ್ಟುಕೊಂಡರೆ ಇವಳ ಗುಣ ನಡತೆ ಸರಿಯಿಲ್ಲ ಒಳ್ಳೆಯತನವಿಲ್ಲ ಎಂದು ತಿಳಿಯುತ್ತಾರೆ.

ಮದುವೆ ಆಚರಣೆಯಲ್ಲಿ ಮಹಿಳೆಯ ಪಾತ್ರ ಮುಖ್ಯವಾಗಿದೆ. ಪೋಷಕ ವರ್ಗದಲ್ಲಿ ಹೆಂಗಸು ತುಂಬಾ ಕೆಲಸ ಮಾಡುತ್ತಾಳೆ. ಸುಮಾರು ಎರಡು-ಮೂರು ತಿಂಗಳಿಂದಲೇ ಸಿದ್ಧತೆಯ ಕಾರ್ಯ ನಡೆಸುತ್ತಾಳೆ. ಮದುವೆ ಮಾಡುವಾಗ ಪ್ರಾರಂಭದ ದಿನಗಳಲ್ಲಿ ಹೆಣ್ಣಿನ ಮನೆಗೆ ಹೋಗಿ ವಧುದಕ್ಷಿಣೆ ಕೊಟ್ಟು ಹೆಣ್ಣು ತರುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಹೆಣ್ಣಿನ ಕಡೆಯವರು ವರದಕ್ಷಿಣೆ ಕೊಟ್ಟು ಮಗಳನ್ನು ಮದುವೆ ಮಾಡಿಕೊಡುತ್ತಾರೆ. ಇದು ಇಂದು ಸಹಜವಾಗಿದೆ.

ಹೆಣ್ಣಿನ ಹಿನ್ನಲೆಯಲ್ಲಿ ಮದುವೆಯ ಆಚರಣೆಯನ್ನು ಹೇಗೆ ಇರುತ್ತದೆ ಅಂತ ಹೇಳಬಹುದು. ಹೆಣ್ಣನ್ನು ಮದ್ಲಗಿತ್ತಿ ಮಾಡುವಾಗ ಐದು ಜನ ಮುತ್ತೈದೆಯರು ಸೇರಿಕೊಳ್ಳುತ್ತಾರೆ. ಪೂಜಾರಿ ಗದ್ದಿಗೆ (ಕರಿಕಂಬಳ) ಹಾಸುತ್ತಾನೆ. ಮನೆದೇವರ ಹೆಸರಿನಲ್ಲಿ ಗದ್ದಿಗೆ ಪೂಜೆ ಮಾಡಿ ಹುಡುಗಿಯನ್ನು ಗದ್ದಿಗೆ ಮೇಲೆ ಕೂರಿಸುತ್ತಾನೆ. ಐದು ಜನ ಮುತ್ತೈದೆಯರು ಮದ್ಲಗಿತ್ತಿ ಮೈ ಕೈಗೆ ಅರಿಶಿಣ ಲೇಪನ ಮಾಡುತ್ತಾರೆ. ತಲೆಗೆ ಹಾಲು-ತುಪ್ಪ ಹಾಕುತ್ತಾರೆ. ಶಾಸ್ತ್ರ ಮಾಡುತ್ತಾರೆ. ಆಮೇಲೆ ಸ್ನಾನ ಮಾಡಿಸುತ್ತಾರೆ. ನಂತರ ದೇವಿ ಸನ್ನಿಧಿಯಲ್ಲಿಯೇ ಹುಡುಗಿಯ ಕೈಗೆ ಕಂಕಣ ಕಟ್ಟುತ್ತಾರೆ. ಆಮೇಲೆ ಮುತ್ತೈದೆಯರು ಶಾಸ್ತ್ರ ಮಾಡುತ್ತಾರೆ. ಈ ಶಾಸ್ತ್ರ ಮುಗಿದ ಮೇಲೆ ಮದುವೆಯಾಗಿ ಮಾಮನೆಶಾಸ್ತ್ರ ಮುಗಿಯುವವರೆಗೂ ಒಬ್ಬಳೇ ಎಲ್ಲಿಯೂ ಹೋಗುವ ಹಾಗಿಲ್ಲ. ಐದು ಜನ ಮುತ್ತೈದೆಯರು ಕೈಗೆ ಕಂಕಣ ಕಟ್ಟಿಕೊಳ್ಳುತ್ತಾರೆ. ಅವರು ಅವಳ ಮದುವೆ ಶಾಸ್ತ್ರ ಮುಗಿಯುವವರೆಗೂ ಜೊತೆಯಲ್ಲಿಯೇ ಇರಬೇಕು. ಹೀಗೆ ಆ ಮುತ್ತೈದೆ ಹೆಣ್ಣು ಮಕ್ಕಳ ಪಾತ್ರ ಆ ಸಂದರ್ಭದಲ್ಲಿ ಬಹಳ ಮುಖ್ಯವಾಗುತ್ತದೆ. ದೇವರ ಮನೆಯಿಂದ ವಾಪಸು ಮನೆಗೆ ಕರೆದುಕೊಂಡು ಹೋಗಿ ಅಲ್ಲಿಯೂ ಅಂದು ರಾತ್ರಿ ಐದು ಬಾರಿ ಮದ್ಲಗಿತ್ತಿ ಶಾಸ್ತ್ರ ಮಾಡುತ್ತಾರೆ. ಅದೇ ರೀತಿ ಗಂಡಿನ ಮನೆಯಲ್ಲಿ ನಡೆಯುತ್ತದೆ.

ಬಹುಪಾಲು ಮೊದಲ ದಿನ ಮದುವೆಯ ಕಾರ್ಯಕ್ರಮವನ್ನು ದೇವರಿಗೆ ಹೆಚ್ಚಿನ ಪಾಲು ಮೀಸಲಿಡುತ್ತಾರೆ. ಆ ದಿನದಲ್ಲಿ ಕುಲಸ್ಥರು ಎಲ್ಲ ಸೇರಿಕೊಳ್ಳುತ್ತಾರೆ. ಮದುವೆಯ ಕಾರ್ಯಕ್ರಮದಲ್ಲಿ

ಮುಹೂರ್ತ ಬಹಳ ಮುಖ್ಯವಾದ ಘಟ್ಟ. ಈ ಮುಹೂರ್ತಕ್ಕೆ ನೆಂಟರಿಷ್ಟರು, ಬಂಧು, ಬಳಗ, ಪರಿಚಯದವರು ಬೇರೆ ಬೇರೆ ಸಮುದಾಯದವರು ಬಂದು ಸೇರುತ್ತಾರೆ. ಕೆಲವು ಕಡೆ ಮನೆ ದೇವರ ಪೂಜಾರಿ, ಕೆಲವು ಕಡೆ ಕುಲದ ಹಿರಿಯ ವ್ಯಕ್ತಿ, ಕೆಲವು ಕಡೆ ಊರಿನ ಐನೋರು ಕೆಲವು ಕಡೆ ಬ್ರಾಹ್ಮಣ ಪುರೋಹಿತ ಬಂದು ಹುಡುಗನಿಂದ ಹುಡುಗಿಗೆ ತಾಳಿಕಟ್ಟಿಸುವ ಶಾಸ್ತ್ರ ಮಾಡುತ್ತಾರೆ.

ತಾಳಿ ಕಟ್ಟುವ ಶಾಸ್ತ್ರ ಮಾಡುವ ಮೊದಲು ಮದ್ಲಿಂಗನ ಎದುರಿಗೆ ಮದುವೆ ಮಂಟಪದ ಕೆಳಗೆ ಕುಲದ ಮುಖ್ಯಸ್ಥರು ಸೇರಿಕೊಂಡು ಅನುಭವಿ ವ್ಯಕ್ತಿಯಿಂದ ಗದ್ದಿಗೆ ಹಾಸಿ ವೀಳ್ಯದೆಲೆಶಾಸ್ತ್ರ ಮಾಡುತ್ತಾರೆ. ಈ ಶಾಸ್ತ್ರದಲ್ಲಿ ಎಲ್ಲಾ ಕುಲಸ್ಥರಿಗೆ, ದೇವರ ತೆಗೆದುಕೊಂಡಂತೆ ಅಂತ ಭಾವಿಸಿಕೊಳ್ಳುತ್ತಾರೆ. ಮದುವೆಯ ಆಚರಣೆಯಲ್ಲಿ ಇದು ಕಂಡುಬರುತ್ತದೆ. ಈ ವೀಳ್ಯೆದೆಲೆ ಶಾಸ್ತ್ರ ಬಂದವರಲ್ಲಿ ಸೌಹಾರ್ದತೆಯ ಬೆಸುಗೆಯನ್ನು ಬೆಸೆಯುವುದಾಗಿದೆ. ಈ ಗದ್ದಿಗೆಯ ಮೇಲೆಯೇ ಗಂಡಿನವರು ತಂದಿರುವ ಧಾರೆ ಸೀರೆ, ಮದುವೆ ಸೀರೆ, ತಾಯಿ ಸೀರೆಗಳನ್ನು ಹೆಣ್ಣಿನ ಕಡೆಯ ಮೂರು ಜನರಾ ಹೆಂಗಸರನ್ನು ಕರೆಸಿಕೊಂಡು ಒಂದೊಂದಾಗಿ ಕೊಡುತ್ತಾರೆ. ಆ ಹೆಂಗಸರು ಸೀರೆಗಳನ್ನು ತೆಗೆದುಕೊಂಡು ಹೋಗಿ ಮದ್ಲಿಗಿತ್ತಿಗೆ ಅದರಲ್ಲಿನ ಧಾರೆ ಸೀರೆ ಹುಡುಗಿ ಒಡ್ಲಕ್ಕಿ ಹಾಕಿ ತಾಯಿಯ ತವರುಮನೆಯಿಂದ ತಾಳಿಯನ್ನು ಅಲ್ಲಿಯೇ ಕಟ್ಟಿಸುತ್ತಾರೆ. ಆ ಸಂದರ್ಭದಲ್ಲಿ ಸೋದರ ಮಾವನ ಹೆಗಲ ಮೇಲೆ ಹೊಸ ಬಟ್ಟೆ ಹಾಕುತ್ತಾರೆ. ಆಮೇಲೆ ಸೋದರ ಮಾವ ತನ್ನ ಸೊಸೆಯ ಕೈ ಹಿಡಿದುಕೊಂಡು ಮದ್ಲಿಂಗ ಇರುವ ಜಾಗಕ್ಕೆ ಬರುತ್ತಾನೆ. ಮದ್ಲಿಗಿತ್ತಿಯ ತಲೆಯ ತುಂಬಾ ಹೂಗಳನ್ನು ಮುಡಿಸುತ್ತಾರೆ. ಬಿಳಿಯಧಾರೆ ಸೀರೆ ಉಟ್ಟು ಹಣೆಗೆ ಬಾಸಿಂಗವನ್ನು ಕಟ್ಟಿಕೊಂಡು ಮೇಲು ಮುಸುಕು ಹಾಕಿಕೊಂಡಿರುತ್ತಾಳೆ. ಆ ಸಂದರ್ಭದಲ್ಲಿ ಮದ್ಲಗಿತ್ತಿಯ ಅಭಿಮುಖವಾಗಿ ಮದ್ಲಿಂಗ ಇರುತ್ತಾನೆ. ಅವನಿಗೂ ತಲೆಗೆ ರುಮಾಲು, ಬಿಳಿಯ ಅಂಗಿ, ಕಚ್ಚೆ ಪಂಜೆ ತೊಟ್ಟು ಹಣೆಗೆ ಬಾಸಿಂಗ ಕಟ್ಟಿರುತ್ತಾರೆ. ಆಮೇಲೆ ಪುರೋಹಿತನೋ, ಪೂಜಾರಿಯೋ, ಕುಲದ ಹಿರಿಯ ವ್ಯಕ್ತಿಯೋ ಐನರೋ ಯಾರಾದರೂ ಇವರಲ್ಲಿ ಒಬ್ಬರು ಶಾಸ್ತ್ರೋಸ್ತವಾಗಿ ತಾಳಿ ಕಟ್ಟಿಸುತ್ತಾರೆ. ಬಂದು ಸೇರಿದ ಜನರು ತಾಳಿ ಕಟ್ಟುವಾಗ ಅಕ್ಷತೆ ಕಾಳನ್ನು ಮದ್ಲಿಂಗ ಮದ್ಲಿಗಿತ್ತಿಗೆ ಹಾಕಿ ಶುಭ ಹಾರೈಸುತ್ತಾರೆ. ಆಮೇಲೆ ಬಂಧು-ಬಳಗ ನೆಂಟರಿಸ್ಟರು ನವದಂಪತಿಗಳಿಗೆ ಹಾಲು-ತುಪ್ಪ ಬಿಡುತ್ತಾರೆ. ಇದು ನವದಂಪತಿಗಳಿಗೆ ಶುಭ ಹಾರೈಸುವಂತಹ ಆಚರಣೆ.

ಮದುವೆಯಾದ ಹುಡುಗ-ಹುಡುಗಿಯರನ್ನು ಸೂರ್ಯ ನಮಸ್ಕಾರ ಮಾಡಿಸಲು ತಾಳಿ ಕಟ್ಟಿಸಿದ ಪೂಜಾರಿ ಮದುವೆ ಮಂಟಪದಿಂದ ಹೊರಗೆ ಕರೆತರುತ್ತಾನೆ. ಆಮೇಲೆ ಅವರು ಹಿರಿಯರಿಂದ ಆಶೀರ್ವಾದ ಪಡೆಯುತ್ತಾರೆ. ಬಂದಿದ್ದ ಜನರು ಹೊಸ ಜೋಡಿಗಳಿಗೆ ಮುಯ್ಯಿ ಮಾಡುತ್ತಾರೆ. ಮುಯ್ಯಿ ಎಂದರೆ ಏನಾದರೂ ವಸ್ತುಗಳನ್ನು, ಹಣವನ್ನು ನೆನಪಿಗೋಸ್ಕರ ಕೊಡುವುದು. ಅಲ್ಲಿ ಸೇರಿದ್ದ ಜನರು ಮದುವೆಯ ಊಟ ಮಾಡದೆ ಹೋಗುವುದಿಲ್ಲ. ಗಂಡು

ಮತ್ತು ಹೆಣ್ಣಿನ ತಂದೆ-ತಾಯಿಗಳ ಪಾತ್ರ ಮಿಗಿಲಾಗಿರುತ್ತದೆ. ಇಬ್ಬರ ಕಡೆಯ ಪೋಷಕರು ಬಂದಿದ್ದ ಸಂಬಂಧಿಕರಿಗೆ ಆತಿಥ್ಯ ಮಾಡಿ ಕಳುಹಿಸುತ್ತಾರೆ.

ಮದುವೆಯ ದಿನ ಹೆಣ್ಣಿನ ಪಾತ್ರ ತುಂಬಾ ಮುಖ್ಯವಾಗುತ್ತದೆ. ಇಲ್ಲಿ ಕೆಲವು ಮುಖ್ಯ ಆಚರಣೆಯಲ್ಲಿ ಪುರುಷರು ಪ್ರಧಾನರಾಗುತ್ತಾರೆ. ಅದರಲ್ಲೂ ಮದುವೆಯ ಮಂಟಪದ ಕೆಳಗೆ ಗದ್ದಿಗೆ ಹಾಸಿ ವೀಳ್ಯದೆಲೆ ಶಾಸ್ತ್ರ ಮಾಡುವಾಗ ಪುರುಷರ ಪಾತ್ರ ಹಿರಿದಾದುದು. ಆದರೆ ಮದುವಣಗಿತ್ತಿ ಮಾಮನಶಾಸ್ತ್ರ, ಗಂಗಮ್ಮನ ಶಾಸ್ತ್ರ ಮಾಡುವಾಗ ಹೆಣ್ಣುಮಕ್ಕಳ ಪಾತ್ರ ತುಂಬಾ ಮುಖ್ಯವಾಗಿರುತ್ತದೆ. ಹಾಗಾಗಿ ಹೆಂಗಸರು ಮದುವೆಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತಾರೆ. ಋತುಮತಿಯಾದ ಹೆಣ್ಣಿನ ಸೋದರ ಮಾವನಿಂದ ಹೊಂಗೆ ಅಥವಾ ಬೇವಿನ ಸೊಪ್ಪಿನ ಹಸಿರು ಗುಡಿಸಲು ಹಾಕಿಸುವರು. ಇದನ್ನು ಪರಿವಾರದವರಲ್ಲಿ ಸೊಪ್ಪು ಹಾಕೋದು ಅಂತ ಕರೀತಾರೆ. ಆ ಹಸಿರುಗುಡಿಸಲಲ್ಲಿ ಮೈನೆರೆತ ಹೆಣ್ಣು ಹತ್ತು ಹನ್ನೆರಡು ದಿನ ಒಬ್ಬಳೇ ಇರಬೇಕು. ಇವಳಿಗೆ ಈ ದಿನಗಳು ಸೂತಕ ದಿನವಾಗಿರುತ್ತವೆ. ಪ್ರಕೃತಿದತ್ತವಾಗಿ ಆ ಹೆಣ್ಣಿನ ದೇಹದಲ್ಲಿ ಋತುಚಕ್ರದ ಚಲನೆ ಉಂಟಾಗಿದ್ದರಿಂದ ಆ ಸಮಯದಲ್ಲಿ ದೇಹದಿಂದ ರಕ್ತಮಿಶ್ರಿತ ಮುಟ್ಟು ಆಗುತ್ತಿರುತ್ತವೆ. ನಿರಂತರವಾಗಿ ಸು. ೫-೬ ದಿನ ಅವಳನ್ನು ಇಂತಹ ಸಂದರ್ಭದಲ್ಲಿ ತೊಂದರೆಯಾಗುತ್ತದೆ ಎಂದು ತಿಳಿದು ತಾತ್ಕಾಲಿಕ ಹಸಿರು ಗುಡಿಸಲಿನಲ್ಲಿ ಅವಳನ್ನು ಇಡುತ್ತಾರೆ. ಆಮೇಲೆ ಕ್ರಮೇಣ ಇದು ಒಂದು ಆಚರಣೆಯಾಗಿದೆ. ಹೆಣ್ಣು ದೈಹಿಕ ಚರ್ಯೆಗಳು ಸಂಪೂರ್ಣ ಬದಲಾವಣೆಗೊಳಪಡುತ್ತವೆ.

ಪ್ರತ್ಯೇಕ ಹಸಿರು ಗುಡಿಸಲಿನಲ್ಲಿ ವಾಸಿಸುವ ಆ ಹೆಣ್ಣು ದೈಹಿಕವಾಗಿ ಬ್ಲೀಡಿಂಗ್ ಹೋಗುವುದರಿಂದ ಅವಳು ತುಂಬಾ ಕೃಶಳಾಗುತ್ತಾಳೆ. ಅಂತ ಸಂದರ್ಭದಲ್ಲಿ ನೆಂಟರಿಷ್ಟರು, ಸಂಬಂಧಿಕರು ಒಳ್ಳೊಳ್ಳೆ ಊಟ, ಸಿಹಿ ತಿಂಡಿಗಳನ್ನು ಮಾಡಿ ತಂದುಕೊಡುವರು. ಹೆಣ್ಣು ಋತುಮತಿಯಾದ ದಿನ, ಸೋದರ ಅತ್ತೆ ಅಥವಾ ಚಿಕ್ಕಮ್ಮರಿಂದ ಆ ಹೆಣ್ಣಿಗೆ ನೀರು ಹಾಕಿಸುವರು. ಋತುಮತಿಯಾದ ಹೆಣ್ಣಿಗೆ ಮೊದಲು ನೀರು ಹಾಕುವವರಿಗೆ ೧೨ನೆಯ ದಿನ ಶಾಸ್ತ್ರ ಮಾಡುವಾಗ ಹೊಸ ಸೀರೆ ಅಥವಾ ಜಾಕೀಟಿನ ಬಟ್ಟೆ ಕೊಟ್ಟು ಅವಳ ಮಡಲಿಗೆ ಒಡ್ಲಕ್ಕಿ ಹಾಕುವ ೧೨ನೇ ದಿನ ಮುಗಿಯುವವರೆಗೆ ಋತುಮತಿಯಾದ ಹೆಣ್ಣು ಹಸಿರು ಗುಡಿಸಿನಲ್ಲಿ ವಾಸ ಇರುತ್ತಾಳೆ. ಆ ದಿನಗಳಲ್ಲಿ ಅವಳ ದೇಹಕ್ಕೆ ಅರಿಶಿಣ ಬಳಿಯುವರು. ಅಂದಿನ ದಿನಗಳಲ್ಲಿ ಯಾರು ಅವಳನ್ನು ಮುಟ್ಟುವುದಿಲ್ಲ. ಆ ಸಂದರ್ಭದಲ್ಲಿ ಋತುಮತಿಯಾದ ಹೆಣ್ಣು ಸಂಪೂಣ ದಿನಪೂರ್ತಿ ವಿಶ್ರಾಂತಿಯಿಂದ ಇರುತ್ತಾಳೆ.

ಕೊನೆಯ ದಿನ ಹೆಣ್ಣನ್ನು ಎಬ್ಬಿಸುವ ಶಾಸ್ತ್ರ ಮಾಡುತ್ತಾರೆ. ಅಂದು ಪೋಷಕರು ಸಿಹಿ ಅಡಿಗೆ ಮಾಡಿಸಿರುತ್ತಾರೆ. ಶಾಸ್ತ್ರ ಮಾಡುವಾಗ ಋತುಮತಿಯಾದ ಹೆಣ್ಣಿಗೆ ಹೊಸ ಬಟ್ಟೆ ಉಡಿಸಿ ಊರ ಹೊರಗಿನ ತಂಗಡಿ ಗಿಡ ದಾಟಿಸುವರು. ಆಮೇಲೆ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಪೂಜೆ ಮಾಡಿಸುವರು. ನಂತರ ಮನೆಯ ಹತ್ತಿರ ಅವಳ ಸೋದರ ಮಾವನಿಂದ ಅವಳ

ನಾಲಿಗೆಗೆ ಬೆಂಕಿಯಿಂದ ಕಾಸಿದ ಬೇವಿನಕಡ್ಡಿ ಮುಟ್ಟಿಸುವರು. ಅಲ್ಲಿಗೆ ಅವಳ ಮೈಲಿಗೆ ಹೋಯಿತು ಅಂತ ಭಾವಿಸುತ್ತಾರೆ. ಅಂದು ರಾತ್ರಿ ಆ ಹೆಣ್ಣನ್ನು ಕೂರಿಸಿ ಆರತಿ ಮಾಡುವರು. ಅಂತಹ ಸಂದರ್ಭದಲ್ಲಿ ಅಲ್ಲಿಗೆ ಬಂದು ಸೇರಿದ್ದ ಹೆಂಗಸರ ಪಾತ್ರ ಮುಖ್ಯವಾಗುತ್ತದೆ. ಮುತ್ತೈದೆಯರು ಸೇರಿಕೊಂಡು ಸೋಬಾನೆ ಹಾಡುವರು. ಹೊಸ ಸೀರೆಯನ್ನು ಋತುಮತಿಯಾದ ಹುಡುಗಿಗೆ ಉಡಿಸಿ ಸಂಭ್ರಮಿಸುವರು. ನಂತರ ಹತ್ತಿರದ ಹಳ್ಳಕ್ಕೆ ಹೋಗಿ ಗಂಗಾದೇವತೆ ಮಾಡಿಕೊಂಡು ಬರುವರು.

ಈ ಎಲ್ಲಾ ಆಚರಣೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿದ್ದು ಎಲ್ಲಾ ಶಾಸ್ತ್ರಗಳನ್ನು ಮಹಿಳೆಯರು ನಿಂತು ಮಾಡಿಸುತ್ತಾರೆ. ಇಲ್ಲಿ ಪುರುಷನ ಕೆಲಸ ಇರುವುದಿಲ್ಲ. ಮಹಿಳೆಗೆ ಹೆಚ್ಚಿನ ಪ್ರಾಶಸ್ತ್ಯವಿದ್ದು ಪ್ರಮುಖವಾದ ಪಾತ್ರವಹಿಸುತ್ತಾಳೆ.

**ವರದಕ್ಷಿಣೆ :**

ಆಧುನಿಕ ಸಂದರ್ಭದಲ್ಲಿ ಹೆಣ್ಣು ಮಕ್ಕಳ ವಿವಾಹ ಮಾಡಬೇಕಾದರೆ ಯಾಗ ಮಾಡಿದಂತೆ ಆಗುತ್ತದೆ. ನಾಣ್ಣುಡಿಯಂತೆ ಹೇಳುವುದಾದರೆ ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು ಎಂದು ಹೇಳುತ್ತಿದ್ದರು. ಇದರಲ್ಲಿ ಮೊದಲಿದ್ದ ಅರ್ಥವನ್ನು ಕಳೆದುಕೊಂಡು ವಿವಾಹ ಮಾರುಕಟ್ಟೆಯಾಗಿದ್ದು, ಮಹಿಳೆ–ಪುರುಷರಿಬ್ಬರು ಖರೀದಿ ಮಾಡುವ ವಸ್ತುಗಳಂತೆ ತಮ್ಮ ಪಾತ್ರ ನಿರ್ವಹಿಸುತ್ತಿದ್ದಾರೆ. ಇದರಿಂದ ಬಡತನದಲ್ಲಿರುವ ಮನೆಯಲ್ಲಿ ಹೆಣ್ಣು ಮಗು ಹುಟ್ಟಿತೆಂದರೆ ಒಂದು ಹುಣ್ಣು ಹುಟ್ಟಿದಂತೆ ಎಂದು ಭಾವಿಸಿ ಅವಳನ್ನು ಚಿಕ್ಕಂದಿನಿಂದಲೇ ಮುಂದಿನ ಬದುಕಿಗೆ ತಯಾರಿಸುವುದನ್ನು ನೋಡಬಹುದು. ವಿವಾಹ ಹೆಣ್ಣಿನ ಬದುಕಿನ ಅನಿವಾರ್ಯ ಅಂಗವೆಂದು ವಿವಾಹವೆನ್ನುವುದು ಗಂಡನ ಆಸರೆ ಇರದೆ ಮಹಿಳೆಯರು ಬದುಕುವುದು ಅಸಾಧ್ಯವಾದದ್ದು ಎಂಬ ರೂಢಿ ಇಂದಿಗೂ ಬದಲಾವಣೆಗೆ ಒಳಪಡದೆ ಮುಂದುವರೆಯುತ್ತಿದೆ. (ಗೋವಿಂದರಾಜು.ಸಿ.ಆರ್. ಸಂ–೨ ಜನವರಿ ಜೂನ್ ೨೦೦೭ ಪುಟ ೯೯). ಮೊದಲು ವದುದಕ್ಷಣೆ ಪದ್ಧತಿ ರೂಢಿಯಲ್ಲಿ ಇತ್ತಂತೆ ಎಂದು ಹಿರಿಯರು ಅಭಿಪ್ರಾಯಪಡುತ್ತಾರೆ. ಮುಂದೆ ಕಾಲ ಬದಲಾದಂತೆ ವರದಕ್ಷಿಣೆ ಜಾರಿಗೆ ಬಂತಂತೆ. ಇದು ಬಂದ ನಂತರ ಹಲವಾರು ಕುಟುಂಬಗಳಲ್ಲಿ ಹಣದ ದುಸ್ಥಿತಿಯಿಂದ ಎಷ್ಟೋ ಮಹಿಳೆಯರು ಮನೆಯಲ್ಲಿ ಮದುವೆಯಾಗದೆ ಹಾಗೆ ಉಳಿದಿದ್ದಾರೆ. ಇನ್ನು ವರದಕ್ಷಿಣಿ ಕೊಟ್ಟು ಮದುವೆಯಾದಂತಹ ಮಹಿಳೆಯರು ಸಹ ತೃಪ್ತಿಯಿಂದ ಜೀವನ ನಡೆಸುತ್ತಿಲ್ಲ. ಮಗಳ ಮದುವೆಗಾಗಿ ವರನಿಗೆ ಕೇಳಿದಷ್ಟು ವರದಕ್ಷಣೆ ಕೊಡಲು ತಮ್ಮಲ್ಲಿರುವ ಹಣವನ್ನು ಸಾಲದೆ ಇದ್ದ ಹೊಲವನ್ನು ಮಾರಾಟ ಮಾಡಿ ಹೆಣ್ಣು ಮಕ್ಕಳ ಮದುವೆ ಮಾಡುತ್ತಾರೆ. ಆ ಸಾಲ ತೀರಿಸಲಾಗದೆ ತಮ್ಮ ಹೊಟ್ಟೆಪಾಡಿಗಾಗಿ ನಗರ ಪ್ರದೇಶದಲ್ಲಿ ಕೂಲಿ ಕೆಲಸ ಮಾಡಿ ಜೀವನ ನಡೆಸುವ ಕುಟುಂಬಗಳು ಒಂದೆಡೆಯಾದರೆ ಮತ್ತೊಂದು ಕಡೆ ತಮ್ಮ ಮಗಳು ಕೊಟ್ಟ ಗಂಡನ ಮನೆಯಲ್ಲಿ ಸುಖವಾಗಿ ಇರಲಿ ಎಂದು

ಶ್ರೀಮಂತರ ಹತ್ತಿರ ಬಡ್ಡಿಯಂತೆ ಸಾಲ ತಂದು ಮದುವೆ ಮಾಡುವ ನಿದರ್ಶನಗಳು ಸಾಕಷ್ಟು ನಮ್ಮಲ್ಲಿ ಸಿಗುತ್ತವೆ.

ವರದಕ್ಷಿಣೆ ಎಂಬ ಭೂತ ಆರಂಭದಲ್ಲಿ ಕೆಲವೊಂದು ಮೇಲ್ವರ್ಗಕ್ಕೆ ಮಾತ್ರ ಸೀಮಿತವಾಗಿತ್ತು. ಎಂದು ಬಡವರ ಮನೆಗಳನ್ನು ಪ್ರವೇಶ ಪಡೆಯಿತೋ ಗೊತ್ತಿಲ್ಲ. ವರದಕ್ಷಿಣೆ ಕೊಡುವುದು ಒಂದು ಪ್ರತಿಷ್ಠೆಯಾಗಿ ಇಂದು ಮುನ್ನಡೆಯುತ್ತಿದೆ. ಜೊತೆಗೆ ಇಂದು ಮಹಿಳೆಯು ರೂಪ, ಲಾವಣ್ಯ, ಹಣ, ಅಂತಃಸ್ತು ಮನೆತನಗಳ ಜೊತೆಗೆ ಉದ್ಯೋಗವು ಸಹ ಪ್ರಮುಖ ಪಾತ್ರವಹಿಸಿದೆ. ಆದರೆ ಬಹಳಷ್ಟು ತಂದೆ, ತಾಯಂದಿರು ಕೂಡ ಪರೋಕ್ಷವಾಗಿ ಅಂಥವನನ್ನು ಅಳಿಯನಾಗಿ ಮಾಡಿಕೊಳ್ಳಬೇಕು ಎನ್ನುವ ಸ್ಪರ್ಧೆಯ ಮನೋಭಾವ ಕೂಡ ಸಮಸ್ಯೆ ಮತ್ತಷ್ಟು ವೃದ್ಧಿಯಾಗಲು ಕಾರಣವಾಗಿದೆ. ಇಂದಿಗೂ ಸಹ ಮಹಿಳೆ ಮದುವೆ ಕುರಿತು ಅವರಿವರ ಮನೆಯಲ್ಲಿ ಪ್ರತಿ ವಾರ, ತಿಂಗಳಿಗೊಮ್ಮೆ ಇಂಟರ್‌ವ್ಯೂವ್ ತರಹ ವಧು ಪರೀಕ್ಷೆ ನಡೆಯುತ್ತದೆ. ಇದರಿಂದ ಮಹಿಳೆಯರಿಗೆ ಇನ್ನಷ್ಟು ಮುಜುಗರವನ್ನು ಉಂಟು ಮಾಡುತ್ತೇವೆ. ಇಂತಹ ಪ್ರಕ್ರಿಯೆಯಲ್ಲಿ ಮಹಿಳೆ ಮಾತ್ರ ಪ್ರಾಣಿಯಂತೆ ತನ್ನ ಮುಖವನ್ನು ತೋರ್ಪಡಿಸಿ ವರನಿಗೆ ಜ್ಯೂಸ್, ಚಹ ಕೊಟ್ಟು ಷೋಕೇಸಿನ ಗೊಂಬೆಯಂತೆ ಆತನ ಎದುರಿನಲ್ಲಿ ಕುಳಿತು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರಿಸಿ ಮುಂದೆ ಪ್ರಶ್ನೆ ಮಾಡಿದರೆ ಉತ್ತರವಿರಲ್ಲ ಎನ್ನುವಂತೆ ಮೌನಿಯಾಗಿದ್ದಾಳೆ. ದುರಂತವೆಂದರೆ ಮಹಿಳೆ ಮರಳಿ ವರನಿಗೆ ಪ್ರಶ್ನೆ ಮಾಡುವಂತಿಲ್ಲ. ಹಾಗೊಮ್ಮೆ ಪ್ರಶ್ನೆ ಮಾಡಿದರೆ ಕುಟುಂಬ ವರ್ಗದವರ ವಕ್ರದೃಷ್ಟಿಗೆ ಗುರಿಯಾಗಿ ತಪ್ಪಿತಸ್ಥಳಾಗುತ್ತಾಳೆ. ಇದರಿಂದ ಮಹಿಳೆಗೆ ಮಾನಸಿಕವಾಗಿ ಕ್ರೂರ ಹಿಂಸೆ ನೀಡುವ ವದು ಪರೀಕ್ಷೆಗಳು ಎಷ್ಟು ಅಗತ್ಯ ಎಂದು ನಾವುಗಳು ಚಿಂತನೆ ಮಾಡಬೇಕಾಗಿದೆ. ಇಂತಹ ಕಾರಣಗಳಿಗೆ ವರದಕ್ಷಿಣೆ ಸಮಸ್ಯೆಗಳು ಉಂಟಾಗುತ್ತವೆ. ಇದರಿಂದ ಮಹಿಳೆ ತನ್ನ ವಿವಾಹ ವಿಷಯದಲ್ಲಿ ಯಾವುದೇ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಇರುವುದಿಲ್ಲ ಎಂದು ಗುರುತಿಸಬಹುದು ಮತ್ತು ಇತ್ತೀಚೆಗೆ ಪ್ರೇಮ ವಿವಾಹಗಳು ಹೆಚ್ಚಾಗಿ ಈ ವರರಾದಕ್ಷಿಣೆ ಸಮಸ್ಯೆಯಿಂದ ಕೆಲವು ಹೆಣ್ಣು ಮಕ್ಕಳು ಪಾರಾಗುತ್ತಿದ್ದಾರೆ ಎಂದು ತಿಳಿಯಬಹುದು.

ಮಹಿಳೆಯು ಪುರುಷನಂತೆ ಸಮಾಜದ ಎಲ್ಲಾ ವಲಯಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಆರ್ಥಿಕವಾಗಿ ಸದೃಢವಾದಾಗ ಮಾತ್ರ ನಮ್ಮ ಸಮಾಜದಲ್ಲಿ ಲಿಂಗ ತಾರತಮ್ಯ ನಶಿಸಿ ಹೋಗುತ್ತದೆ ಎಂದು ನಂಬಲಾಗಿದೆ.

ಸಮಾಜದಲ್ಲಿ ಮಹಿಳೆಯು ಪುರುಷನಷ್ಟೆ ಅಥವಾ ಅವನಿಗಿಂತ ಹೆಚ್ಚು ಶ್ರಮಿಸುತ್ತಾಳೆ. ಇಡೀ ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ಮಹಿಳೆ ಪ್ರಮುಖವಾದ ಪಾತ್ರವಹಿಸುತ್ತಾಳೆ. ಪುರುಷನಷ್ಟೆ ಜಾಣತನ ಮತ್ತು ದೈಹಿಕ ಬಲವನ್ನೂ ವಿನಿಯೋಗಿಸಿದರು ಸಹ ಶ್ರಮಿಸಿದಂತಹ ಫಲಿತದ ಮೇಲೆ ಮಹಿಳೆಗೆ ಯಾವ ಹಕ್ಕು ಇಲ್ಲ. ಜೊತೆಗೆ ಕುಟುಂಬ ನಿರ್ವಹಣೆಯಲ್ಲೂ ತನ್ನ ವಿಧೇಯತೆ ಸಹನೆಗಳಿಂದ ತೊಡಗಿಸಿಕೊಂಡರೂ ಸಹ ಮಹಿಳೆ ಪರಾಧೀನಳಾಗಿಯೇ ಜೀವಿಸುತ್ತಿದ್ದಾಳೆ.

ಇದರಿಂದಾಗಿ ಆರ್ಥಿಕ ಸ್ವಾವಲಂಬನೆಯೂ ಅಂತಿಮವಾಗಿ ಸಾಮಾಜಿಕ ಮತ್ತು ರಾಜಕೀಯವಾಗಿ ಸ್ವಾತಂತ್ರ್ಯವನ್ನು ದೊರಕಿಸಿಕೊಡುತ್ತದೆ ಎಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಅಸಮಾನತೆಯ ಸ್ವರೂಪ ಕೇವಲ ಆರ್ಥಿಕ ಪರಾವಲಂಬಿತನಕ್ಕೆ ಮಾತ್ರ ಅನ್ವಯಿಸಿದ ಸಂಗತಿಯಲ್ಲ ಅದನ್ನು ಒಳಗೊಂಡಂತೆ ಸಾಂಸ್ಕೃತಿಕ ಮತ್ತು ರಾಜಕೀಯ ವಿಷಯಗಳಿಗೂ ಸಂಬಂಧಿಸಿದೆ. ಏಕೆಂದರೆ ಭಾರತದಂತ ದೇಶದಲ್ಲಿ ಶೋಧಿಸುವಂತಹ ಹಲವಾರು ಮುಖಗಳು ಅತೀ ಹೆಚ್ಚು ಸಂಕೀರ್ಣವಾಗಿವೆ. ಅದರ ಜೊತೆಗೆ ಕಾಲದಿಂದ ಕಾಲಕ್ಕೆ ಈ ಮುಖಗಳ ಸ್ವರೂಪ ಮತ್ತು ತೀವ್ರತೆಯಲ್ಲಿ ಅನೇಕ ಲಿಂಗ ಸಂಬಂಧಿ ಅಸಮಾನತೆಗಳು ಭಾರತದ ಬಹುಮುಖ್ಯ ಶ್ರೇಣೀಕರಣ ಮತ್ತು ಅಸಮಾನ್ಯ ವ್ಯವಸ್ಥೆಗಳು ಇಲ್ಲಿ ಜೀವಿಸುತ್ತಿರುವ ವೈವಿಧ್ಯಮಯ ಸಮಾಜಗಳಲ್ಲಿ ಅತ್ಯಂತ ಸಂಕೀರ್ಣಗೊಂಡು ಅಂತರ್ಗತವಾಗಿವೆ. ಹಾಗೂ ಇಲ್ಲಿರುವಂತಹ ಶ್ರೇಣೀಕರಣ ಮತ್ತು ಅಸಮಾನ ವ್ಯವಸ್ಥೆಗಳು ಮಹಿಳೆಯರನ್ನು ಪ್ರಮುಖ ವಸ್ತುಗಳನ್ನಾಗಿ ಪರಿಭಾವಿಸಿವೆ. ವಸ್ತುಗಳೆಂದರೆ ಜೀವವಿಲ್ಲದ ಸಂವೇದನೆ ಮತ್ತು ಭಾವನೆಗಳೇ ಇಲ್ಲದ ಕೇವಲ ಬಳಸಲ್ಪಡುವ ಉಪಕರಣಗಳಂತೆ ಮಹಿಳೆಯರನ್ನು ಪರಿಗಣಿಸಲ್ಪಟ್ಟಿದ್ದಾರೆ.

**ನೀತಿ, ನಿರ್ಧಾರಗಳಲ್ಲಿ ಮಹಿಳೆ :**

ವಿವಾಹವು ಇಡೀ ವಿಶ್ವದಾದ್ಯಂತ ಅಸ್ತಿತ್ವದಲ್ಲಿರುವಂಥ ಒಂದು ಸಾಮಾಜಿಕ ಸಂಸ್ಥೆ. ಈ ಪ್ರಕ್ರಿಯೆಯು ಒಂದು ಮೂಲಭೂತವಾದ ಒಪ್ಪಂದವಾಗಿದೆ. ಮಲಿನೋಸ್ಕಿಯ ದೃಷ್ಟಿಯಲ್ಲಿ 'ಸಂತತಿಯ ಸೃಷ್ಟಿಗಾಗಿ ಹಾಗೂ ಆ ಸಂತತಿಯ ಪಾಲನೆ ಪೋಷಣೆಗಾಗಿ ವ್ಯಕ್ತಿಗಳು ಮಾಡಿಕೊಂಡಿರುವ ಒಪ್ಪಂದವೇ ವಿವಾಹ'. (ಇಂದಿರಾ.ಆರ್ ೨೦೦೨ ಪುಟ ೨೭) ಸಮಾಜದಲ್ಲಿ ಇರುವಂತಹ ಹಿರಿಯರ ಸಮ್ಮುಖದಲ್ಲಿ ಮದುವೆ ದಿನದಂದು ಎಲ್ಲಾ ಕೆಲಸ ಕಾರ್ಯಗಳಲ್ಲಿ ನನ್ನ ಸಮಾನಳಾಗಿ ಕಾಣುತ್ತೇನೆಂದು ಪ್ರತಿಜ್ಞೆ ಮಾಡಿರುತ್ತಾನೆ. ಇಂತಹ ಪ್ರತಿಜ್ಞೆಗಳು ಅಂದಿನ ಸಂದರ್ಭಕ್ಕೆ ಮಾತ್ರ ಸೀಮಿತವಾಗಿವೆ, ಹೊರತು ಮಹಿಳೆಯ ಮುಂದಿನ ಜೀವನದಲ್ಲಿ ಪುರುಷನ ಸಮಬಲವಾಗಿ ನಿಂತು ಮಾತನಾಡುವ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳುವ ತೀರ್ಮಾನವು ಕನಸಿನಲ್ಲೂ ಕಾಣಲು ಸಾಧ್ಯವಿಲ್ಲ.

ವಿವಾಹದ ಸಂದರ್ಭದಲ್ಲಿ ನೀತಿ, ನಿರ್ಣಯ ತೆಗೆದುಕೊಳ್ಳುವಂತಹ ಅಲ್ಪಸ್ವಲ್ಪ ಹಕ್ಕು ಸ್ತ್ರೀಯರಿಗೆ ಇರುತ್ತದೆ. ಅತ್ಯಂತ ಬಡತನದಿಂದ ಜೀವಿಸುತ್ತಿರುವ ಕುಟುಂಬಗಳಲ್ಲಿ ತಮ್ಮ ಹೆಣ್ಣು ಮಕ್ಕಳಿಗೆ ಮದುವೆ ಮುಖ್ಯವಾಗಿರುವುದೇ ಹೊರತು ಅವರ ಬೌದ್ಧಿಕ ಬೆಳವಣಿಗೆಯಲ್ಲ. ಈ ಪ್ರವೃತ್ತಿಯಲ್ಲೂ ಇಂದಿಗೂ ಬಹುತೇಕ ಕುಟುಂಬಗಳಲ್ಲಿ ಜಾರಿಯಲ್ಲಿರುವುದನ್ನು ನೋಡಬಹುದು. ಈ ಎಲ್ಲಾ ಅಂಶಗಳಿಂದ ತಿಳಿದುಬರುವುದೇನೆಂದರೆ ಎಲ್ಲಾ ಸಮುದಾಯದಲ್ಲಿ ಮಹಿಳೆಯು ನೇಪಥ್ಯಕ್ಕೆ ಸರಿಯುತ್ತಿದ್ದಾಳೆ ಹೊರತು ಪುರುಷನ ಸರಿಸಮಾನವಾದ ಸ್ಥಾನಮಾನ ಪಡೆಯುವಲ್ಲಿ ಒಂದೆ ಉಳಿದಿದ್ದಾಳೆ. ಇಂದು ಮಹಿಳೆಯಲ್ಲಿ ಬೌದ್ಧಿಕ ನೈಪುಣ್ಯತೆ ತರುವಂಥ ಜರೂರತೆಯಿದೆ. ಹೀಗಾದಾಗ ಮಾತ್ರ ಸಮಾಜದಲ್ಲಿ ಓರ್ವ ವ್ಯಕ್ತಿಯಾಗಿ ಪ್ರತಿನಿಧಿಕರಣವಾಗಲು ಸಾಧ್ಯ.

**ಶವ ಸಂಸ್ಕಾರ ಪದ್ಧತಿ :**

ಮನುಷ್ಯನ ದೇಹ ಜನನ ಪೂರ್ವದಿಂದಲೂ ಆಚರಣೆ, ಸಂಸ್ಕಾರಗಳಿಗೆ ಒಳಪಟ್ಟಿದೆ. ದೇಹದ ಮರಣಾನಂತರವೂ ಅನೇಕ ಸಂಸ್ಕಾರಗಳು ನಡೆಯುತ್ತವೆ. ಸಾವು ಎಲ್ಲರಿಗೂ ಬರುತ್ತದೆ. ಆದರೆ ಯಾವಾಗ ಹೇಗೆ ಎಂಬುದು ಗೊತ್ತಾಗುವುದಿಲ್ಲ. ಕೆಲವು ವಯೋವೃದ್ಧರು ಕಾಯಿಲೆಯಿಂದ ಬಳಲಿ, ಅಪಾಯಕ್ಕೀಡಾದವರಿಗೆ ಸಾವಿನ ಅಂಚಿನಲ್ಲಿರುವಾಗ ಅವರಿಗೆ ತಾವು ಸಾಯುವುದು ಖಾತ್ರಿಯಾಗುವುದರಿಂದ ತಮ್ಮ ಕೊನೆಯ ಆಸೆಗಳನ್ನು ಹೇಳುತ್ತಾರೆ ಹಾಗೂ ಸಾಯುತ್ತಿರುವ ವ್ಯಕ್ತಿಗೆ ಅವನು ಇಚ್ಚೆಪಡುವ ವ್ಯಕ್ತಿಯಿಂದ ಹಣ್ಣು, ಚಹ ಅಥವಾ ನೀರು ಕುಡಿಸುತ್ತಾರೆ. ಹುಟ್ಟುವ ಮನುಷ್ಯ ಸಾಯಿಲೇಬೇಕು. ಆಯಾ ಸಮುದಾಯದ ಸಂಪ್ರದಾಯಕ್ಕೆ ಅನುಗುಣವಾಗಿ ಶವವನ್ನು ಬಿದಿರಿನ ಚೆಟ್ಟದ ಮೇಲೆ ಮಲಗಿಸಿ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಪಂಚಭೂತಗಳಿಂದ ಆದ ಶರೀರವನ್ನು ಪಂಚಭೂತಗಳಲ್ಲಿ ಲೀನ ಮಾಡುವಾಗ ದೇಹದಿಂದ ಬಿಟ್ಟು ಹೋದ ಆತ್ಮಕ್ಕೆ ಒಂದು ಉತ್ತಮವಾದ ನೆಲೆಯನ್ನು ಅನುಸಂಧಾನ ಮಾಡುವ ಉದ್ದೇಶ ಆಗಿರುತ್ತದೆ. ಆದ್ದರಿಂದ ಅವು ಅಂತ್ಯಕ್ರಿಯೆಗಳಷ್ಟೆ ಅಲ್ಲ ಅವು ಉತ್ತರ ಕ್ರಿಯೆಗಳು. ಅವು ಅನೇಕ ಶಾಸ್ತ್ರ ವಿಧಿಗಳಿಂದ ಕೂಡಿರುವುದರಿಂದ ನಾವು ಇದನ್ನು ಸಂಸ್ಕಾರ ಎಂದು ಪರಿಗಣಿಸಬಹುದು. ವ್ಯಕ್ತಿ ಕೆಲವೇ ನಿಮಿಷಗಳಲ್ಲಿ ಪ್ರಾಣ ಬಿಡುತ್ತಾನೆ ಎಂದು ಗೊತ್ತಾದಾಗ ಮನೆಯಿಂದ ಹೊರಗಡೆ ಹಾಸಿಗೆ ಹಾಸಿ ಮಲಗಿಸುತ್ತಾರೆ. ವ್ಯಕ್ತಿ ಮನೆಯ ಒಳಗಡೆ ಸಾಯಬಾರದು. ಆ ವ್ಯಕ್ತಿಯ ಉಸಿರು ಮನೆಯಲ್ಲೇ ಸೇರಿ ಬಿಡುತ್ತದೆ ಅವರಿಗೆ ಮುಕ್ತಿ ಸಿಗುವುದಿಲ್ಲ ಎಂಬುದು ಇಲ್ಲಿನ ಜನರ ನಂಬಿಕೆ. ಮನೆಯ ಒಳಗಡೆ ಸತ್ತ ಗಳಿಗೆ ಸರಿಯಿಲ್ಲ ಎಂದು ಶಾಸ್ತ್ರ ಕೇಳಿ ಗೊತ್ತಾದಾಗ ಮೂರು ಅಥವಾ ಆರು ತಿಂಗಳು, ಒಂದು ವರ್ಷಗಳ ಕಾಲ ಮನೆಯನ್ನು ತೊರೆಯಬೇಕಾಗುತ್ತದೆ. ಆದ್ದರಿಂದ ಪ್ರಾಣ ಹೋಗುವ ಮುನ್ನ ಹೊರಗಡೆ ಇಡುವುದು ಇಲ್ಲಿನ ಸಂಸ್ಕೃತಿಯಾಗಿದೆ.

ಸತ್ತ ವ್ಯಕ್ತಿಯ ದೇಹಕ್ಕೆ ಬಿಳಿಯ ಬಟ್ಟೆಯನ್ನು ತೊಡಿಸಿ ಮೂಗಿಗೆ ಹತ್ತಿ ಅರಳೆ ಇಟ್ಟು ಕಾಲಿನ ಎರಡು ಹೆಬ್ಬೆರಳುಗಳನ್ನು ಜೋಡಿಸಿ ಬೆರಳುಗಳನ್ನು ದಾರದಿಂದ ಕಟ್ಟುತ್ತಾರೆ. ಕಣ್ಣು ಮುಚ್ಚಿ ಮುಖಕ್ಕೆ ವಿಭೂತಿ ಕುಂಕುಮ ಇಟ್ಟು ಪಕ್ಕದಲ್ಲಿಯೇ ಒಂದು ಲೋಟದಲ್ಲಿ ಅಕ್ಕಿ ತುಂಬಿ ಗಂಧದ ಕಡ್ಡಿ ಹತ್ತಿಸಿ ಇಡುತ್ತಾರೆ. ಹೂವಿನ ಹಾರಗಳನ್ನು ಹೆಣಕ್ಕೆ ಹಾಕಿರುತ್ತಾರೆ.

ಸಾಮಾನ್ಯವಾಗಿ ಹೆಣಹೊರಲು ಮಾಡುವ ಸಾಧನ ಚಟ್ಟ. ಇದನ್ನು ಬಿದಿರಿಂದಲೇ ಮಾಡುವುದು ವಿಶೇಷ. ಮನೆಯಲ್ಲಿರುವ ಹಳೆಯ ಬಿದಿರು ತೆಗೆದುಕೊಂಡು, ಉದ್ದನೆಯ ಎರಡು ಬೊಂಬುಗಳನ್ನು ತಂದು ಆರು ಏಳಡಿ ಉದ್ದದ ಅಳತೆಗೆ ಸಮಾನವಾಗಿ ಕತ್ತರಿಸಿ. ಮೂರಡಿ ಅಗಲಕ್ಕೆ ಸರಿಯಾಗಿ ಗಳಗಳನ್ನು ತುಂಡರಿಸಿ ಕೊಂಡು ಅವುಗಳನ್ನು ಈ ಎರಡು ಬಿದಿರಿನ ಬೊಂಬುಗಳಿಗೆ ಅಡ್ಡಲಾಗಿ ಜೋಡಿಸಿ ದಾರದಿಂದ ಹೆಣೆದು ಕಟ್ಟುತ್ತಾರೆ ಅದರ ಮೇಲೆ ವ್ಯಕ್ತಿ ಉಪಯೋಗಿಸುತ್ತಿದ್ದ ಹಾಸಿಗೆಯನ್ನು ರಗ್ಗುಗಳನ್ನು ಹಾಸಿ ಇಂಬು ಇಡುತ್ತಾರೆ.

ತಮಟಕಲ್ಲು ಪರಿಸರದಲ್ಲಿ ಲಿಂಗಾಯಿತರು ಬಿಟ್ಟು ಬಹುತೇಕ ಎಲ್ಲಾ ಸಮುದಾಯದವರ ಆಚರಣೆಗಳು ಒಂದೇ ರೀತಿಯಾಗಿವೆ. ವ್ಯಕ್ತಿ ಸತ್ತ ಕೆಲವು ಸಮಯದ ಬಳಿಕ ಹೆಣವನ್ನು ಹೊರಗಡೆ ಇಟ್ಟು ಸಂಬಂಧಿಕರಿಗೆ ಸುದ್ದಿ ಮುಟ್ಟಿಸಲು ಹರಿಜನರ ವ್ಯಕ್ತಿಯನ್ನು ಕಳುಹಿಸುತ್ತಾರೆ ಇವರಿಗೆ 'ಕೌಡಿಯಾಳು' ಎಂದು ಕರೆಯುತ್ತಾರೆ. ದೂರವಾಣಿ ಸೌಲಭ್ಯವಿರುವುದರಿಂದ ಆದರ ಅಗತ್ಯವಿಲ್ಲ. ಆದರೂ ದೀಪದ ಊರಿಗೆ ಕೌಡಿಯಾಳನ್ನು ಕಳುಹಿಸುವ ರೂಢಿ ಇದೆ. ಹೆಣವನ್ನು ಹೂಳಲು ಹರಿಜನ ಸಮುದಾಯದ ವ್ಯಕ್ತಿ ೬-೩ ಅಡಿ ಭೂಮಿಯನ್ನು ಅಳತೆ ಮಾಡಿಕೊಡುತ್ತಾನೆ. ಈ ರೀತಿ ಭೂಮಿ ಅಳತೆಯನ್ನು ಎಲ್ಲ ಸಮುದಾಯದವರಿಗೆ ಮಾಡಿಕೊಡುತ್ತಾರೆ. ವ್ಯಕ್ತಿ ಸತ್ತ ಸಮುದಾಯವರೇ ಗುಂಡಿಯನ್ನು ತೆಗೆಯುತ್ತಾರೆ. ಹೆಣವನ್ನು ಸ್ಮಶಾನಕ್ಕೆ ಕೊಂಡೊಯ್ಯುವಾಗ ದಾರಿಯುದ್ದಕ್ಕೂ ಮಂಡಕ್ಕಿ, ನಾಣ್ಯವನ್ನು ತೂರುತ್ತಾರೆ. ದಾರಿ ಮಧ್ಯೆ ಹೆಣವನ್ನು ಇಳಿಸಿ ಎಲ್ಲಾರು ಒಂದು ತಂಗಟಿ ಗಿಡಕ್ಕೆ ಎಡಗೈನಿಂದ ಕಲ್ಲು ಎಸೆಯುತ್ತಾರೆ. ಹೆಣವನ್ನು ತಗ್ಗು ತೆಗೆದ ಜಾಗದಲ್ಲಿ ಇಟ್ಟು ಸಂಬಂಧಿಕರೆಲ್ಲ ತಂದ ಹೂವಿನಹಾರ ಕಾಯಿಯನ್ನು ಇಟ್ಟು ಪೂಜೆ ಮಾಡಿ ಎಲ್ಲರೂ ಒಂದು ಬೊಗಸೆ ಮಣ್ಣನ್ನು ಹೆಣದ ಮೇಲೆ ಹಾಕುತ್ತಾರೆ. ಹೆಣವನ್ನು ಹೂಣಿದ ನಂತರ ಮಗ ಅಥವಾ ಮೊಮ್ಮಗ 'ತಲೆಗರ್ವಿ' ಎಂದು ಹಿಡಿಯುತ್ತಾರೆ. ಒಂದು ಮಡಿಕೆಯ ಕೊಡವನ್ನು ಹೆಗಲ ಮೇಲೆ ಇಟ್ಟು ಹೆಣದ ಸುತ್ತ ಮೂರು ಬಾರಿ ಸುತ್ತುವಾಗ ಆ ಗಡಿಗೆಗೆ ಮೂರು ರಂಧ್ರಗಳನ್ನು ಮಾಡುತ್ತಾರೆ. ಕೊನೆಗೆ ಆ ಮಡಿಕೆಯನ್ನು ಎತ್ತಿ ಹಾಕಿ ಹಿಂದೆ ನೋಡದೆ ಬರುತ್ತಾರೆ. ಕೊನೆಗೆ ಅಲ್ಲಿ ಸೇರಿದವರೆಲ್ಲರಿಗೂ ಎಲೆ-ಅಡಿಕೆ ಕೊಡುತ್ತಾರೆ. ಅದನ್ನು ಯಾರು ಮನೆಗೆ ತರುವುದಿಲ್ಲ. ಅಲ್ಲಿ ತಿಂದು ಉಗಿದು ಬರಬೇಕು. ಅಲ್ಲಿಂದ ಬರುವಾಗ ಪ್ರತಿಯೊಬ್ಬರು ನೀರನ್ನು ಮುಟ್ಟಿ ಕೈ ಕಾಲುತೊಳೆದು ತಲೆ ಮೇಲೆ ನೀರು ಚಿಮುಕಿಸಿಕೊಂಡು ಬರುತ್ತಾರೆ. ದೇವಸ್ಥಾನಕ್ಕೆ ಹೋಗಿ ಎಲ್ಲರೂ ಗಂಟೆ ಬಾರಿಸಿದಂತೆ ಕೈ ಮುಗಿದು ನಂತರ ಸತ್ತವನ ಮನೆಯ ಹತ್ತಿರ ಹೋಗುತ್ತಾರೆ. ಶವ ಸಂಸ್ಕಾರಕ್ಕೆಂದು ಮನೆ ಬಾಗಿಲು ಹಾಕಿಕೊಂಡು ಎಲ್ಲರೂ ಹೋಗದೆ ಯಾರಾದರೂ ಮನೆಯಲ್ಲಿ ಇದ್ದುಕೊಂಡು ಹೆಣ ಮಲಗಿಸಿದ ಜಾಗದಲ್ಲಿ ಉರಿವದೀಪ ಇಟ್ಟಿರುತ್ತಾರೆ. ಶವ ಸಂಸ್ಕಾರ ಮುಗಿಸಿಕೊಂಡು ಬಂದವರು ಆ ದೀಪ ನೋಡಿ ಕೈಮುಗಿದು, ಸಗಣಿ, ಕರಿಕೆ ಪಾಸೆಯನ್ನು ಇಟ್ಟಿರುತ್ತಾರೆ. ಅದನ್ನು ಎಡಗಾಲಿನಿಂದ ಒದೆದು ಅವರವರ ಊರಿಗೆ ಹೋಗಬೇಕು.

ಕೆಲವೊಮ್ಮೆ ಹೆಣವನ್ನು ಹೂಳದೆ ಸುಡುತ್ತಾರೆ. ಆಗ ಹೆಣಕ್ಕೆ ಮಗ ಅಥವಾ ಮೊಮ್ಮಗ ಬೆಂಕಿ ಇಡುತ್ತಾರೆ ಹೆಣವನ್ನು ಬೂದಿಯಾಗುವವರೆಗೆ ಸುಡುವವರು ಹರಿಜನರು. ಗಂಡ ಸತ್ತಾಗ ಹೆಣ್ಣಿಗೆ ಹೆಣದ ಜೊತೆ ಕೂರಿಸಿ ಸ್ನಾನ ಮಾಡಿಸಿ ತವರಿನವರು ತಂದ ಸೀರೆ, ಉಡಿಯಕ್ಕಿ ಹಾಕುತ್ತಾರೆ. ಅದು ಆ ಹೆಣ್ಣಿಗೆ ತವರುಮನೆಯ ಕೊನೆಯ ಉಡಿಯಕ್ಕಿ ಆಗಿರುತ್ತದೆ. ನಂತರ ಆವಳ ತಾಳಿ, ಬಳೆ, ಕುಂಕುಮ, ಕಾಲುಂಗರ, ಮೂಗುತಿಯನ್ನು ತೆಗೆದು ಹಾಕುತ್ತಾರೆ. ೩ನೇ ದಿನ ಸಮಾಧಿ ಬಳಿ ಸೂಚಕ ತೆಗೆಯುವ ಕಾರ್ಯ ಮಾಡುತ್ತಾರೆ. ೩ನೇ ದಿನ ಸಮಾಧಿಯ

ಬಳಿ ಶಾಸ್ತ್ರೋಕ್ತವಾಗಿ ಎಲ್ಲಾ ಸಂಪ್ರದಾಯ ನೇರವೇರಿಸುತ್ತಾರೆ. ಸತ್ತ ವ್ಯಕ್ತಿಗೆ ಊಟ ಹಾಕುತ್ತಾರೆ ಇದನ್ನು 'ಹಿಂಡೆಕೊಳು' ಎನ್ನುತ್ತಾರೆ. ಇದನ್ನು ಕಾಗೆ ಮುಟ್ಟಬೇಕು. ಕಾಗೆ ಮುಟ್ಟದಿದ್ದರೆ ಹಸುವಿನಿಂದ ಮುಟ್ಟಿಸುತ್ತಾರೆ.

ವ್ಯಕ್ತಿ ಸತ್ತ ೯ ಅಥವಾ ೧೬ ದಿನದಲ್ಲಿ ದಿವಸ ಮಾಡುತ್ತಾರೆ. ಇದಕ್ಕೆ ತಿಥಿ ಎಂದು ಕರೆಯುತ್ತಾರೆ. ದೊಡ್ಡ ದಿವಸ ಮತ್ತು ಚಿಕ್ಕ ದಿವಸವೆಂದು ಮಾಡುತ್ತಾರೆ. ಚಿಕ್ಕ ದಿವಸಕ್ಕೆ ಸಿಹಿ ಅಡುಗೆ ಮಾಡುತಾರೆ ದೊಡ್ಡ ದಿವಸಕ್ಕೆ ಕುರಿ, ಮೇಕೆ ಬೇಟೆಯನ್ನು ಕಡಿಯುತ್ತಾರೆ. ಲಿಂಗಾಯಿತರಲ್ಲಿ ಕೆಲವೊಂದು ಆಚರಣೆ ಭಿನ್ನವಾಗಿದೆ. ಇವರು ಚಟ್ಟ ಕಟ್ಟಲು ಕೆಂಪು ಬಟ್ಟೆ ತರುತ್ತಾರೆ 'ಗುರು ಕಳಸ' ಎಂದು ಐದು ವಿಭೂತಿ, ಚೆಂಬು, ರುದ್ರಾಕ್ಷಿ, ಎಲೆ-ಅಡಿಕೆ, ಐದು ಲಿಂಗ ಚೌಕಾಕಾರದ ಕೆಂಪು ಬಟ್ಟೆ ತಂದು ಸಿದ್ದಿಗೆ ಕಟ್ಟುತ್ತಾರೆ. ಇದನ್ನು ಐನೋರು ಸಿದ್ದಪಡಿಸುತ್ತಾರೆ. ಸತ್ತ ವ್ಯಕ್ತಿಗೆ ಸ್ನಾನ ಮಾಡಿಸಿ ಪೂಜೆ ಮಾಡುತ್ತಾರೆ. ಐನೋರು ಪಾದ ಪೂಜೆ ಮಾಡುತ್ತಾರೆ. ನಂತರ ಹೆಂಡತಿ ಹತ್ತಿರ ಪೂಜೆ ಮಾಡಿಸುತ್ತಾರೆ. ನಂತರ ಹೆಣವನ್ನು ನಾಲ್ಕು ಜನ ಹೊತ್ತುಕೊಂಡು ಹೋಗುವಾಗ ಮಧ್ಯೆ ಒಂದು ಹತ್ತಿರ ನಿಲ್ಲಿಸಬೇಕು. ಹೆಣವನ್ನು ಗುಂಡಿಗೆ ಐನೋರು ಇಡುತ್ತಾರೆ. ಎಡಗಾಲಿನಿಂದ ಹೊಡೆಯುತ್ತಾರೆ. ಈ ರೀತಿ ಹೊಡೆಯುವುದು ಸತ್ತ ವ್ಯಕ್ತಿಗೆ ದೋಷ ಹೋಗಲೆಂದು. ಸತ್ತ ವ್ಯಕ್ತಿಯ ಮಗನಿಂದ ಪೂಜೆ ಮಾಡಿಸುತ್ತಾರೆ. ಆ ನಂತರ ಹೆಂಡತಿಯ ತಾಳಿ, ಬಳೆ, ಕಾಲುಂಗರ, ಮೂಗುತಿ, ಕುಂಕುಮ ಎಲ್ಲ ತೆಗೆಯುತ್ತಾರೆ. ಸತ್ತ ವ್ಯಕ್ತಿಗೆ ಕಟ್ಟಿದ ಪೇಟವನ್ನು ಹಿರೇಮಗನಿಗೆ ಇಡುತ್ತಾರೆ. ಕಾರಣ ಮನೆಯ ಎಲ್ಲಾ ಜವಾಬ್ದಾರಿ ಇವನದು ಎನ್ನುವ ಅರ್ಥ ಮತ್ತು ಲಿಂಗವನ್ನು ಮಗನ ಕೈಗೆ ಕಟ್ಟುತ್ತಾರೆ. ಸಮಾಧಿ ಮಾಡಿ ಬಂದು ಎಲ್ಲರೂ ದೀಪ ನೋಡಿ ಬಾಗಿಲಿನಲ್ಲಿ ಇಟ್ಟಿರುವ ಅಕ್ಕಿ ಕಾಳನ್ನು ಮನೆಗೆ ಉಗ್ಗುತ್ತಾರೆ. ನಂತರ ಮಡಿಯಾಗಿ ಮನೆಗೆ ಗೋಮಂತ್ರ ಹಾಕಿಕೊಳ್ಳುತ್ತಾರೆ. ಮೂರನೇ ದಿನದಲ್ಲಿ ಸತ್ತ ವ್ಯಕ್ತಿಗೆ ಹಿಂಡಿ ಕೂಳನ್ನು ಹಾಕಿ, ಸಿಹಿ ಅಡುಗೆ ಮಾಡಿ ಸತ್ತ ವ್ಯಕ್ತಿ ಇಷ್ಟಪಡುವ ಎಲ್ಲಾ ವಸ್ತುಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಮತ್ತೆ ಐನೋರು ಮತ್ತು ಅಗಸರು ಮನೆಯನ್ನು ಗೋಮಂತ್ರ ಹಾಕಿ ಶುಚಿಗೊಳಿಸುತ್ತಾರೆ. ೯ ಅಥವಾ ೧೬ ದಿನದಲ್ಲಿ ಆಕೆಗೆ ಮತ್ತು ಮಗನಿಗೆ ಒಟ್ಟು ಹಾಕುತ್ತಾರೆ. ಒಂದು ಚೆಂಬು ತುಂಬ ನೀರು ತುಂಬಿ ಅದಕ್ಕೆ ಬಟ್ಟೆ ಹಾಕಿ ಹಿರಿಯರನ್ನು ಮಾಡುತ್ತಾರೆ. ಇದನ್ನು ಇಂಟು ಗುಡಿಸಿ ಎನ್ನುತ್ತಾರೆ.

ಗಂಡ ಸತ್ತಾಗ ಹೆಂಡತಿಯನ್ನು ಶವದ ಪಕ್ಕ ಕೂರಿಸಿ ಅವಳಿಗೆ ಮದುಮಗಳ ರೀತಿ ಅಲಂಕಾರ ಮಾಡುತ್ತಾರೆ. ಅವಳ ತವರುಮನೆಯಿಂದ ಅವಳಿಗೆ ಸೀರೆ, ಬಳೆ, ಹೂವು, ಕುಂಕುಮ, ಅರಿಶಿಣ, ಮಡಿಲಿಗೆ ಒಡ್ಲಕ್ಕಿ ತಂದು ಹಾಕುತ್ತಾರೆ. ಶವಸಂಸ್ಕಾರ ಮಾಡುವ ಜಾಗಕ್ಕೆ ಅವಳನ್ನು ಕರೆದುಕೊಂಡು ಹೋಗಿ ಶವವನ್ನು ಮಣ್ಣು ಮಾಡಿದ ಮೇಲೆ ಅವಳ ಬಳೆಯನ್ನು ಸಮಾಧಿಯ ಮೇಲೆ ಒಡೆಸುತ್ತಾರೆ. ತಲೆಯ ಹೂವನ್ನು ಕಿತ್ತು ಹಾಕುತ್ತಾರೆ. ಅವಳ ಹಣೆಯ ಮೇಲಿನ ಕುಂಕುಮವನ್ನು ತೆಗೆಯುತ್ತಾರೆ. ಹೀಗೆ ಅವಳು ಮುತ್ತೈದೆತನವನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ.

ಯಾರಾದರೂ ಸತ್ತರೆ ಅಲ್ಲಿ ಪ್ರಧಾನವಾಗಿ ಪುರುಷರು ಮುಖ್ಯರಾಗುತ್ತಾರೆ. ಸತ್ತ ವ್ಯಕ್ತಿಯ ಮನೆಯ ಮುಂದೆ ಕುಳ್ಳನ್ನು ಇಟ್ಟು ಅದರ ಕಾವಿನಲ್ಲಿ ಹಿಂಡೆಕೂಳ ತಯಾರುಮಾಡುತ್ತಾರೆ. ಹಿಂಡೆಕೂಳು ತಯಾರು ಮಾಡಲು ಹೊಸ ಮಡಿಕೆಯನ್ನು ಬಳಸುತ್ತಾರೆ. ಕುಳ್ಳಿನ ಕೆಂಡದ ಮೇಲೆ ಹೊಸ ಮಡಿಕೆ ಇಟ್ಟು ಅದರೊಳಗೆ ವಿಧವೆ ಹೆಂಗಸಿನ ಅಂಗೈಯಿಂದ ಮೂರು ಬೊಗಸೆ ಅಕ್ಕಿ ಕೈ ಹೊರಭಾಗದಿಂದ ಮೂರು ಬೊಗಸೆ ಅಕ್ಕಿ ಹಾಕಿಸುತ್ತಾರೆ. ಆಮೇಲೆ ಸ್ವಲ್ಪ ನೀರು ಹಾಕುತ್ತಾರೆ.

ಶವವನ್ನು ಎತ್ತುವವರೆಗೂ ಅದು ತಯಾರು ಆಗುತ್ತದೆ. ಆಮೇಲೆ ಮನೆಯ ಹಿರಿಯ ಮಗನ ತಲೆಯ ಮೇಲೆ ಕರಿಕಂಬಳಿ ಹೊದಿಸಿ ಹಿಂಡೆಕೂಳ ಹೊರೆಸುತ್ತಾರೆ. ಶವ ಮನೆಯ ಅಂಗಳದಿಂದ ಸ್ಮಶಾನಕ್ಕೆ ಹೊರಟರೆ ಇತ್ತ ಕಡೆ ಮನೆಯ ಸೊಸೆಯರು ಮನೆಯನ್ನು ಸ್ವಚ್ಛ ಮಾಡುತ್ತಾರೆ. ಮಣ್ಣಿಗೆ ಹೋದವರು ಬರುವುದರೊಳಗೆ ಮನೆಯನ್ನೆಲ್ಲಾ ಸಾರಿಸುತ್ತಾರೆ. ಹೊಸ ನೀರು ಶೇಖರಣೆ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಅಣ್ಣ-ತಮ್ಮಂದಿರು ಆಗುವವರು ಮಾತ್ರ ಮನೆಯ ಒಳಗೆ ಇರಬೇಕು. ನೆಂಟರಿಷ್ಟರೆಲ್ಲಾ ಮೂರು ದಿನದ ಕಾರ್ಯ ಮುಗಿಯುವವರೆಗೂ ಒಳಗೆ ಬರುವ ಹಾಗಿಲ್ಲ. ಮನೆಯ ಮಗಳು ಮದುವೆಯಾಗಿದ್ದರೆ ಆ ಸಮಯದಲ್ಲಿ ಗಂಡನ ಮನೆಗೆ ಹೋಗಬೇಕು. ಮಣ್ಣು ಮಾಡಿ ಬರುವುದರೊಳಗೆ ಮನೆಯಲ್ಲಿರುವ ಸೊಸೆಯಂದಿರು ಅಂಗಳದ ಮುಖ್ಯ ಬಾಗಿಲಿನ ಮನೆಯ ಮಧ್ಯೆ ಭಾಗದಲ್ಲಿ ದೀಪವನ್ನು ಹಚ್ಚಿ ಇಡಬೇಕು. ಎಲ್ಲರೂ ಮಣ್ಣಿನಿಂದ ವಾಪಸು ಮನೆಯ ಹತ್ತಿರ ಬಂದು ಕೈಕಾಲು ಮುಖ ತೊಳೆದು ಬಾಗಿಲಿನ ಪಕ್ಕದಲ್ಲಿ ಇಟ್ಟಿರುವ ನೀರಿನಲ್ಲಿ ಎಡಗಾಲು ಹೆಬ್ಬೆರಳು ಮುಟ್ಟಿಸಿ ಮನೆಯ ಒಳಗಿನ ದೀಪವನ್ನು ನೋಡಿಕೊಂಡು ಹೋಗುತ್ತಾರೆ. ಆಮೇಲೆ ಕೇರಿಯಲ್ಲಿನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡುತ್ತಾರೆ. ಇಲ್ಲಿಗೆ ಶವಸಂಸ್ಕಾರ ಮುಗಿದ ಹಾಗೆ ಎಂದು ತೀರ್ಮಾನಿಸುತ್ತಾರೆ. ನಂತರ ಮೂರು ದಿನದ ತಿಥಿ ಮತ್ತು ೧೮-೧೯ನೇ ದಿನದ ತಿಥಿ ಮಾಡಿ ಸಾವಿನ ಕರ್ಮವನ್ನು ಕಳೆಯುತ್ತಾರೆ.

ಈ ಆಚರಣೆ ಸಂದರ್ಭದಲ್ಲಿ ಗಂಡು ಮಕ್ಕಳ ಅಥವಾ ಪುರುಷರ ಭಾಗವಹಿಸುವಿಕೆ ಹೆಚ್ಚಾಗಿದ್ದು ಎಲ್ಲಾ ಕಾರ್ಯಗಳನ್ನು ಪುರುಷರೆ ಮಾಡುತ್ತಾರೆ. ಮಹಿಳೆಗೆ ಕೇವಲ ಅಡುಗೆ ಕೆಲಸ ಮಾತ್ರವಾಗಿರುತ್ತದೆ. ಪುರುಷರಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ.

**೪.೨. ವಾರ್ಷಿಕಾವರ್ತನದ ಆಚರಣೆಗಳು :**

ಹಬ್ಬ ಎಂಬ ಪದವು ಸಂಸ್ಕೃತದ ಪರ್ವ ಶಬ್ದದ ತದ್ಭವ ರೂಪ. ಪರ್ವನ ಅಥವಾ ಪರ್ವ ಪದದ ತದ್ಭವ ರೂಪ ಹಬ್ಬ ಎನ್ನುವುದಾಗಿದೆ. ಪರ್ವ ಎಂದರೆ ಕಾಲ ವಿಭಜನೆಯ ತಿಂಗಳ ಮೊದಲ ಅರ್ಧಾವಧಿಯಲ್ಲಿ ಸೂರ್ಯ ಚಂದ್ರದಲ್ಲಿ ಉಂಟಾಗುವ ಬದಲಾವಣೆಯ ಕಾಲ. ಜನಪದರ ಜೀವನವೇ ಧರ್ಮ ಮೂಲವಾದದ್ದು. ದೈನಂದಿನ ಕೆಲಸದಿಂದ ಮೊದಲ್ಗೊಂಡು ವಿಶೇಷ ಸಂದರ್ಭಗಳಲ್ಲೂ ದೇವರನ್ನು ನೆನೆಯದೆ, ಪ್ರಾರ್ಥಿಸದೆ ಯಾವ ಕೆಲಸ ಮಾಡರು.

ಬಿಡುವಿಲ್ಲದ ಕೆಲಸದಲ್ಲಿ ನಿರತರಾಗಿದ್ದರೂ ಹಬ್ಬ ಹುಣ್ಣಿಮೆ, ಜಾತ್ರೆ, ಉತ್ಸವಗಳನ್ನು ತಪ್ಪದೆ ಆಚರಿಸುತ್ತಾರೆ.

ಮೂಲ ಮಾನವರು ಹೆದರಿಕೆ ಮತ್ತು ಉಪಕಾರ ಸ್ಮರಣೆಗಾಗಿ ಹಬ್ಬಗಳ ಆಚರಣೆಗೆ ತೊಡಗಿರಬಹುದೆಂದು ತೋರುತ್ತದೆ. ಮಳೆ, ಗುಡುಗು, ಮಿಂಚು, ಬೆಂಕಿ, ಬಿರುಗಾಳಿ ಮಹಾಪೂರಗಳಿಂದ ಭಯಗೊಂಡು ಅವುಗಳ ಹಿಂದೆ ಕಾಣದ ಶಕ್ತಿ ಇದೆ ಎಂದು ನಂಬಿ ಪೂಜೆ, ಪ್ರಾರ್ಥನೆ, ಬಲಿಗಳಿಂದ ಸಂಪ್ರೀತಗೊಳಿಸಿದ್ದಾರೆ. ಇವೆ ಮುಂದೆ ಹಬ್ಬಗಳಾಗಿರಬಹುದು. ಹಬ್ಬಗಳು ಎಂದರೆ ಪರ್ವ ಕಾಲದ ಆಚರಣೆಗಳು. ಇವು ಪ್ರತಿ ವರ್ಷವು ವಿಶೇಷ ಸಂದರ್ಭಗಳಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಆಚರಿಸಲ್ಪಡುತ್ತವೆ. ಬಂಧು-ಬಳಗವು ಸೇರುವ ಸಂದರ್ಭ, ಊರು ಕೇರಿಗಳನ್ನು ಹತ್ತಿರ ತರುವ ಸಂದರ್ಭ, ಸಂತೋಷ ಸಂದರ್ಭ ನಿರ್ದಿಷ್ಟ ಪಡಿಸಿದ್ದ ದಿನಗಳಲ್ಲಿ ಆಚರಿಸುವ ಶುಭ ಕಾರ್ಯದ ಸಂಕೇತವಾಗಿ ಹಬ್ಬಗಳು ಪ್ರಾಮುಖ್ಯತೆ ಪಡೆದಿವೆ. ಭಾರತೀಯ ಹಬ್ಬಗಳನ್ನು ಅನೇಕ ಉದ್ದೇಶಗಳಿಗೆ, ಅನೇಕ ರೀತಿಯಲ್ಲಿ ಆಚರಿಸಲಾಗುತ್ತದೆ. ಈ ಹಬ್ಬಗಳು ತಮ್ಮದೇ ಆದ ವೈಶಿಷ್ಯ ಚೌಕಟ್ಟನ್ನು ಪಡೆದುಕೊಂಡು ಒಂದೊಂದು ಹಬ್ಬಗಳು ಜೀವನ ವಿಧಾನಗಳನ್ನು ಅಭಿವ್ಯಕ್ತಿಸುವ ಹಬ್ಬಗಳು, ಸಂಪ್ರದಾಯಗಳು ಪ್ರತಿವರ್ಷ ಅಥವಾ ಇಂತಿಷ್ಟು ವರ್ಷಗಳಿಗೊಮ್ಮೆ ಆಚರಿಸುವ ರೂಢಿ ಪದ್ಧತಿಯಾಗಿ ಸಂಪ್ರದಾಯಗಳಾಗಿಯು ಬೆಳೆದು ಬರುತ್ತವೆ.

ಕೆಲವೊಂದು ಹಬ್ಬಗಳು ಮನೆಯೊಳಗೆ ಆಚರಿಸುವಂತಹವು. ಕೆಲವು ಹಬ್ಬಗಳು ಊರಿನ ಪ್ರತಿಯೊಂದು ಕೋಮಿನವರು ಆಚರಿಸುವಂತಹ ಹಬ್ಬಗಳಿವೆ. ಹಬ್ಬದಲ್ಲಿ ಊಟವೇ ಬಹಳ ಮುಖ್ಯ. ಆದರೆ ಕೇವಲ ಉಂಡು ಉಟ್ಟುತೇಗಿ ನಲಿದಾಡುವುದಕ್ಕೆ ಅಲ್ಲ. ಹಬ್ಬಗಳಲ್ಲಿ ವ್ರತ, ನಿಯಮಗಳನ್ನು ಎಲ್ಲಾ ದಿನಗಳಲ್ಲಿ ಅಲ್ಲದಿದ್ದರೂ ಕೆಲವೊಂದು ವಿಶೇಷ ದಿನಗಳಲ್ಲಿಯಾದರೂ ಪಾಲಿಸಿ ಕಡ್ಡಾಯವಾಗಿ ದೇಹ ದಂಡನೆಯ ಮೂಲಕ ಅಥವಾ ಹಬ್ಬಕ್ಕೆ ಕಾರಣವಾದ ಸಂಗತಿಯಾಗುವ ನಿಯಮಗಳನ್ನು ಕಲ್ಪಿಸಿಕೊಡುವಂತಹ ಆಚರಣೆಗಳೇ ಹಬ್ಬಗಳು. ಕೃಷಿ ನಿರತ ಜನರು ವರ್ಷಕ್ಕೊಮ್ಮೆ ಅಥವಾ ನಿರ್ದಿಷ್ಟ ದಿನದಂದು ಹಬ್ಬ ಆಚರಣೆ ಮಾಡಿದಾಗ ಅವರ ಪ್ರಾಥಮಿಕ ಅಗತ್ಯತೆಯನ್ನು ಪುನರುಜ್ಜೀವನಗೊಳಿಸಿಕೊಳ್ಳುತ್ತಾರೆ. ವರ್ಷವಿಡೀ ಧೂಳು ತುಂಬಿದ ಮನೆ ಹಾಗೂ ಮನೆ ಸುತ್ತಮುತ್ತಲ ಪ್ರದೇಶಗಳನ್ನು ಸ್ವಚ್ಛಗೊಳಿಸಿ ಉಪವಾಸ, ಮಡಿಯೊಂದಿಗೆ ಹೊಸ ಜೀವನಕ್ಕೆ ಅಣಿಯಾಗುವುದರ ಜೊತೆಗೆ ತಮ್ಮ ಇಷ್ಟ ದೈವದ ಕೃಪೆಯನ್ನು ಸಂಪಾದಿಸಿಕೊಳ್ಳಲು ಮತ್ತು ಸಂಪಾದಿಸಿಕೊಂಡಿದ್ದೇವೆ ಎಂಬ ಸಂತೋಷದಲ್ಲಿ ಬೀಗುವ ಸನ್ನಿವೇಶಗಳೇ ಹೆಚ್ಚು.

ಪ್ರಾಚೀನ ಕಾಲದಿಂದಲೂ ಜನಪದರು ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಳ್ಳಲು ಹಬ್ಬ, ಜಾತ್ರೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಜನಪದರಿಗೆ ಶಿಷ್ಟ ಪರಂಪರೆಯ ಸನಾತನ ಧರ್ಮದ ಜೀವನ ಶೈಲಿಯನ್ನು ರೂಪಿಸಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ಅವರಿಗೆ ನಿತ್ಯ ಸಂಧ್ಯಾವಂದನೆ, ಜಪ-ತಪ, ಪ್ರಾರ್ಥನೆಗಳಲ್ಲಿ ತೊಡಗಲು ಅಸಾಧ್ಯವಾಗುತ್ತದೆ. ಜನಪದರು

ನೆಮ್ಮದಿ ಜೀವನ ನಡೆಸಬೇಕಾದರೆ ಇಂತಹ ಹಬ್ಬಗಳನ್ನು ಸಾಲ ಮಾಡಿಯಾದರೂ ಆಚರಿಸುತ್ತಾರೆ. ಹಬ್ಬಗಳು ಬಾಂಧವ್ಯ ಸೇತುವೆಗಳಾಗಿಯೂ ಕಾರ್ಯ ನಿರ್ವಹಿಸುತ್ತವೆ. ಗ್ರಾಮೀಣ ಜನರು ವರ್ಷದ ಹೆಚ್ಚು ಸಮಯ ವ್ಯವಸಾಯದಲ್ಲಿ ನಿರತರಾಗಿರುವುದರಿಂದ, ಅವರ ಸಂಬಂಧಗಳ ಜೊತೆಗೆ ಹೆಚ್ಚು ಸಂಪರ್ಕ ಹೊಂದಲು ಸಾಧ್ಯವಿಲ್ಲ. ಹಬ್ಬಗಳಂತಹ ಸಂದರ್ಭಗಳನ್ನು ಬಳಸಿಕೊಂಡು ತಮ್ಮ ಬೇಕು ಬೇಡಗಳನ್ನು ಪೂರೈಸಿಕೊಂಡು ಶುಭಾಶಯಗಳನ್ನು ವಿನಿಮಯ ಮಾಡಿಕೊಳ್ಳುವ ಸಮಯ ಹಬ್ಬಗಳ ವೈಶಿಷ್ಯಗಳಲ್ಲಿ ಸೇರಿದೆ. ತುಂಬ ದಿನಗಳ ಕಾಲದ ಆಗಲಿಕೆಯ ನಂತರ ಕ್ಷೇಮ ಸಮಾಚಾರವನ್ನು ವ್ಯಕ್ತಪಡಿಸಿಕೊಳ್ಳುವ ಗ್ರಾಮೀಣ ಜನರು ಊಟೋಪಚಾರಗಳಲ್ಲಿ ಪೌಷ್ಟಿಕಾಂಶದಿಂದ ಕೂಡಿರುವ ಪದಾರ್ಥಗಳನ್ನು ಬಳಸಿ, ಸೇವಿಸುತ್ತ ರುಚಿ-ಶುಚಿ ಮತ್ತು ಶಕ್ತಿದಾಯಕ ಆರೋಗ್ಯವನ್ನು ಪಡೆಯುತ್ತಾರೆ. ಹೆಣ್ಣು ಮಕ್ಕಳು ತವರಿನಿಂದ ಹೊರಗೆ ಇರುವುದರಿಂದ ಹಬ್ಬಗಳಂತಹ ಅವಕಾಶಗಳು ಅವರಿಗೆ ಹರ್ಷವನ್ನು ತಂದು ಹಬ್ಬದಲ್ಲಿ ಭಾಗವಹಿಸುವರು. ಎಲ್ಲಾ ಸಂಬಂಧಿಕರು ಆನಂದದಿಂದ ಸಂತೋಷಪಡುವರು. ಬಡತನವನ್ನು ಕ್ಷಣಕಾಲವಾದರು ಮರೆಸಿ ಹೊಸ ಉಡುಪು, ಆಹಾರ ಹೊಸ ಸಂಬಂಧಗಳಲ್ಲಿ ಜನರಿಗೆ ಆಶಾದೀಪಗಳಾಗಿರುವಂತಹದು ಹಬ್ಬಗಳಲ್ಲಿನ ಮತ್ತೊಂದು ವಿಶೇಷ. ಭಾರತೀಯ ಗ್ರಾಮೀಣ ಜನಜೀವನದಲ್ಲಿ ಹಬ್ಬಗಳಿಗೆ ಅಪಾರವಾದ ಮಹತ್ವವಿದೆ. ಜನರು ಹಬ್ಬದ ದಿನವನ್ನು ಪವಿತ್ರ ದಿನವಾಗಿ ತಿಳಿದು ಹಬ್ಬದ ದಿನ ಹೇಗೆ ನಡೆದುಕೊಂಡರೆ ಹಾಗೆಯೇ ಇಡೀ ವರ್ಷವಾಗುತ್ತದೆ. ಇಲ್ಲವಾದರೆ ವರ್ಷವಿಡೀ ಸಂಕಷ್ಟಗಳನ್ನು ಅನುಭವಿಸಬೇಕಾಗುತ್ತದೆ ಎನ್ನುವ ನಂಬಿಕೆ ಜನರಲ್ಲಿ ಇದೆ. ವೈಯಕ್ತಿಕ ಕಷ್ಟಗಳು ಹಬ್ಬದಲ್ಲಿ ಮರೆಯಾಗಿ ಆನಂದದ ನೆಲೆಯು ಚಿಗುರುತ್ತದೆ. ಯಾವುದೋ ಸಣ್ಣ ವೈಮನಸ್ಸುಗಳನ್ನು ಹೊಂದಿರುವ ಜನರು ಹಬ್ಬದ ದಿನ ಒಂದಾಗಿ ಸಂಘಟಿತರಾಗುತ್ತಾರೆ. ಇಂತಹ ವಿಶೇಷಗಳನ್ನು ಒಳಗೊಂಡಿರುವ ಹಬ್ಬಗಳು ಸಾಂಸ್ಕೃತಿಕ ಮಹತ್ವವನ್ನು ಪಡೆದಿವೆ. ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದು. ಕೆಲವೊಂದು ಹಬ್ಬಗಳು ಒಂದು ಪ್ರದೇಶದಲ್ಲಿ ತುಂಬ ಪ್ರಾಮುಖ್ಯತೆ ಪಡೆದು ಉತ್ಸಾಹ ಸಂಭ್ರಮಗಳಿಂದ ಕೂಡಿರುತ್ತವೆ.

**ಯುಗಾದಿ :** ಇಂದು ನಾಗರಿಕತೆಗೆ ತಮ್ಮನ್ನು ಒಡ್ಡಿಕೊಳ್ಳುತ್ತಿರುವ ನಮ್ಮ ಗ್ರಾಮಗಳು ತೀರ ಇಕ್ಕಟ್ಟು ಸ್ಥಿತಿಯಲ್ಲಿ ಸಿಲುಕಿಕೊಂಡಿವೆ. ಮುಂಚಿನ ನಮ್ಮ ಗ್ರಾಮೀಣ ಸಂಸ್ಕೃತಿ ಬದಲಾಗಿ ಪಟ್ಟಣದ ಸಂಸ್ಕೃತಿ ಕಾಲೂರತೊಡಗಿದೆ. ಹಳೆಯ ಪದ್ಧತಿ ಸಂಪೂರ್ಣವಾಗಿ ಗ್ರಾಮಗಳಿಂದ ಮರೆಯಾಗಿಲ್ಲ. ಪಟ್ಟಣದ ಹೊಸ ಸಂಸ್ಕೃತಿಯನ್ನು ಇನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿಲ್ಲ. ಹಾಗಾಗಿ ನಮ್ಮ ಹಳ್ಳಿಗಳ ಬದುಕಿನ ವಿವಿಧ ಮಜಲುಗಳಲ್ಲಿ ಉಂಟಾಗಿರುವ ಬದಲಾವಣೆಗಳಿಂದಾಗಿ ನಮ್ಮ ಹಳೆಯ ರೀತಿ, ನೀತಿ ಸಂಪ್ರದಾಯ ಆಚರಣೆಗಳು ಹಂತ ಹಂತವಾಗಿ ನಮ್ಮಿಂದ ದೂರ ಸರಿಯುತ್ತಿವೆ.

ಯುಗಾದಿ ಎಂದ ಕೂಡಲೇ ನಮಗೆ ನೆನಪಾಗುವುದು ಬೇವು-ಬೆಲ್ಲ. ಬೇವಿನ ಚಿಗುರಿನ ಕಹಿ, ಬೆಲ್ಲದ ಸಿಹಿ ಇವೆರೆಡು ಬದುಕಿನ ನೋವು-ನಲಿವಿನ ಸಂಕೇತಗಳು. ಹಿಂದೆ ನಡೆದ ದುಃಖದ ಘಟನೆಗಳನ್ನು ಅರಗಿಸಿಕೊಂಡು ಇಂದಿನ ಸುಖದ ಸವಿಯನ್ನು ಸವಿಯಬೇಕು. "ನಮ್ಮ ನಾಲಿಗೆ ಸಿಹಿ ಬೇಕು ಕಹಿಬೇಡ ಎನ್ನುತ್ತದೆ. ಆದರೆ ನಾಲಿಗೆಗೆ ಸಿಹಿಯಾದುದು ಹೊಟ್ಟೆಸೇರಿ ಜೀರ್ಣವಾಗುವ ಹೊತ್ತಿಗೆ ಶರೀರಕ್ಕೆ ಕಹಿಯಾದೀತು. ಹಾಗೆಯೇ ನಾಲಿಗೆಯ ತುದಿಗೆ ಕಹಿಯಾದ ವಸ್ತು ಮುಂದೆ ಪರಿಣಾಮದಲ್ಲಿ ಸಿಹಿಯನ್ನು, ಹಿತವನ್ನು ಉಂಟುಮಾಡುವುದು" (೪) ಈ ದೃಷ್ಟಿಯನ್ನು ಇಟ್ಟುಕೊಂಡು ಸಿಹಿ-ಕಹಿಗಳೆರಡನ್ನು ಮುಕ್ತ ಪ್ರಮಾಣದಲ್ಲಿ ಉಚಿತ ಕಾಲದಲ್ಲಿ ಸೃಷ್ಟಿಸುವುದು ಜಾಣತನ. ಆದ್ದರಿಂದ ಬೇವು-ಬೆಲ್ಲ ಎರಡನ್ನು ಜೊತೆಗೆ ತಿನ್ನುತ್ತಾರೆ.

ಉತ್ಸವ ಪ್ರಿಯಾ : ಖಲು ಮನುಷ್ಯ ಎಂಬ ಕವಿ ಕುಲಗುರು ಕಾಳಿದಾಸನ ಉಕ್ತಿಯಂತೆ ಹಬ್ಬ-ಹರಿದಿನ, ತೇರು, ಜಾತ್ರೆಗಳನ್ನೆಲ್ಲಾ ಇಷ್ಟಪಡುವ ಮನುಷ್ಯ ಉತ್ಸವ ಪ್ರಿಯನಾಗಿದ್ದಾನೆ. ಜನರು ನಮ್ಮ ಒಳಿತಿಗಾಗಿ ಸುಖ-ಸಂತೋಷಕ್ಕಾಗಿ ಸಾಧನೆಯಿಂದ ಸಿದ್ಧಿಯತ್ತ ಸಾಗುವುದಕ್ಕಾಗಿ ಬಾಳಿನಲ್ಲಿ ಬದಲಾವಣೆಗಾಗಿ ಸಮಾಜ ಸಂಘಟನೆಗಾಗಿ ಆತ್ಮೀಯರೊಂದಿಗೆ ಬೆರೆಯಲಿಕ್ಕಾಗಿ ಹಲವು ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದೇವೆ. ಪ್ರತಿದಿನ ಅರೆಹೊಟ್ಟೆಗೆ ಮಾತ್ರ ಸಾಕಾಗುವಷ್ಟು ಗಂಜಿಯನ್ನು, ತಂಗಳು, ರಾಗಿ ಮುದ್ದೆಯನ್ನೇ ಉಣ್ಣುವ ಬಹು ಮಂದಿ ಜನಪದರಿಗೆ ಹಬ್ಬವೆಂದರೆ ಹಬ್ಬವೇ. ಎಷ್ಟೋ ಜನಪದರಿಗೆ, ಕೂಲಿ ಕಾರ್ಮಿಕರಿಗೆ ಹಬ್ಬದ ದಿನ ಮಾತ್ರ ಬಿಡುವು. ಅದು-ಇಲ್ಲದ ಜನರಿಗೇನು ಕೊರತೆಯಿಲ್ಲ. ಆ ಜನ ವರ್ಷಕ್ಕೊಂದು ದಿನ ಹಬ್ಬ ಮಾಡಿದ್ರು ಹೊಸ ಬಟ್ಟೆಯಿಲ್ಲ ಎಂದು ಗೊಣಗುವುದನ್ನು, ಹಬ್ಬದ ದಿನನು ಹಳೆಗಂಡ್ನೆ ಎಂದು ಮುಂತಾಗಿ ಮರುಗುವುದನ್ನು ಕಾಣಬಹುದು. ಹಬ್ಬ ಹರಿದಿನಗಳು ಇಂಥವರ ಪಾಲಿಗೆ ಹೊಸ ಮನ್ವಂತರಗಳಂತೆ. ಹಬ್ಬಗಳು ಬಂದರೆ ಒಂದು ಬದಲಾವಣೆ ಸಿಕ್ಕಿತಲ್ಲಾ ಎಂದು ಸಂತೋಷ ಪಡುವ ಜನಪದರೇ ಹೆಚ್ಚು.

ಹಬ್ಬಗಳು ವರ್ಷಕ್ಕೊಮ್ಮೆ ಆಚರಿಸಲ್ಪಡುವ ಧಾರ್ಮಿಕ ಆಚರಣೆಗಳು. ಎಲ್ಲಾ ಕಡೆಗೂ ವರ್ಷ ಗಣನೆ ಏಕರೂಪವಾಗಿರುವುದಿಲ್ಲ. ಇಂಗ್ಲೀಷ್ ಕ್ಯಾಲೆಂಡರ್ ರೂಢಿಯಲ್ಲಿ ಬಂದಂತೆ ಜನವರಿ ಒಂದನೆಯ ತಾರೀಖು ಡಿಸೆಂಬರ್ ೩೧ ರ ವರೆಗೆ ಒಂದು ವರ್ಷವನ್ನಾಗಿ ಗಣಿಸುವ ರೂಢಿ ಎಲ್ಲೆಡೆ ಇದೆ. ಜನಪದರಿಗೆ ಈ ರೀತಿಯ ಕಾಲಗಣನೆ ಇಲ್ಲ. ಯುಗಾದಿ ಅಮಾವಾಸ್ಯೆಯಿಂದ ಬರುವ ಯುಗಾದಿಯವರೆಗೆ ಒಂದು ವರ್ಷವೆಂದು ಗಣಿಸುವರು.

ಯುಗಾದಿ ಶಾಲಿವಾಹನ ಶಕದ ಎಣಿಕೆ ಆರಂಭವಾಗುವ ಚೈತ್ರ ತಿಂಗಳಿನ ಪ್ರಥಮ ದಿನ ಶೀತಕಾಲ ಕಳೆದು ಸಂತೋಷಪ್ರದವಾದ ಎಲ್ಲೆಲ್ಲೂ ವಸಂತ ಋತುವಿನಿಂದ ಚಿಗುರಿ ನಿಂತ ಮರಗಿಡಗಳು ಹೊಸತನ ಜೀರುವ ಕಾಲವೇ ಯುಗಾದಿ ಹಬ್ಬದ ಸಂಕೇತ. ಇದು ನಿದ್ರಿಸುತ್ತಿರುವ ಭೂಮಿ ತಾಯಿಯನ್ನು ಎಬ್ಬಿಸುವ ಹಬ್ಬವಾಗಿದೆ. ಋತುಗಳ ರಾಜನೆಂದೆ ಕರೆಯುವ ವಸಂತನಿಗೆ ಸ್ವಾಗತವನ್ನು ಹೇಳುವ ಸುದಿನವಾಗಿದೆ.

ಯುಗ ಯುಗಾದಿ ಕಳೆದರೂ ಯಗಾದಿ ಮರಳಿ ಬರುತ್ತಿದೆ.

ಹೊಸ ವರುಷಕ್ಕೆ ಹೊಸ ಹರುಷವ ಹೊಸತು ಹೊಸತು ತರುತ್ತಿದೆ.

ಎಂಬ ಕವಿ ಬೇಂದ್ರೆಯವರ ವಾಣಿಯಂತೆ ಹೊಸ ವರ್ಷ ಹರ್ಷದಾಯಕವಾಗಲೆಂದು ಆಚರಿಸುವ ಹಬ್ಬವೇ ಯುಗಾದಿ. ಹಿಂದೂಗಳಿಗೆ ಜನವರಿ ಮೊದಲ ದಿನ ಹೊಸವರ್ಷವಲ್ಲ. ಯುಗಾದಿ ಹಬ್ಬವೇ ಹೊಸ ವರ್ಷ. ವರ್ಷದ ಆದಿ. ಇದರಿಂದ ಯುಗಾದಿ ಹಿಂದೂಗಳಿಗೆ ವರ್ಷದ ಮೊದಲ ಹಬ್ಬವಾಗಿದೆ.

**ಯುಗಾದಿ :**

ಎರಡನೆಯ ದಿನದಂದು ಮನೆಯವರೆಲ್ಲರೂ ಎಣ್ಣೆಯ ಅಭ್ಯಂಜನ ಸ್ನಾನ ಮಾಡುತ್ತಾರೆ. ಪುರುಷರು ವಿಶೇಷವಾಗಿ ಹರಳೆಣ್ಣೆಯನ್ನು ದೇಹಕ್ಕೆ ಹಚ್ಚಿಕೊಂಡು ಸ್ವಲ್ಪ ಸಮಯ ಬಿಸಿಲು ಕಾಯಿಸಿ ಸ್ನಾನ ಮಾಡುತ್ತಾರೆ. ಎಲ್ಲರೂ ಹೊಸ ಹೊಸ ಉಡುಪು ಧರಿಸುತ್ತಾರೆ. ಸ್ತ್ರೀಯರೆಲ್ಲರೂ ಮನೆಯಲ್ಲಿ ಅಡುಗೆ ಕೆಲಸದಲ್ಲಿ ಭಾಗಿಯಾದರೆ ಪುರುಷರು ಮನೆಬಾಗಿಲುಗಳಿಗೆ ಹಸಿರು ತೋರಣ ಕಟ್ಟುವುದು ಬಾಳೆ ಎಲೆ ತರುವುದು ಇತ್ಯಾದಿ ಕೆಲಸಗಳಲ್ಲಿ ತೊಡಗುತ್ತಾರೆ. ಮಾವಿನ ಸೊಪ್ಪನ್ನು ತಂದು ಎಲೆಗಳನ್ನು ಬಿಡಿಸಿ ಪ್ರತಿ ಎಲೆಯನ್ನು ಅರ್ಧಕ್ಕಿಂತ ಸ್ವಲ್ಪ ಕಡಿಮೆ ಭಾಗಕ್ಕೆ ತೊಟ್ಟಿನ ಕಡೆಯಿಂದ ಮಡಚಿ ದಾರಕ್ಕೆ ಪೋಣಿಸುತ್ತಾರೆ. ಬಾಗಿಲುಗಳ ಅಳತೆಗೆ ಸರಿಯಾಗುವಷ್ಟು ಪೋಣಿಸಿ ಮನೆಯ ಪ್ರತಿ ಬಾಗಿಲುಗಳಿಗೆ ಕಟ್ಟುತ್ತಾರೆ.

ಬಾಗಿಲ ಎರಡು ಕಡೆಗೆ ಬೇವಿನ ಸೊಪ್ಪು ಜೊತೆಗೆ ಮಾವಿನ ಸೊಪ್ಪನ್ನು ಕಟ್ಟುತ್ತಾರೆ. ಎಲ್ಲಾ ಕೆಲಸಗಳು ಮುಗಿದ ಮೇಲೆ ತಾವು ಮಾಡಿದಂತಹ ಅಡುಗೆಯ ಸ್ವಲ್ಪ ಸ್ವಲ್ಪ ಭಾಗವನ್ನು ತೆಗೆದು ಮೀಸಲಿಟ್ಟಿರುತ್ತಾರೆ. ಆ ಪ್ರಸಾದವನ್ನು ಊರಿನ ಎಲ್ಲ ದೇವರುಗಳಿಗೆ ಹೊಲಗಳಲ್ಲಿ ಇರುವ ಬನ್ನಿಮರಗಳಿಗೆ, ಹಿರಿಯರ ಘೋರಿ ಸಮಾಧಿಗಳಿಗೆ ಇಡುತ್ತಾರೆ. ಅಲ್ಲಿ ಎಲ್ಲವನ್ನು ಸ್ವಚ್ಛಗೊಳಿಸಿ ನೀರು ಹಾಕಿ ಬಾಳೆ ಎಲೆ ಮೇಲೆ ಎಡೆ ಇಟ್ಟು ಹಣ್ಣು, ಕಾಯಿ ಒಡೆದು ಪೂಜೆ ಮಾಡುತ್ತಾರೆ. ಜನಪದರು ಸಾಮಾನ್ಯವಾಗಿ ಅಮವಾಸ್ಯೆ ದಿನದಂದು ಬೆಳಕಾಗುವ ವೇಳೆಗೆ ಮನೆಯನ್ನು ಸಾರಿಸಿ ಬಾಗಿಲ ಪೂಜೆಯನ್ನು ಮಾಡುತ್ತಾರೆ. ಈ ದಿನ ಊಟ ಸಾಮಾನ್ಯವಾಗಿ ದೋಸೆ, ಪಲ್ಯ, ಚಟ್ನಿಯನ್ನು ಮಾಡುತ್ತಾರೆ. ಮೊದಲ ದಿನ ಹೋಳಿಗೆ ಒಬ್ಬಟಿನ ಊಟ ಎಲ್ಲೆಡೆ ಸಾಮಾನ್ಯ. ಮಾರನೆ ದಿನ ಪಂಚಾಂಗ ಶ್ರವಣ. ಚಂದ್ರೋದಯ ಕಾಲದಲ್ಲಿ ಪಶ್ಚಿಮ ದಿಗಂತದಲ್ಲಿ ಮೂಡಿ ಬರುವ ಅಸ್ಪಷ್ಟವಾಗಿ ಒಂದು ಗೆರೆಯಾಕಾರದಲ್ಲಿ ಅರ್ಧ ಚಂದ್ರಾಕೃತಿಯನ್ನು ಕಂಡು ನಮಿಸುವುದು. ಚಂದ್ರನನ್ನು ನೋಡಿದ ತಕ್ಷಣ ಗಂಧದ ಕಡ್ಡಿ ಹತ್ತಿಸಿ ಕೈಮುಗಿಯುತ್ತಾರೆ.

ಹೀಗೆ ಹಲವು ನಂಬಿಕೆ ಸಂಪ್ರದಾಯಗಳಿಂದ ಕೂಡಿರುವ ಯುಗಾದಿ ಹಬ್ಬವು ವೈಜ್ಞಾನಿಕ ದೃಷ್ಟಿಯಲ್ಲಿ, ಆಯುರ್ವೇದ ಪ್ರಕಾರ ವರ್ಷಾಂತ ಕಾಲದಲ್ಲಿ ತಲೆದೋರುವ ಶಾರೀರಿಕ ರೋಗ-

ರುಜಿನಗಳಿಗೆ ದಿವ್ಯಔಷಧವಾಗುತ್ತದೆ. "ಬೇವು-ಬೆಲ್ಲವನ್ನು ತಿನ್ನುವುದು ವೈಜ್ಞಾನಿಕ ದೃಷ್ಟಿಯಿಂದಲೂ ಬಹುಮುಖ್ಯ. ಏಕೆಂದರೆ ಬೇವಿಗೆ ಕ್ರಿಮಿನಾಶಕ ಉಷ್ಣತೆಯನ್ನು ತಗ್ಗಿಸಿ ಮೈಗೆ ತಂಪು ಬರಿಸುವ ಶಕ್ತಿಯೂ ಅದಕ್ಕಿದೆ. ಇದರ ಜೊತೆಗೆ ಸ್ವಲ್ಪ ಉಷ್ಣಗುಣದ ಬೆಲ್ಲವೂ ಸೇರಿದರೆ ದೇಹದಲ್ಲಿ ಸಮತೋಲನ ಸ್ಥಾಪಿಸಲು ಸಾಧ್ಯ. ಶತಾಯುವಾಗಿ ವಜ್ರಕಾಯವನ್ನು ಹೊಂದಿ ಸರ್ವಸಂಪತ್ತು ಪಡೆದು ಸರ್ವಾರಿಷ್ಟಗಳನ್ನು ನಾಶಪಡಿಸಿ ಸುಖವಾಗಿರುವುದಕ್ಕಾಗಿ ಬೇವಿನ ಚಿಗುರೆಲೆಗಳು ತಕ್ಷಣ ಅತ್ಯಾವಶ್ಯಕ (ಡಾ.ಎಚ್.ವಿ. ನರಸಿಂಮೂರ್ತಿ, ಪುಟ-೨೭).

ಯುಗಾದಿ ಹಬ್ಬ ಇಲ್ಲಿನ ಜನರಿಗೆ ಬಲು ಪ್ರಿಯವಾದ ಹಬ್ಬವಾಗಿದೆ. ಈ ಹಬ್ಬವನ್ನು ಸಮಸ್ತ ಗ್ರಾಮದ ಜನರೆಲ್ಲಾ ಬಹು ವಿಜೃಂಭಣೆಯಿಂದ ೪ ದಿನಗಳ ಕಾಲ ಆಚರಿಸುತ್ತಾರೆ. ಈ ಹಬ್ಬದ ವೈಶಿಷ್ಟ್ಯವೆಂದರೆ ಯುಗಾದಿಯ ಮೊದಲನೆ ದಿನ ಈ ಊರಿನ ಪ್ರಮುಖ ದೇವರಾದ ಶ್ರೀ ಆಂಜನೇಯಸ್ವಾಮಿಯ ಜಾತ್ರಾ ಮಹೋತ್ಸವಕ್ಕೆ ಸಮಸ್ತ ಜನರೆಲ್ಲರೂ ಸೇರಿ ಹೋಗಿ ಗಂಗಾ ಪೂಜೆ ಮಾಡಿ ಸರ್ವ ಅಲಂಕಾರಗಳೊಂದಿಗೆ ಈ ದೇವರನ್ನು ಅಲಂಕರಿಸಿ ಸರ್ವಜನಗಳು ಹೊಸ ಬಟ್ಟೆಗಳನ್ನು ಧರಿಸಿ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ನಂತರ ಶ್ರೀರಂಗನಾಥ ಸ್ವಾಮಿ ಬೆಟ್ಟಕ್ಕೆ ಬೀಜಂಗೈದು ಶ್ರೀರಂಗನಾಥ ಸ್ವಾಮಿಗೆ ಲಕ್ಕವ್ವ, ತುಳಸವ್ವ ಇವರೊಡನೆ ವಿವಾಹ ನಡೆಯುತ್ತದೆ. ನಂತರದ ಕೆಂಡ ಹಾಯುವ ಅಚರಣೆ ಇರುತ್ತದೆ. ಈ ಗುಂಡಿಯ ಅಗಲ ೧೦ ಅಡಿ, ಉದ್ದ ೧೦ ಅಡಿ ಆಳವಿರುತ್ತದೆ. ಇದರ ತುಂಬಾ ಉರಿಯುವ ಕೆಂಡವಿರುತ್ತದೆ. ಈ ಕೆಂಡದಲ್ಲಿ ಶ್ರೀ ರಂಗನಾಥಸ್ವಾಮಿ ಮತ್ತು ಶ್ರೀ ಆಂಜನೇಯಸ್ವಾಮಿ ಪಟ್ಟದ (ಮುದ್ರೆ ಹಾಕಿಸಿಕೊಂಡಿರುವ) ಪೂಜಾರಿಗಳು ಮೂರು ಭಾರಿ ಈ ಕೆಂಡವನ್ನು ಹಾಯ್ದುಹೋಗುವುದು ವಿಶೇಷ. ಈ ಕೆಂಡದಲ್ಲಿ ನಡೆದಾಡಿದರು ಪೂಜಾರಿಗೆ ಏನು ಆಗದಿರುವುದು ವಿಶಿಷ್ಟವಾಗಿದೆ. ಈ ದಿನ ಸಿಹಿ ಊಟವನ್ನು (ಹೋಳಿಗೆ) ಎಲ್ಲ ಮನೆಗಳಲ್ಲಿಯೂ ಮಾಡುತ್ತಾರೆ.

ಎರಡನೇ ದಿನ ಶ್ರೀ ಆಂಜನೇಯ ಸ್ವಾಮಿ ದೇವಸ್ಥಾನದ ಸುತ್ತಲೂ ಮೂರು ಬಾರಿ ಉರುಳು ಸೇವೆಯನ್ನು ಮಾಡುತ್ತಾರೆ. ಜನರು ದೇವರಲ್ಲಿ ತಾವು ಬೇಡಿಕೊಂಡಿದ್ದು ನೆರವೇರುವುದಕ್ಕೆ ಹರಕೆಯನ್ನು ಕಟ್ಟಿಕೊಂಡಿರುತ್ತಾರೆ. ತಮ್ಮ ಬೇಡಿಕೆ ನೇರವೇರಿದಾಗ ಈ ಹಬ್ಬದ ದಿನದಂದು ಸುಮರು ೧೦ ಸಾವಿರಕ್ಕೂ ಹೆಚ್ಚು ಜನ ಬೆಳಗಿನ ಜಾವ ಸುಮಾರು ೪.೦೦ ಗಂಟೆಯಿಂದ ಸಾಯಂಕಾಲ ೬.೦೦ ಗಂಟೆಯವರೆಗೂ ಉರುಳು ಸೇವೆ ಸಲ್ಲಿಸುತ್ತಾರೆ. ನಂತರ ಸಾಯಂಕಾಲ ೭.೦೦ ಗಂಟೆಗೆ ಚಂದ್ರ ದರ್ಶನವನ್ನು ಮಾಡಿ ಗುರು-ಹಿರಿಯರಿಗೆ ನಮಸ್ಕರಿಸಿ ಆರ್ಶೀರ್ವಾದ ಪಡೆಯುತ್ತಾರೆ.

೩ನೇ ದಿನ. ಈ ದಿನದ ವಿಶೇಷವೆಂದರೆ ಆಂಜನೇಯಸ್ವಾಮಿ ಮತ್ತು ಶ್ರೀ ರಂಗನಾಥ ಸ್ವಾಮಿಯ ತೇರು ನಡೆಯುತ್ತದೆ. ಈ ತೇರಿಗೆ ಚಿತ್ರದುರ್ಗದ ಅಕ್ಕ-ಪಕ್ಕದ ಹಳ್ಳಿಯ ಜನರು, ಸಮಸ್ತ ಭಕ್ತಾದಿಗಳು ಬರುತ್ತಾರೆ. ಈ ತೇರಿಗೆ ಸುಮರು ೧೦ ಸಾವಿರ ಜನ ಸೇರುತ್ತಾರೆ. ನಂತರ

ತೇರು ನಿಲ್ಲಿಸಿದ ಜಾಗದಲ್ಲಿ "ದೊಡ್ಡ ಎಡೆ" ನೆರವೇರಿಸುತ್ತಾರೆ. ಇದಕ್ಕೆ ಅನ್ನ, ಬಾಳೆ ಹಣ್ಣು, ಸಕ್ಕರೆ, ಹಾಲು, ಎಲ್ಲವನ್ನು ಕಲೆಸಿ, ದೊಡ್ಡದಾದ ೯ ಬಾಳೆ ಎಲೆಗಳ ಮೇಲೆ ಒಂದೊಂದು ಎಲೆಯ ಮೇಲೆ ಒಂದು ಸೇರಿನಷ್ಟು ಅನ್ನವನ್ನು ಹಾಕುತ್ತಾರೆ.

ಇನ್ನು ಕೊನೆಯ ದಿನ ೯ ಜನ ಕೋರು ಹುಡುಗರಿಂದ ಈ ಎಡೆಯನ್ನು ಸ್ವೀಕರಿಸುತ್ತಾರೆ. ರಾತ್ರಿ ೮.೦೦ ಗಂಟೆಗೆ ಗುಡಿದುಂಬಿಸುವ ಕಾರ್ಯಕ್ರಮ ಮತ್ತು ಓಕುಳಿ ಕಾರ್ಯಕ್ರಮವಿರುತ್ತದೆ. ನಂತರ ಪರಸ್ಪರ ಒಬ್ಬರಿಗೊಬ್ಬರು ಸೇರಿ ಬಣ್ಣ  ಎರೆಚಿಕೊಳ್ಳುತ್ತಾರೆ.

**ರಾಮನವಮಿ :** ವಸಂತ ಮಾಸದ ಚೈತ್ರ ಶುದ್ಧ ನವಮಿ ಮರ್ಯದಾ ಪುರುಷೋತ್ತಮನಾದ ಶ್ರೀರಾಮನ ಜನ್ಮದಿನ .ಅಂದು ಭಾರತ ದೇಶದ ಎಲ್ಲಾ ಭಾಗಗಳಲ್ಲೂ ಪೂಜೆ, ಭಜನೆ, ರಥೋತ್ಸವ, ಪಾನಕ, ಪಚ್ಚಡಿ ವಿತರಣೆಯ ಸಂಭ್ರಮವೋ ಸಂಭ್ರಮ. ಈ ರಾಮೋತ್ಸವವನ್ನು ಯುಗಾದಿಯ ಚಂದ್ರನನ್ನು ನೋಡಿದ ದಿನದಿಂದ ರಾಮನವಮಿಯವರೆಗೆ ನಿತ್ಯ ಭಜನೆಯನ್ನು ಒಂಭತ್ತು ದಿನಗಳವರೆಗೂ ಮಾಡುತ್ತಾರೆ.

**ಬಸವಜಯಂತಿ :** ಈ ದಿನವನ್ನು ರಾಜಯೋಗದ ದಿನವೆಂದು ವೈಶಾಖ ಶುದ್ಧ ತೃತಿಯವನ್ನು ಅಕ್ಷಯ ತೃತಿಯ ಎಂದು ಕರೆಯುತ್ತಾರೆ. ಈ ದಿನವೇ ಭಕ್ತಿ ಭಂಡಾರಿ ಬಸವಣ್ಣನವರ ಜನ್ಮದಿನ. ಇದನ್ನು ಭಕ್ತಿ ಪೂರ್ವಕವಾಗಿ ವೈಭವದಿಂದ ಬಸವ ಜಯಂತಿ ಎಂದು ಆಚರಿಸುತ್ತಾರೆ. ಈ ದಿನವನ್ನು ಜನಪದರು ತುಂಬ ಶ್ರೇಷ್ಠ ದಿನವೆಂದು ಪರಿಗಣಿಸಿ ವಿವಾಹಗಳನ್ನು, ಗೃಹ ಪ್ರವೇಶವನ್ನು ಮಾಡುತ್ತಾರೆ. ಇನ್ನು ಕೆಲವು ಜನರು ಈ ದಿನದಂದು ಎತ್ತುಗಳನ್ನು ಪೂಜೆ ಮಾಡಿ ಶೃಂಗಾರ ಮಾಡುತ್ತಾರೆ. ಈಶ್ವರ ದೇವರ ವಿಗ್ರಹವನ್ನು ಗುಡ್ಡದವರೆಗೆ ಮೆರವಣಿಗೆ ಕರೆದುಕೊಂಡು ಹೋಗುತ್ತಾರೆ.

**ಕಾರುಹುಣ್ಣಿಮೆ :** ಕಾರುಹುಣ್ಣಿಮೆ ಜನಪದರಿಗೆ ವಿಶೇಷವಾದುದು. ಕಾರು ಎಂದರೆ ಮಳೆ. ಮಳೆಗಾಲದ ಆರಂಭದಲ್ಲಿಯೇ ಇದು ಬರುವುದರಿಂದ ಕಾರು ಹುಣ್ಣಿಮೆ ಎಂದು ಕರೆಯುತ್ತಾರೆ. ಜನಪದರು ಹೇಳುವ ನಾಣ್ಣುಡಿಯಂತೆ, 'ಕಾರು ಹುಣ್ಣಿಮೆ ಕರೆದುಕೊಂಡು ಬಂದಿತು. ಉಗಾದಿ ಉಡುಗಿಕೊಂಡು (ಉಡಿಸಿಕೊಂಡು) ಹೋಯಿತು' ಎಂಬ ಗಾದೆಯಂತೆ ಕಾರ ಹುಣ್ಣಿಮೆಯಿಂದ ಹಬ್ಬಗಳು ಆರಂಭವಾಗಿ ಒಂದಾದ ನಂತರ ಮತ್ತೊಂದು ಹಬ್ಬಗಳು.

ಜೇಷ್ಠ ಮಾಸದ ಹುಣ್ಣಿಮೆಯನ್ನು ಕಾರುಹುಣ್ಣಿಮೆ ಎಂದು ಕರೆಯುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಆರಂಭವೆಂದು ಹೇಳುತ್ತಾರೆ. ಈ ದಿನ ಎತ್ತುಗಳನ್ನು ತೊಳೆದು ಬಣ್ಣಗಳಿಂದ ಶೃಂಗರಿಸಿ ಕೊಂಬುಗಳಿಗೆ ಬಣ್ಣಗಳನ್ನು ಬಳಿದು ಕೊರಳಿಗೆ ಗಂಟೆ, ಗೆಜ್ಜೆಗಳನ್ನು ಕಟ್ಟುತ್ತಾರೆ. ಈ ದಿನ ಎತ್ತುಗಳನ್ನು ವ್ಯವಸಾಯ ಮಾಡಲು ರೈತರು ಉಪಯೋಗಿಸಿಕೊಳ್ಳುವುದಿಲ್ಲ. ಈ ದಿನವಾದರೂ ವರ್ಷವಿಡೀ ದುಡಿದ ಎತ್ತುಗಳಿಗೆ ವಿಶ್ರಾಂತಿ ದೊರೆಯಲಿ ಎಂದು ಬೇಸಾಯ ಮಾಡಲು ಬಳಸುವುದಿಲ್ಲ ಮತ್ತು ಈ ದಿನ ಎತ್ತಿನ ಕೊಟ್ಟಿಗೆ ಸಾರಿಸಿ ಸ್ವಚ್ಛಗೊಳಿಸಿ ದನಗಳಿಗೆ ಮೇವು

ಹಾಕುವ ಗೋದಲಿಗೆ ಪೂಜೆಮಾಡಿ, ಜೋಳ ಕಟ್ಟು, ಜೋಳದ ಅನ್ನ ಮಾಡಿ ಎತ್ತುಗಳಿಗೆ ನೈವೇದ್ಯ ಕೊಡುವರು.

**ಹೋಳಿಗೆಮ್ಮ** : ಈ ಹಬ್ಬವನ್ನು ಅಷಾಢ ಮಾಸದಲ್ಲಿ ಮಾಡುತ್ತಾರೆ. ಈ ಹಬ್ಬವನ್ನು ಗಾಳೆಮ್ಮ ಎಂದು ಸಹ ಕರೆಯುತ್ತಾರೆ. ಈ ಹಬ್ಬವನ್ನು ಮಾಡುವ ಉದ್ದೇಶ ಮಳೆ ಬರಲಿ ಎಂದು. ಊರಿನ ಜನರೆಲ್ಲ ಸೇರಿ ಊರ ಬಾಗಿಲ ಹತ್ತಿರ ಇರುವ ಬೊಡ್ಡೆ ಕಲ್ಲಿಗೆ ೧೦೧ ಕೊಡ ನೀರು, ೧೦೧ ಬನ್ನಿ ಪತ್ರೆಯನ್ನು ಹಾಕುವ ಮೂಲಕ ಪೂಜೆ ಮಾಡಿ. ನಡೆ-ಮುಡಿಯಿಂದ ಮಾಡಿದ ಹೋಳಿಗೆಯನ್ನು ಎಡೆಯಾಗಿ ಒಂದು ಹಳೆಯ ಮರದಲ್ಲಿ ಎಡೆ, ಬಾಳೆಹಣ್ಣು ಒಂದು ಚಿಕ್ಕ ಮಡಿಕೆ, ಕಪ್ಪು ಬಳೆ, ಅರಿಶಿಣ-ಕುಂಕುಮ, ಬೇವಿನ ಸೊಪ್ಪು ಇಟ್ಟು ಮನೆಯಲ್ಲಿ ಎಲ್ಲರೂ ಪೂಜೆ ಮಾಢಿ ಕೈ ಮುಗಿದು ಊರಿನ ಯುವಕರೆಲ್ಲ ರಾತ್ರಿ ಸಮಯ ಊರಿನಿಂದ ಆಚೆಗೆ ತೆಗೆದುಕೊಂಡು ಹೋಗಿ ಪೂಜೆ ಮಾಡಿ ಬಿಟ್ಟು ಬರುತ್ತಾರೆ. ಈ ರೀತಿ ಮಾಡುವುದರಿಂದ ಮಳೆ ಬರುತ್ತದೆ ಎನ್ನುವ ನಂಬಿಕೆ.

**ಏಕಾದಶಿ** : ಪ್ರತಿ ವರ್ಷ ಜೂನ್-ಜುಲೈ ತಿಂಗಳಲ್ಲಿ ಆಷಾಡ ಏಕಾದಶಿಯನ್ನು ಆಚರಿಸಲಾಗುತ್ತದೆ. ಅಷಾಡ ಶುದ್ದ ಏಕಾದಶಿಗೆ ಪ್ರಥಮ ಏಕಾದಶೀ ಶಯನ, ಏಕಾದಶೀ ವೈಷ್ಣವ, ಏಕಾದಶಿ ಮುಂತಾದ ಹೆಸರುಗಳಿವೆ. ಶೈವರಿಗೆ, ವೀರಶೈವರಿಗೆ ಶಿವರಾತ್ರಿಯು ಹೇಗೊ ಹಾಗೆ ವೈಷ್ಣವರಿಗೆ ಏಕಾದಶಿಯು ಪವಿತ್ರವಾದದ್ದು.

ಏಕಾದಶೀವ್ರತ ಮಹಿಮೆಯನ್ನು ಸಾರುವ ಪೌರಣಿಕ ಕಥೆಗಳು: ಹಿಂದೆ ತಾಮಸ ಗುಣ ಭೂವಿಷ್ಠಿನಾದ ಮೃದು ಮಾನ್ಯನೆಂಬ ರಾಕ್ಷಸ ಶಿವನನ್ನು ಆರಾಧಿಸಿ ಅವನಿಂದ ಆನೇಕ ವರಗಳನ್ನು ಪಡೆದು ಲೋಕ ಕಂಟಕನಾಗಿ ಪರಿಣಮಿಸಿದ. ಆಗ ದೇವ ದೇವತೆಗಳೆಲ್ಲರ ಶಕ್ತಿಯಿಂದ ಆವಿರ್ಭವಿಸಿದ ಶಕ್ತಿದೇವತೆಯಿಂದ ಅವನ ವಧೆಯಾಯಿತು. ಆ ಶಕ್ತಿ ದೇವತೆಯ ಹೆಸರು ಏಕಾದಶಿ ಪ್ರಥಮ ಏಕಾದಶಿಯೆಂದು. ಈ ಶಕ್ತಿ ದೇವತೆಯ ಪ್ರಾರ್ಥನೆ ಅನಿವಾರ್ಯ ತಮಟಕಲ್ಲು ಗ್ರಾಮದಲ್ಲಿ ಜನ ಉಪವಾಸ ವ್ರತ ಆಚರಣೆ ಮಾಡಿ ಸಂಜೆ ದೇವಸ್ಥಾನದಲ್ಲಿ ಹಾಲು, ಹಣ್ಣು, ಸಕ್ಕರೆ ದೊಡ್ಡ ಬಳೆ ಪ್ರಸಾದವಾಗಿ ಹಂಚುತ್ತಾರೆ.

**ನಾಗರ ಪಂಚಮಿ** : ಶ್ರಾವಣ ಮಾಸದಲ್ಲಿ ಆಚರಿಸಲ್ಪಡುವ ಈ ಹಬ್ಬವನ್ನು ಸಾಮಾನ್ಯವಾಗಿ ಎಲ್ಲರೂ ಆಚರಿಸುತ್ತಾರೆ. ನಾಗರ ಪಂಚಮಿ ಹೆಣ್ಣು ಮಕ್ಕಳ ಹಬ್ಬವೆಂದೇ ಕರೆಯಲಾಗುತ್ತದೆ. ಹೆಣ್ಣು ಮಕ್ಕಳಿಗೆ ಉತ್ಸಾಹದ ಹಬ್ಬ. ಚಿಕ್ಕವರು, ದೊಡ್ಡವರು ಎಲ್ಲರೂ ಜೋಕಾಲಿ ಜೀಕಿ ಸಂತಸಪಡುವರು. ಗಂಡನ ಮನೆಯಲ್ಲಿರುವ ಹೆಣ್ಣು ಮಕ್ಕಳನ್ನು ತವರಿಗೆ ಕರೆದುಕೊಂಡು ಬರುವರು. ತಮಟಕಲ್ಲು ಪರಿಸರದಲ್ಲಿ ಮದುವೆಯಾದ ಹೆಣ್ಣು ಮಕ್ಕಳು ಮೊದಲ ಬಾರಿಗೆ ಗಂಡನ ಮನೆಯಲ್ಲಿಯೇ ಹುತ್ತಕ್ಕೆ ಹಾಲನ್ನು ಎರೆಯುತ್ತಾರೆ. ಲಿಂಗಾಯಿತರು ಗಣೇಶನ ಹಬ್ಬದ ದಿನದಂದು ಹುತ್ತಕ್ಕೆ ಹಾಲನ್ನು ಎರೆದರೆ ಮಿಕ್ಕ ಸಮುದಾಯದವರು ನಾಗರ ಪಂಚಮಿಯಂದು ಹಾಲನ್ನು

ಎರೆಯುವರು. ಆ ದಿನ ಮನೆಯಲ್ಲಿ ಹೆಣ್ಣು ಮಕ್ಕಳು ಉಪವಾಸವಿದ್ದು, ನಡೆ–ಮಡಿಯಿಂದ ಅಡುಗೆಯನ್ನು ಮಾಡುತ್ತಾರೆ. ಸಜ್ಜೆ ಅಥವಾ ಜೋಳದ ಕಡುಬು, ಸೊಪ್ಪಿನ ಸಾರನ್ನು ಮಾಡಿ, ಚಿಗಳಿ, ತಮಟವನ್ನು ತಯಾರಿಸಿ ಗಜ್ಜೆ–ವಸ್ತ್ರವನ್ನು ತಯಾರಿಸಿ ದೇವಸ್ಥಾನದಲ್ಲಿರುವ ನಾಗರಕಟ್ಟೆಗೆ ಹಾಲು ಎರೆದು ನಂತರ ಹುತ್ತಕ್ಕೆ ಪೂಜೆಯನ್ನು ಮಾಡಿದ ನಂತರ ಉಪವಾಸ ಬಿಟ್ಟು ಊಟ ಮಾಡುತ್ತಾರೆ. ನಾಗರ ಪಂಚಮಿಯನ್ನು ಏಕೆ ಮಾಡುತ್ತಾರೆ ಎನ್ನುವುದಕ್ಕೆ ದಂತ ಕಥೆಯನ್ನು ಹೇಳುತ್ತಾರೆ. ಒಬ್ಬ ರೈತ ತನ್ನ ಗದ್ದೆಯಲ್ಲಿ ಉಳುತ್ತಿರುವಾಗ ನಾಗರ ಹಾವಿನ ಮರಿಗಳು ನೇಗಿಲ ಮೊನೆಗೆ ಸಿಕ್ಕು ಸಾಯುತ್ತವೆ. ಮರಿಗಳ ಸಾವಿನಿಂದ ತಾಯಿ ನಾಗಿಣಿ ಕೋಪ, ತಾಪ ಹೆಚ್ಚಿ ಆ ರೈತರ ಮನೆಗೆ ತೆರಳಿ ಮನೆಯವರನ್ನೆಲ್ಲ ಕಚ್ಚಿ ಸಾಯಿಸುತ್ತದೆ. ಅಷ್ಟಕ್ಕೆ ಬಿಡದೆ ರೈತನ ಮದುವೆಯಾದ ಮಗಳನ್ನು ಕಚ್ಚಿ ಸಾಯಿಸಿ ಕುಲ ಕ್ಷಯಗೊಳಿಸಲು ಅವಳ ಮನೆಯತ್ತ ಧಾಮಿಸಿದ ನಾಗಿಣಿ ಅಲ್ಲಿಗೆ ಹೋದಾಗ ರೈತನ ಮಗಳು ಮಣ್ಣಿನ ನಾಗರ ಮಾಡಿ ಹಾಲೆರೆದು ಪೂಜಿಸಿ ನಮಿಸುತ್ತಿದ್ದಳು. ಅದನ್ನು ಕಂಡು ನಾಗಿಣಿಯ ಕೋಪ ಕರಗಿತು ಮನಸ್ಸು ಹಿಗ್ಗಿತು. ತನ್ನ ಮರಿಗಳನ್ನೇ ಕೊಂದುದಕ್ಕಾಗಿ ನಿನ್ನ ತವರಿನವರನ್ನೆಲ್ಲ ಕಚ್ಚಿ ಸಾಯಿಸಿ ನಿನ್ನನ್ನು ಮುಗಿಸಿ ಬಿಡಲು ಇಲ್ಲಿಗೆ ಬಂದೆ. ಆದರೆ ನೀನು ಮಾಡುತ್ತಿರುವ ಪೂಜೆ ನೋಡಿ ಸಂತೋಷಗೊಂಡಿದ್ದೇನೆ. ನಿನ್ನ ಇಷ್ಟಾರ್ಥ ಈಡೇರಿಸುವೆ ಬೇಕಾದುದನ್ನು ಕೇಳು ಎಂದಾಗ ಆಕೆ ತನ್ನ ತಂದೆ ತಾಯಿಗಳನ್ನು ತವರಿನವರನ್ನು ಬದುಕಿಸುವಂತೆ ಬೇಡಿಕೊಂಡು ನಾಗಿಣಿಯ ಜೊತೆಗೆ ತವರಿಗೆ ಬಂದಳು. ನಾಗಿಣಿ ವಿಷ ಹೀರಿ ಎಲ್ಲರನ್ನು ಬದುಕಿಸಿತು. ಅಂದು ಶ್ರಾವಣ ಶುದ್ಧ ನಾಗರ ಪಂಚಮಿಯಾಗಿತ್ತು. ಅಂದು ಬದುಕಿದ ಆ ಮನೆಯವರೆಲ್ಲಾ ಸೇರಿ ನಾಗಾರಾಧನೆ ಮಾಡಿದರು. ಈ ಹಬ್ಬದಂದು ಹೆಚ್ಚಾಗಿ ಹೆಣ್ಣು ಮಕ್ಕಳು ತವರಿಗೆ ಹೋಗುವುದು ಬಳಕೆಯಲ್ಲಿ ಬರಲು ಈ ಕಥೆಯೇ ಮೂಲ ಎಂದು ಹೇಳುತ್ತಾರೆ. ಈ ರೀತಿಯಾಗಿ ನಗರ ಪಂಚಮಿಯಂದು ಕಡಲೆ ಉಂಡೆ, ಶೇಂಗಾ ಉಂಡೆಗಳನ್ನು ಮಾಡಿ ಬಂಧು ಬಳಗದವರಿಗೆ ಹಂಚುತ್ತಾರೆ.

ಮಾರಮ್ಮನ ಹಬ್ಬ:–ಮಾರಮ್ಮ ಹೆಣ್ಣು ದೇವತೆ ಸಾಮಾಜಿಕ ಸಂದರ್ಭದಲ್ಲಿನ ಮಕ್ಕಳಿಗೆ ದಡಾರಮ್ಮ, ಅಮ್ಮ, ಪ್ಲೇಗು, ಸಿಡುಬುಗಳು ಏಳುತ್ತಿದ್ದವು. ಇಂತಹ ಅಮ್ಮಗಳ ಆದಿ ದೇವತೆ ಈ ಮಾರಮ್ಮ ಎಂಬ ನಂಬಿಕೆ ಜನಪದರಲ್ಲಿ ಬಲವಾಗಿ ಬೇರೂರಿವೆ. ಮಕ್ಕಳಿಗೆ ಏನಾದರೂ ಈ ರೀತಿಯ ಪಿಡುಗುಗಳು ಸಂಭವಿಸಿದರೆ ಮಾರಮ್ಮನಿಗೆ ಮೀಸಲು ಕಟ್ಟಿಕೊಳ್ಳುತ್ತಾರೆ. ಅಂದರೆ ಬರುವ ವರ್ಷದ ಮಾರಮ್ಮನ ಹಬ್ಬದಲ್ಲಿ ಮಕ್ಕಳಿಗೆ ಬೇವಿನ ಸೀರೆ ಸೇವೆ ಮಾಡಿಸುತ್ತೇವೆ ಅಂತ ಹರಕೆ ಮಾಡಿಕೊಳ್ಳುತ್ತಾರೆ. ಇದು ಪ್ರಮುಖವಾಗಿ ಹಾಗೆಯೇ ಮನೆಯ ಹೆಂಗಸರು ಆರೋಗ್ಯವಾಗಿ ಇಲ್ಲದೆ ಇದ್ದರೆ ಅಂತಹ ಸಮಯದಲ್ಲಿಯೂ ಮಾರಮ್ಮನಿಗೆ ಬೇವಿನ ಸೀರೆ ಉಡಿಸುತ್ತೇವೆ ಎಂದು ಮೀಸಲು ಕಟ್ಟಿಕೊಳ್ಳುತ್ತಾರೆ. ಸಂಪೂರ್ಣ ನಂಬಿಕೆಗಳಿಗೆ ಬದ್ಧರಾಗಿ ಬದುಕುವ ಜನಪದರಲ್ಲಿ ಈ ಆಚರಣೆಯನ್ನು ನೋಡುತ್ತೇವೆ.

ಮಾರಮ್ಮನ ಜಾತ್ರೆ ಶ್ರಾವಣ ಮುಗಿದ ನಂತರ ಬರುವ ಮೊದಲನೆ ಮಂಗಳವಾರ ನಡೆಯುತ್ತದೆ. ನಂತರದ ಮೂರು ವಾರಗಳಲ್ಲಿ ಮಾರಮ್ಮನ ಹಬ್ಬ ಆಚರಿಸುತ್ತಾರೆ. ಮಾರಮ್ಮನ ಹಬ್ಬದ ದಿನ ಹೆಂಗಸರ ಪಾತ್ರ ಮುಖ್ಯವಾಗುತ್ತದೆ. ಅಂದು ಮನೆಯ ಹಿರಿಯ ಸೊಸೆಯಂದಿರು ಒಂದ್ಹೊತ್ತಿನ ಉಪವಾಸವಿದ್ದು ಮಡಿಯಾಗಿ ಮಾರಮ್ಮನಿಗೆ ಬೇಳೆ, ಅಕ್ಕಿ, ಕಾಯಿ, ಹಣ್ಣು, ಊದಿನಕಡ್ಡಿ, ಕರ್ಪೂರ, ಹೂವು, ಬೇವಿನ ಸೊಪ್ಪು ಹಾಗೂ ಎಡೆ ತೆಗೆದುಕೊಂಡು ದೇವರ ಸನ್ನಿಧಿಗೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ಜೊತೆಗೆ ಹರಕೆ ಹೊತ್ತ ಮಕ್ಕಳು, ಹೆಂಗಸರು ಬೇವಿನ ಸೀರೆ ಧರಿಸಿ ಬರುತ್ತಾರೆ. ಅವರು ದೇವಸ್ಥಾನವನ್ನು ಮೂರು ಸಾರಿ ಸುತ್ತಿ ಆಮೇಲೆ ಸ್ವಲ್ಪ ದೂರಕ್ಕೆ ಹೋಗಿ ಬೇವಿನ ಸೀರೆ ಕಳಚಿ ಹೊಸ ಬಟ್ಟೆ ಧರಿಸಿ ಮನೆಗೆ ಬಂದು ಒಂದ್ಹೊತ್ತು ಊಟ ಬಿಡುತ್ತಾರೆ. ಇದು ಇಂದಿಗೂ ಸಾಂಪ್ರದಾಯಿಕ ಕುಟುಂಬವರ್ಗದಲ್ಲಿ ನಡೆಯುತ್ತದೆ. ಇದು ಒಂದು ನಂಬಿಕೆ ಅಷ್ಟೆ. ಮಾರಮ್ಮ ಮಾಂಸಾಹಾರಿ ಆಗಿರುವುದರಿಂದ ಮೇಕೆ (ಆಡು), ಕೋಣ, ಕುರಿಗಳನ್ನು ಕಡಿದು ಸಂತೋಷದಿಂದ ಹಬ್ಬ ಮಾಡುತ್ತಾರೆ. ಹಬ್ಬದ ದಿನ ಮಹಿಳೆಯರು ಭಕ್ತಿಯಿಂದ ದೇವರ ಸ್ತುತಿ ಮಾಡುತ್ತಾ ಕೆಲಸದಲ್ಲಿ ನಿರತರಾಗಿರುತ್ತಾರೆ.

**ಗಣೇಶ ಚತುರ್ಥಿ** : ಹಿಂದೂಗಳಿಗೆ ಭಾದ್ರಪದ ಶುದ್ಧ ಚತುರ್ಥಿ ಗಣಪತಿಯ ಹಬ್ಬದ ದಿನ. ಇಡೀ ದೇಶದಾದ್ಯಂತ ನಡೆಯುತ್ತದೆ. ಇದಕ್ಕೆ ತಮಟಕಲ್ಲು ಗ್ರಾಮ ಕೂಡ ಹೊರತಾಗಿಲ್ಲ. ಗಣೇಶ ಚತುರ್ಥಿ ಭಾದ್ರಪದ ಮಾಸದ ಅಂದರೆ ಆಗಸ್ಟ್, ಸೆಪ್ಟೆಂಬರ ತಿಂಗಳಲ್ಲಿ ಬರುತ್ತದೆ. ಈ ವೇಳೆಗಾಗಲೇ ಮಳೆಗಾಲ ಮುಗಿದು ಬಹುತೇಕ ಕಡೆ ಬಿತ್ತನೆಯಂತ ಕೆಲಸಗಳು ಮುಗಿದಿರುತ್ತವೆ. ನಮ್ಮ ದೇಶದಲ್ಲಿ ಬಹುಶಃ ಗಣಪತಿ ಗುಡಿ ಇಲ್ಲದ ಗ್ರಾಮವಿಲ್ಲ. ಗಣೇಶನ ವಿಗ್ರಹವಿಲ್ಲದ ಗೃಹವಿಲ್ಲ. ಗಣಪತಿಯು ವಿಘ್ನನಿವಾರಕ, ಸಿದ್ಧಿ ಬುದ್ಧಿದಾಯಕ ಎಲ್ಲಾ ಶುಭ ಕಾರ್ಯಗಳಲ್ಲೂ ಯಾವುದೇ ಕೆಲಸ ಆರಂಭಿಸಬೇಕು ಎಂದರು ಮೊದಲು ಗಣಪತಿ ಪೂಜೆ ಮಾಡುತ್ತಾರೆ. ತಮಟಕಲ್ಲು ಪರಿಸರದಲ್ಲಿ ಗಣೇಶನನ್ನು ಕೂರಿಸುವುದಕ್ಕೂ ಮೊದಲು ಊರಿನ ಹುಡುಗರೆಲ್ಲರೂ ಕೂಡಿ ರಸ್ತೆಗಳಲ್ಲಿ ತಿರುಗಾಡುವ ವಾಹನಗಳನ್ನು ಅಡ್ಡಗಟ್ಟಿ ಹಣ ಕೇಳಿ ಪಡೆಯುವರು. ಅಲ್ಲಿರುವ ಹೋಟೆಲ್, ಅಂಗಡಿ ಮುಂಗಟ್ಟುಗಳವರು ಕೈಲಾದಷ್ಟು ಹಣ ಕೊಡುವರು. ಅದನ್ನು ಪಡೆದು ಹುಡುಗರು ಕೂಡ ತಮ್ಮ ಕೈಯಲ್ಲಿ ಇಂತಿಷ್ಟು ಹಣ ಹಾಕಿ ವ್ಯವಸ್ಥಿತವಾಗಿ ಎಲ್ಲಾ ಕೆಲಸವನ್ನು ಮಾಡುತ್ತಾರೆ. ಎಲ್ಲಾ ಹುಡುಗರು ಕೂಡು ಕುಟುಂಬದಂತೆ ಕೆಲಸದಲ್ಲಿ ಬಾಗಿಯಾಗುತ್ತಾರೆ. ಪೇಟೆಗೆ ಹೋಗಿ ಬೇಕಾದ ಎಲ್ಲಾ ವಸ್ತುಗಳನ್ನು, ಗಣೇಶನ ವಿಗ್ರಹವನ್ನು ತಂದು ಗಣೇಶನನ್ನು ಕೂರಿಸಲು ಬೇಕಾದ ಮಂಟಪ ಚಪ್ಪರಗಳನ್ನು ಸಿದ್ಧಗೊಳಿಸುತ್ತಾರೆ. ಬಾಳೆ ಕಂಬ, ತೋರಣ, ತೆಂಗಿನ ಗರಿಗಳ ಚಪ್ಪರ, ಬಣ್ಣ ಬಣ್ಣದ ಕಾಗದದ ಚಿತ್ರಗಳು ಎಲ್ಲವನ್ನು ಕಟ್ಟಿ ಸಿದ್ಧಪಡಿಸಿಕೊಳ್ಳುತ್ತಾರೆ. ಇದನ್ನೆಲ್ಲ ನೋಡುವ ಚಿಕ್ಕ ಮಕ್ಕಳ ಸಂತೋಷಕ್ಕೆ ಪಾರವೇ ಇರುವುದಿಲ್ಲ. ಮಕ್ಕಳು ಮನೆಗಳನ್ನು ಸೇರುವುದೇ ಇಲ್ಲ ಮರತೇ ಬಿಡುತ್ತಾರೆ.

ಗಣೇಶನನ್ನು ಮೂರು, ಐದು, ಏಳು ಅಥವಾ ಒಂಭತ್ತು ದಿನಗಳ ಕಾಲ ಇಡುತ್ತಾರೆ. ಪ್ರತಿದಿನವು ಒಂದೊಂದು ಮನೆಯವರು ಕಡುಬು, ಕಜ್ಜಾಯ, ಪಂಚಕಜ್ಜಾಯ, ನೈವೇದ್ಯಮಾಡಿ ಪೂಜೆ ಸಲ್ಲಿಸುವರು. ಗಣೇಶನ ವಿಸರ್ಜನೆಯ ಕೊನೆಯ ದಿನ ಟ್ರ್ಯಾಕ್ಟರ್‌ನಲ್ಲಿ ಕೂರಿಸಿ ಅಲಂಕಾರ ಮಾಡಿ ಊರೆಲ್ಲಾ ಮೆರವಣಿಗೆ ಮಾಡುತ್ತಾರೆ. ತಮಟೆ, ವಾದ್ಯಗಳ ಜೊತೆಗೆ ಮಕ್ಕಳ ನೃತ್ಯಗಳು ಎಲ್ಲರನ್ನು ರಂಜಿಸುತ್ತವೆ. ಕೊನೆಗೆ ಕೆರೆಯ ನೀರಿನಲ್ಲಿ ವಿಸರ್ಜನೆ ಮಾಡಿ ಎಲ್ಲರಿಗೂ ಪ್ರಸಾದ ಹಂಚುತ್ತಾರೆ.

ಆದರೆ ಮಕ್ಕಳಿಗೆ ಈ ಮೊದಲು ಇದ್ದ ಸಡಗರ ಸಂಭ್ರಮ ಇಲ್ಲವಾಗಿ ಕಳೆಗುಂದುತ್ತದೆ. ಗಣೇಶನನ್ನು ವಿಸರ್ಜನೆ ಮಾಡುವುದೇ ಅವರಿಗೆ ಇಷ್ಟವಿರುವುದಿಲ್ಲ.

ಗಣೇಶನ ಹಬ್ಬದ ದಿನ ಯಾರು ಚಂದ್ರನನ್ನು ನೋಡುವುದಿಲ್ಲ. ಹಾಗೆ ನೋಡಿದರೆ ಅಪವಾದ ಬರುವುದೆಂಬ ನಂಬಿಕೆ ಇದೆ.

**ದಸರಾ ಹಬ್ಬ** : ಇದು ನಾಡ ಹಬ್ಬವಾಗಿದ್ದು. ಈ ದಿನ ಮನೆಯಲ್ಲಿರುವ ವಾಹನಗಳಿಗೆ, ಶಸ್ತ್ರಾಸ್ತ್ರಗಳಿಗೆ ನೀರಿನಿಂದ ಸ್ವಚ್ಛಗೊಳಿಸಿ ಪೂಜೆ ಮಾಡುವರು. ಈ ದಿನದಂದು ಕೆಲವರು ಕುರಿ ಬಲಿಯನ್ನು ಕೊಟ್ಟು ವಿಶೇಷ ನೈವೇದ್ಯ ಕೊಡುವರು. ಪಾಂಡವರು ಅಜ್ಞಾತವಾಸದ ಕಾಲದಲ್ಲಿ ತಾವು ಬಚ್ಚಿಟ್ಟ ಆಯುಧಗಳ ಪೂಜೆಯನ್ನು ಈ ದಿನ ಮಾಡಿದರೆಂದು ಆಯುಧಗಳ ಪೂಜೆ ಮಾಡುತ್ತಾರೆ.

**ವಿಜಯದಶಮಿ :** ಆಯುಧ ಪೂಜೆ ಆದ ಮರುದಿನವೇ ವಿಜಯದಶಮಿ. ಎಲ್ಲಾ ಶುಭಕಾರ್ಯಗಳಿಗೆ ಇದು ಒಳ್ಳೆಯ ಮುಹೂರ್ತ ಎಂದು ಪರಿಗಣಿಸಲಾಗುತ್ತದೆ. ಮಹಾಲಯ ಅಮವಾಸೆ ದಿನದಿಂದ ಬನ್ನಿ ಪೂಜೆಯನ್ನು ಊರಿನ ಹೆಣ್ಣು ಮಕ್ಕಳು, ಮದುವೆ ಆದವರು, ಆಗದೆ ಇರುವರು ಒಂಭತ್ತು ಅಥವಾ ೧೧ ದಿನಗಳ ಕಾಲ ಬೆಳಗಿನ ಜಾವ ಯಾರಿಗೂ ಕಾಣದಂತೆ, ಮಾತನಾಡದಂತೆ ಬನ್ನಿಮರಕ್ಕೆ ಹೋಗಿ ಪೂಜೆಯನ್ನು ಮಾಡಿ ಬರುತ್ತಾರೆ. ಈ ರೀತಿ ಮಾಡುವುದರಿಂದ ಒಳ್ಳೆಯದಾಗುವುದು ಎನ್ನುವ ನಂಬಿಕೆ ಆ ಊರಿನ ಜನರಲ್ಲಿ ಇದೆ. ಒಂಭತ್ತು ದಿನಗಳ ಕಾಲ ನವರಾತ್ರಿ ಪೂಜೆಗೆ ಕೂತ ಹೆಣ್ಣು ದೇವತೆಗಳನ್ನು ವಿಯದಶಮಿಯಂದು ಶೃಂಗರಿಸಿ ಗಂಗಾ ಪೂಜೆಗೆ ಕರೆದುಕೊಂಡು ಹೋಗಿ ಪೂಜೆ ಮಾಡಿ ನಂತರ ಪಲ್ಲಕ್ಕಿಯಲ್ಲಿ ಬನ್ನಿ ಮರದ ಬಳಿಕರೆದುಕೊಂಡು ಹೋಗಿ ದೇವಿಗೆ ಪೂಜೆಯನ್ನು ಮಾಡುತ್ತಾರೆ. ನಂತರು ಬಿಲ್ಲು ಬಾಣದಿಂದ ಬನ್ನಿ ಮರಕ್ಕೆ ಹೊಡೆದು ಬನ್ನಿಯನ್ನು ತಂದು ಊರಿನ ಎಲ್ಲ ಜನರಿಗೂ ಬನ್ನಿ ಬಂಗಾರವಾಗಲೆಂದು ಹಂಚಿ ಕಾಲಿಗೆ ಬೀಳುತ್ತಾರೆ. ಬನ್ನಿ ಕೊಟ್ಟವರ ಮನೆ ಬಂಗಾರವಾಗಲೆಂದು ಆಶಿಸುತ್ತಾರೆ.

ಶಮೀ ಶಮಯತೇ ಪಾಪಂ ಶಮೀ ಶತ್ರು ನಿವಾರಿಣೀ

ಅರ್ಜುನಸ್ಯ ಧನುರ್ಧಾರೀ, ರಾಮಸ್ಯ ಪ್ರಯಾಕಾರಿಣೀ

ಓ ಶಮೀ ವೃಕ್ಷವೇ ನೀನು ಶ್ರೀರಾಮನಿಂದ ಪೂಜಿಸಲ್ಪಟ್ಟು ಶ್ಲಾಘನೆಗೆ ಪಾತ್ರವಾಗಿದ್ದು, ಅಜ್ಞಾತವಾಸ ಕಾಲದಲ್ಲಿ ಅರ್ಜುನನ ಧನಸ್ಸನ್ನು ಧರಿಸಿ ಮುಂದೆ ಜಯ ತಂದು ಕೊಟ್ಟಿರುವೆ. ಪಾಪವನ್ನು ಶತ್ರು ಬಾಧೆಯನ್ನು ನಿವಾರಿಸುವ ನೀನು ನನ್ನ ಕಾರ್ಯದಲ್ಲಿ ಜಯ ಸಿಗುವಂತೆ ಅನುಗ್ರಹಿಸು. ವಿಜಯ ದಶಮಿಯಂದು ಈ ಶ್ಲೋಕವನ್ನು ಹೇಳಿ ಶಮೀಪತ್ರೆಯನ್ನು ಪರಸ್ಪರ ವಿನಿಮಯ ಮಾಡಿಕೊಂಡು ಶುಭಕೋರುವ ವಾಡಿಕೆಯಾಗಿದೆ. ಸಕಲ ಕಾರ್ಯಗಳ ಸಿದ್ದಿಗೆ ಅದು ಪ್ರಶಸ್ತ ಮುಹೂರ್ತ. ಈ ದಿನವೇ ಪಾಂಡವರು ಅಜ್ಞಾತವಾಸವನ್ನು ಯಶಸ್ವಿಯಾಗಿ ಪೂರೈಸಿ, ಶಮೀ ಮರಕ್ಕೆ ಕಟ್ಟಿದ್ದ ಆಯುಧಗಳನ್ನು ಪಡೆದು, ಬನ್ನಿ ಹಂಚಿದ ದಿನ ಏನನ್ನೇ ಈ ದಿನ ಆರಂಭಿಸಿದರೂ ಜಯ ಖಚಿತ ಎನ್ನುವ ಭಾವನೆ ದಶಮಿಗೂ ಮೊದಲು ನವದಿನಗಳಂದು ನವೋತ್ಸಾಹದಿಂದ ಮನೆ-ಮನೆಗಳಲ್ಲಿ, ಗುಡಿ-ಗೋಪುರಗಳಲ್ಲಿ ಜನಮನ ಸ್ಪಂದಿಸುವ ನಾಡಹಬ್ಬ ಆಚರಿಸಲಾಗುತ್ತದೆ.

ಒಟ್ಟಾರೆ ಮಳೆಗರೆದು ಇಳೆ-ತಣಿದು, ಬೆಳೆ-ಬೆಳೆದು, ಹೊಳೆ ತೊರೆಗಳಲ್ಲಾ ತುಂಬಿನಿಂತ ಈ ಸುಸಮಯದಲ್ಲಿ ಆಚರಿಸುವ ನವರಾತ್ರಿ ಹಾಗೂ ವಿಜಯದಶಮಿಯು ಪ್ರಕೃತಿಮಾತೆಯ ಪೂಜೆಯಾಗಿ, ದುಷ್ಟ ಶಕ್ತಿಯ ಮೇಲೆ ಶಿಷ್ಠ ಶಕ್ತಿಯ ವಿಜಯದ ಸಂಕೇತವಾಗಿ ನಾಡಿನ ನಾಡಿ ಮಿಡಿಯುವ ಕಲೆ ಸಂಸ್ಕೃತಿಯ ಪ್ರಚಾರ ಸಾಧನವಾಗಿ ಆಧ್ಯಾತ್ಮಿಕ ವೃದ್ಧಿಯ ಕುರುಹಾಗಿ ನಿಲ್ಲಬಲ್ಲ ಹಬ್ಬವಾಗಿದೆ.

ತಮಟಕಲ್ಲು ಗ್ರಾಮದಲ್ಲಿ ಕೆಲವು ಜನರು ದಸರ ಹಬ್ಬದಲ್ಲಿ ಹಿರಿಯರ ಪೂಜೆಯನ್ನು ಮಾಡುತ್ತಾರೆ.

**ದೀಪಾವಳಿ :** ಎಲ್ಲಾ ಹಿಂದೂಗಳು, ಬಂಧು-ಬಳಗದವರೊಂದಿಗೆ ಉತ್ಸಾಹದಿಂದ ಆಚರಿಸುವ ದೊಡ್ಡ ಹಬ್ಬ ದೀಪಾವಳಿ. ಹಬ್ಬದ ದಿನದಲ್ಲಿ ಎಲ್ಲಿ ನೋಡಿದರೂ ದೀಪಗಳ ಸಾಲು ಕಣ್ತುಂಬುತ್ತವೆ ಮತ್ತು ಎಲ್ಲೆಲ್ಲಿಯೂ ಕಾಂತಿಯಿಂದ ಕೂಡಿರುತ್ತವೆ. ಈ ಹಬ್ಬದ ವೇಳೆಗೆ ಮುಂಗಾರು ಬೆಳೆ, ಧಾನ್ಯ ಲಕ್ಷ್ಮಿಯ ರೂಪದಲ್ಲಿ ರೈತನ ಮನೆ ಸೇರುತ್ತದೆ. ಮನೆ-ಮನೆಯಲ್ಲಿ ಕತ್ತಲೆಯನ್ನು ಹೋಗಲಾಡಿಸುವ ಈ ಹಬ್ಬದಲ್ಲಿ ಬಂಧು-ಬಾಂಧವರ ಸುಮಧುರ ಭೇಟಿಯನ್ನು ಕಾಣಬಹುದು. ಇಂದು ವಿಷ್ಣು-ಲಕ್ಷ್ಮಿಯರ ವಾರ್ಷಿಕ ಪುನರ್ಮಿಲನದ ದಿನ. ಆದ್ದರಿಂದ ಈ ದಿನ ಲಕ್ಷ್ಮೀ ಪೂಜೆಗೆ ಅತ್ಯಂತ ಪ್ರಶಸ್ತವಾದ ಮೂಹೂರ್ತ. ಈ ದಿನ ಮುಂಜಾನೆ ಅರಳಿ, ಮಾವು, ಹತ್ತಿ, ಆಲ ಮತ್ತು ನೇರಳೆಗಳ ಪಂಚ ಪಲ್ಲವಗಳಿಂದ ಕೂಡಿದ ನೀರಿನಲ್ಲಿ ಸ್ನಾನ ಮಾಡಬೇಕು. ಜ್ಞಾನದ ಪ್ರತೀಕವಾಗಿರುವ ದೀಪ ಅಜ್ಞಾನದ ಸಂಕೇತವಾಗಿರುವ ಕತ್ತಲನ್ನು

ಬಡಿದೋಡಿಸುವ ಸಾಮರ್ಥ್ಯ ಹೊಂದಿದೆ. ಅಜ್ಞಾನದ ನಿವಾರಣೆಗಾಗಿ ಭಾರತೀಯ ದಿನನಿತ್ಯದ ಪ್ರಾರ್ಥನೆಯೇ ತಮಸೋಮ ಜ್ಯೋತಿರ್ಗಮಯ ಓ ದೇವಾ ನನ್ನನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೊಯ್ಯು (ಡಾ.ಎಚ್.ವಿ. ನರಸಿಂಹ ಮೂರ್ತಿ, ೨೦೦೨, ಪುಟ ೯೧). ಎಂದು. ಆದ್ದರಿಂದ ಬೆಳಕಿನ ಆರಾಧಕರಾದ ಭಾರತೀಯರಿಗೆ ದೀಪಗಳ ಈ ಹಬ್ಬ ಬಹುಮುಖ್ಯವಾದುದಾಗಿದೆ.

ದೀಪಾವಳಿಯಲ್ಲಿ ಪ್ರಮುಖವಾಗಿ ನರಕ ಚತುರ್ದಶಿ ಮತ್ತು ಬಲಿಪಾಡ್ಯಮಿಯನ್ನು ವಿಶೇಷವಾಗಿ ಆಚರಿಸುತ್ತಾರೆ. ಬಲಿಪಾಡ್ಯಮಿ ದಿನದಂದು ಜನ ಬಲಿ ಚಕ್ರವರ್ತಿ ದಾನದ ಬಗ್ಗೆ ಚಿಕ್ಕ ಮಕ್ಕಳಿಗೆ ಕಥೆಯನ್ನು ಹೇಳುವ ಮೂಲಕ ಪುನರ್‌ಸ್ಮರಿಸಿಕೊಳ್ಳುತ್ತಾರೆ. ಈ ಭಾಗದ ಪ್ರದೇಶದಲ್ಲಿ ಹಬ್ಬದ ದಿನ ಎಲ್ಲಾ ಮನೆಯಲ್ಲಿ ಸಡಗರ ಸಂಭ್ರಮದಿಂದ ಪಟಾಕಿ ಸಿಡಿಸಿ ಸಿಹಿತಿಂದು ಸಂತೋಷಪಡುತ್ತಾರೆ. ತಮಟಕಲ್ಲಿನ ಕೆಲವು ಮನೆಯವರು ದೀಪಾವಳಿಯಲ್ಲಿ ಹಿರಿಯರ ಪೂಜೆಯನ್ನು ಮಾಡುತ್ತಾರೆ. ತಮ್ಮ ಮನೆಯಲ್ಲಿ ಸತ್ತಿರುವಂತಹ ಹಿರಿಯ ವ್ಯಕ್ತಿಗಳ ನೆನಪಿಗಾಗಿ ಸಿಹಿ ಅಡುಗೆಯನ್ನು ಮಾಡಿ, ಸತ್ತ ವ್ಯಕ್ತಿಗೆ ಪೂಜೆ ಮಾಡಲು ಎರಡು ಚೆಂಬುಗಳ ತುಂಬ ನೀರನ್ನು ತುಂಬಿ ಒಂದು ಅಜ್ಜಿ ಎಂದು ಮತ್ತೊಂದು ಅಜ್ಜ ಎಂದು, ಅಜ್ಜನ ಗಡಿಗೆ ಹೆಚ್ಚಿನ ಹಣ, ಅಜ್ಜಿ ಗಡಿಗೆ ಅದಕ್ಕಿಂತ ಕಡಿಮೆ ಹಣ ಹಾಕಿ, ನೆಲದ ಮೇಲೆ ಅಕ್ಕಿ ಅಥವಾ ಜೋಳವನ್ನು ನಿಧಿ ಎಂದು ಹಾಕಿ, ಅದರ ಮೇಲೆ ಈ ಎರಡು ಗಡಿಗೆ ಕೂರಿಸಿ ಹಬ್ಬಕ್ಕೆಂದು ತಂದ ಎಲ್ಲ ಹೊಸ ಬಟ್ಟೆಗಳನ್ನು ಗಂಡು ಮಕ್ಕಳ ಬಟ್ಟೆಯನ್ನು ಅಜ್ಜನಿಗೆ, ಪಂಚೆಯಲ್ಲಿ ಪೇಟ ಸುತ್ತಿ ಎಲ್ಲ ಬಟ್ಟೆ ಹಾಕುತ್ತಾರೆ. ಹೆಣ್ಣು ಮಕ್ಕಳಿಗೆ ತಂದ ಸೀರೆ ಇತರ ಎಲ್ಲ ವಸ್ತುಗಳನ್ನು ಅಜ್ಜಿಗೆ ಹಾಕಿ ಮಾಡಿದ ಎಲ್ಲ ಆಹಾರವನ್ನು ಎರಡು ಬಾಳೆ ಎಲೆಯ ಮೇಲಿಟ್ಟು ಸತ್ತ ವ್ಯಕ್ತಿ ಇಷ್ಟಪಡುತ್ತಿದ್ದ ಎಲ್ಲ ವಸ್ತುಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಮನೆ ಮಂದಿ ಎಲ್ಲ ಪೂಜೆ ಮಾಡಿದ ನಂತರವೇ ಊಟ ಮಾಡುವುದು. ಮಾರನೆ ದಿನ ಬೆಳಗ್ಗೆ ೭ ಗಂಟೆಯೊಳಗೆ ಹಿರಿಯರನ್ನು ಎತ್ತಿ ಆ ಗಡಿಗೆಯಲ್ಲಿ ತುಂಬಿಸಿದ ನೀರನ್ನು ಬಾವಿಗೆ ಚೆಲ್ಲಿ ಹೊಸ ನೀರನ್ನು ಹಿಡಿದುಕೊಂಡು ಬರುತ್ತಾರೆ. ಹಿರಿಯರಿಗೆ ಇಟ್ಟ ಪ್ರಸಾದವನ್ನು ಮನೆ ಗಂಡುಮಕ್ಕಳು ಮಾತ್ರ ತಿನ್ನಲು ಅವಕಾಶವಿದೆ. ಕೊಟ್ಟ ಮನೆಗೆ ಹೋದ ಹೆಣ್ಣುಮಕ್ಕಳಿಗೆ ಅವಕಾಶವಿರುವುದಿಲ್ಲ. ಗಂಡು ಮಕ್ಕಳಿಗೆ ಹಿರಿಯರ ಅಧಿಕಾರ ಹಸ್ತಾಂತರವಾಗುತ್ತದೆ ಎನ್ನುವ ನಂಬಿಕೆ ಇರುವುದರಿಂದ ಈ ರೀತಿಯಾಗಿ ಮಾಡುತ್ತಾರೆ.

ಇನ್ನು ಊಟವಾದ ನಂತರ ಪಟಾಕಿ ಸಿಡಿಸುವುದು. ದೀಪಾವಳಿ ಎಂದರೆ ಇಲ್ಲಿನ ಯುವಕರು, ಮಕ್ಕಳು ಪಟಾಕಿ ಹಬ್ಬವೆಂದೇ ಗುರುತ್ತಿಸುತ್ತಾರೆ. ಪಟಾಕಿ ಸಿಡಿಸುವುದು ಇಲ್ಲಿನ ಯುವಕ--ಯುವತಿಯರ ಆಶೆಯಾಗಿರುತ್ತದೆ.

**ಕಾರ್ತಿಕ :** ಕಾರ್ತಿಕ ಹಬ್ಬದಂದು ತಮಟಕಲ್ಲು ಪರಿಸರದಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಆಂಜನೇಯನಿಗೆ ಹೂವಿನಿಂದ ಅಲಂಕಾರ ಮಾಡಿ ದೇವಸ್ಥಾನದ ತುಂಬೆಲ್ಲಾ ದೀಪಗಳನ್ನು ಬೆಳಗಿಸುತ್ತಾ ದೇವಸ್ಥಾನಕ್ಕೆ ಬಂದ ಭಕ್ತರಿಗೆ ೧೦ ಪಲ್ಲ ಮಂಡಕ್ಕಿ ಫಲಹಾರವನ್ನು ಮಾಡಿ ಭಕ್ತಾದಿಗಳಿಗೆ ಹಂಚುತ್ತಾರೆ.

**ಮಕರ ಸಂಕ್ರಾಂತಿ :** ಸಾಮಾನ್ಯವಾಗಿ ಸಂಕ್ರಾಂತಿ ಜನವರಿ ತಿಂಗಳಲ್ಲಿ ಬರುತ್ತದೆ. ಇದು ಪುಷ್ಯ ಮಾಸದ ಚತುರ್ಥಿಯೆಂದು ಆಚರಿಸಲ್ಪಡುತ್ತದೆ. ಕೃಷಿಕರ ಸಮೃದ್ಧಿಯ ಹಬ್ಬವಾಗಿದೆ. ಮಕರ ಸಂಕ್ರಮಣ ಎಂದರೆ ಸೂರ್ಯನು ಮಕರ ವೃತ್ತದಿಂದ ಕರ್ಕಾಟಕ ವೃತ್ತಕ್ಕೆ ಸ್ಥಾನಪಲ್ಲಟ ಮಾಡುವ ಆ ದಿನವನ್ನು ಮಕರ ಸಂಕ್ರಾಂತಿ ದಿನವೆಂದು ಕರೆಯುತ್ತಾರೆ. ಮಕರ ಸಂಕ್ರಾಂತಿಯಂದು ಸ್ವರ್ಗದ ಬಾಗಿಲು ತೆರೆದಿರುತ್ತದೆಂದು, ಈ ಕಾಲವನ್ನು ಉತ್ತರಾಯಣ ಪುಣ್ಯಕಾಲವೆಂದು ಕರೆಯುತ್ತಾರೆ. ಆ ಸಮಯದಲ್ಲಿ ಸಾವು ಬಂದರೆ ಮುಕ್ತಿ ದೊರಕುತ್ತದೆಂಬ ನಂಬಿಕೆಯಿದೆ. ಮಹಾಭಾರತದಲ್ಲಿ ಇಚ್ಛಾಮರಣಿ ಭೀಷ್ಮ ಕುರುಕ್ಷೇತ್ರದ ರಣಭೂಮಿಯಲ್ಲಿ ಮರಣ ಹೊಂದಲು ಆ ದಿನಕ್ಕಾಗಿ ಕಾದನು ಎಂಬುದಾಗಿ ಪುರಾಣಗಳಲ್ಲಿ ಉಲ್ಲೇಖವಿದೆ.

ಸಂಕ್ರಾಂತಿಯ ಮುಖ್ಯ ಆಚರಣೆ ಎಳ್ಳು ಬೀರುವುದು. ಎಳ್ಳು ದಾನ ಮಾಡಿದರೆ ಪುಣ್ಯ ಪ್ರಾಪ್ತಿಯಾಗುವುದೆಂಬ ನಂಬಿಕೆಯಿದೆ. ಅಂದು ದೇವರಿಗೆ ಎಳ್ಳು ಬೆಲ್ಲವೇ ನೈವೇದ್ಯ. ಹೊಸಬಟ್ಟೆ ತೊಟ್ಟು ಅಲಂಕರಿಸಿಕೊಂಡ ಹೆಣ್ಣು ಮಕ್ಕಳು ಸಡಗರದಿಂದ ಮನೆ ಮನೆಗೆ ಹೋಗಿ ಎಳ್ಳು ಬೆಲ್ಲ ಬೀರುತ್ತಾರೆ. ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತಾಡು ಎಂಬ ಗಾದೆಯು ಈ ಹಬ್ಬದ ಸಂದರ್ಭದಲ್ಲಿನ ಜನಪದರು ಹೇಳುವ ಮಾತಾಗಿದೆ.

ಎಳ್ಳಿನ ಜೊತೆ ಕಡಲೆ, ಹುರಿಗಡಲೆ, ಕೊಬ್ಬರಿ, ಬೆಲ್ಲ ಸೇರಿಸುತ್ತಾರೆ. ಎಳ್ಳಿನಲ್ಲಿ ಎಣ್ಣೆಯ ಅಂಶ ಹೆಚ್ಚಾಗಿರುವುದರಿಂದ ಚಳಿಯಿಂದ ಒಡೆದ ಚರ್ಮಕ್ಕೆ ಎಣ್ಣೆ ಕಾಳುಗಳ ಸೇವನೆ ಅವಶ್ಯ. ಜಿಡ್ಡಿನ ಆಹಾರ ಸೇವನೆ ಚಳಿಯಿಂದ ದೇಹವನ್ನು ರಕ್ಷಿಸುವುದಾಗಿದೆ. ಈ ಕಾಲದಲ್ಲಿ ಶೀತವಾತ ಸಂಬಂಧಿ ರೋಗಗಳು ಕಾಣಿಸುವ ಸಾಧ್ಯತೆಗಳಿವೆ. ಎಳ್ಳಿನ ಸೇವನೆ ಈ ಕೊರತೆಯನ್ನು ತುಂಬಿ ಈ ರೋಗಗಳನ್ನು ದೂರಮಾಡಬಲ್ಲದು. ಎಣ್ಣೆಯ ಅಂಶ ಹೆಚ್ಚಾಗಿರುವ ಒಣ ಕೊಬ್ಬರಿ, ನೆಲಗಡಲೆ ಬೀಜ ಇವುಗಳನ್ನು ಎಳ್ಳಿನ ಜೊತೆಗೆ ಸೇರಿಸಲಾಗುವುದು. ಬೆಲ್ಲದ ಬದಲು ಸಕ್ಕರೆ, ಸಕ್ಕರೆಯಿಂದ ಮಾಡಿದ ವಿವಿಧ ಆಕಾರದ ಅಚ್ಚುಗಳು, ಕಬ್ಬಿನ ತುಂಡು ಹೀಗೆ ವೈವಿಧ್ಯಗಳಲ್ಲಿ ಸದಾಭಿರುಚಿ ಮತ್ತು ಕಲಾವಂತಿಕೆಗಳ ಕುರುಹುಗಳಾಗಿವೆ. ಸಂಕ್ರಾಂತಿ ಅಂದಿನ ದಿನ ವಿಶೇಷವಾದ ಅಡುಗೆ ಎಂದರೆ ಸಜ್ಜೆ ರೊಟ್ಟಿ. ರೊಟ್ಟಿಗೆ ಒಣ ಮೆಣಸಿನ ಬೀಜ, ಎಳ್ಳು ಹಾಕಿ ರೊಟ್ಟಿ ಸುಡುತ್ತಾರೆ. ರೊಟ್ಟಿಗೆ ಶೇಂಗಾ ಬೀಜದ ಚಟ್ನಿ ಪುಡಿ, ಸಿಹಿ ಚಟ್ನಿ ಪುಡಿ, ಹಸಿ ಅವರೇಬೇಳೆ ಪಲ್ಯ, ಶೇಂಗಾ ಚಟ್ನಿ ಹೀಗೆ ವಿವಿಧ ರೀತಿಯ ತರಕಾರಿಯ ಪಲ್ಯ, ಚಟ್ನಿ ಪುಡಿಗಳನ್ನು ಮಾಡುತ್ತಾರೆ. ಸಂಕ್ರಾಂತಿಯ ಸಮಯದಲ್ಲಿ ಶಂಖಿನ ಗಾತ್ರದ ಚಳಿಹೋಗಿ, ಸಾಸಿವೆ ಗಾತ್ರದ ಸೆಖೆ ಹುಟ್ಟುತ್ತದೆಂಬ ಮಾತಿದೆ. ಮೈ ಮರಗಟ್ಟಿಸುವ ಚಳಿಯಿಂದ ಹೊರಬಂದು, ಹೊಸ ಚೈತನ್ಯದಾಯಕವಾದ ಬೇಸಿಗೆಯತ್ತ ಸಾಗುವ ಕಾಲವಿದು. ಮರಗಿಡಗಳಲ್ಲಿ ಎಲೆಗಳು ಉದುರಿರುತ್ತವೆ. ಪ್ರಕೃತಿಯ ಮಡಿಲಲ್ಲಿಯ ಇಂಥ ಪರಿಳಿತಗಳಿಗೆ ಮಾನವನ ದೇಹ ಸ್ಪಂದಿಸುವುದಕ್ಕಾಗಿ ಸಂಕ್ರಾಂತಿಯಲ್ಲಿ ಬರುವ ಹಲವಾರು ಆಚರಣೆಗಳು ಮಹತ್ವ ಪಡೆದಿವೆ. ನೂರಾರು ವರ್ಷಗಳಿಂದ ರೂಢಿಸಿಕೊಂಡು ಬಂದ ಆರೋಗ್ಯಪರ ಜಾಣ್ಮೆ ಆಚರಣೆಗಳ ಮೂಲಕ ಸಾಗಿ ಬಂದಿವೆ.

**ಶಿವರಾತ್ರಿ** : ಈ ದಿನವನ್ನು ಜನಪದರು ಶಿವನು ಹಾಲಾಹಲ ವಿಷ ಕುಡಿದ ದಿನವೆಂತಲೂ, ತಾಂಡವ ನೃತ್ಯ ಮಾಡಿದ ದಿನವೆಂತಲೂ ಹೇಳುತ್ತಾರೆ. ಶಿವರಾತ್ರಿಯಂದು ಶಿವನಿಗೆ ಅಭಿಷೇಕ ಮಾಡುತ್ತಾರೆ. ಶಿವನು ಅಭಿಷೇಕ ಪ್ರಿಯ. ಅಭಿಷೇಕದಿಂದ ತೃಪ್ತಿಪಡಿಸಿದಾಗ ಆ ಪಶುಪತಿ ನಮ್ಮಲ್ಲಿರುವ ಪಶುತ್ವವನ್ನು ದೂರ ಮಾಡುತ್ತಾನೆ ಎನ್ನುವ ನಂಬಿಕೆ ಇದೆ. ಜನಪದರು ಈ ದಿನವೆಲ್ಲ ಉಪವಾಸ, ಶಿವಕತೆ, ಅರ್ಚನೆ, ಅಭಿಷೇಕ, ಜಾಗರಣೆ ಮಾಡುತ್ತಾರೆ. ಶಿವರಾತ್ರಿ ಹಬ್ಬ ಆಚರಣೆ ಮಾಡುವುದಕ್ಕೆ ಒಂದು ಕಥೆ ಇದೆ ಎಂದು ತಿಳಿಸುತ್ತಾರೆ. ಪ್ರತ್ಯಂತವೆಂಬ ದೇಶದಲ್ಲಿ ಸದಾ ಬೇಟೆಯಾಡಿ ಜೀವಿಸುವ ಒಬ್ಬ ಬೇಡನಿದ್ದ. ಒಂದು ದಿನ ಹಗಲೆಲ್ಲ ಅವನಿಗೆ ಬೇಟೆ ಸಿಗಲಿಲ್ಲ. ರಾತ್ರಿ ಸರೋವರವೊಂದರ ಬಳಿ ಇದ್ದ ಬಿಲ್ವ ವೃಕ್ಷವನ್ನೇರಿ ಅಲ್ಲಿಗೆ ನೀರು ಕುಡಿಯಲು ಬರುವ ಪ್ರಾಣಿಗಳನ್ನು ಕೊಲ್ಲಲು ಹೊಂಚು ಹಾಕುತ್ತಿದ್ದ. ಅಂದು ಶಿವರಾತ್ರಿಯಾಗಿತ್ತು. ಆದರೆ ಬೇಡನಿಗೆ ತಿಥಿ–ಮಿತಿಗಳ ಪರಿವೆಯಿಲ್ಲ. ಬಿಲ್ವ ವೃಕ್ಷದಡಿಯಲ್ಲೆ ಒಂದು ಬಯಲು ಲಿಂಗವಿದ್ದುದರ ಅರಿವೂ ಅವನಿಗಿಲ್ಲ. ಅವನಿಗೆ ಅರಿವಿಲ್ಲದಂತೆ ದೃಷ್ಟಿಗೆ ಅಡ್ಡ ಬಂತೆಂದು ಕಿತ್ತು ಬಿಸಾಡಿದ ಬಿಲ್ವಪತ್ರೆಗಳು ಮರದಡಿಯಿದ್ದ ಲಿಂಗವನ್ನು ಮುಚ್ಚಿದವು. ಆ ಸಮಯಕ್ಕೆ ಒಂದು ತುಂಬು ಗರ್ಭಿಣಿಯಾದ ಜಿಂಕೆ ನೀರು ಕುಡಿಯಲು ಬಂದಿತು. ಬೇಡ ಬಾಣ ಬಿಡಲು ಸನ್ನದ್ದನಾದಾಗ ಅದು ನುಡಿಯಿತು. ತುಂಬು ಗರ್ಭಿಣಿಯಾದ ನನ್ನನ್ನು ಕೊಂದು ಭ್ರೂಣಹತ್ಯ ಪಾಪಕ್ಕೆ ಗುರಿಯಾಗಬೇಡ. ಸ್ವಲ್ಪ ಸಮಯದಲ್ಲಿ ಪ್ರಸವಿಸಿದ ಬಳಿಕ ನಾನಾಗಿ ಇಲ್ಲಿಗೆ ಬಂದು ದೇಹ ಅರ್ಪಿಸುವೆ, ಶಿವನಾಣೆ, ಎಂದಾಗ ಬೇಡನಿಗೆ ಶಿವಶಬ್ಧ ಕೇಳುತ್ತಲೇ ದಯೆ ಹುಟ್ಟಿ ಬಿಟ್ಟು ಬಿಟ್ಟನು. ನಿದ್ರೆ ತಡೆಯಲು ಪತ್ರೆ ಕಿತ್ತು ಎಸೆಯುತ್ತಲೆ ಇದ್ದನು. ಎರಡನೆ ಯಾಮದಲ್ಲಿ ಇನ್ನೊಂದು ಹರಿಣಿ ಮೂರು ಮರಿಗಳೊಂದಿಗೆ ನೀರು ಕುಡಿಯಲು ಬಂದಿತು. ಅದೂ ಹಾಗೆ ಬೇಡನನ್ನು ಕುರಿತು ಈ ಮರಿಗಳನ್ನು ಪತಿಯೆಡೆಗೆ ಬಿಟ್ಟು ಬರುವೆ ಎಂದಿತು,ಅದನ್ನು ಬಿಟ್ಟನು. ನಂತರ ಒಂದು ಗಂಡು ಜಿಂಕೆ ಬಂದಿತು. ಅದಕ್ಕೆ ಬಾಣ ಹೂಡಿದಾಗ ಅದು ಶಿವಾ ಶಿವಾ ನನ್ನನ್ನೇಕೆ ಕೊಲ್ಲುವೆ? ಮೊದಲು  ನೀನು ದಯೆ ತೋರಿ ಬಿಟ್ಟ ಎರಡೂ ಜಿಂಕೆಗಳು ನನಗಾಗಿ ಕಾಯುತ್ತಿವೆ. ಅವುಗಳೊಂದಿಗೆ ಇಲ್ಲಿಗೆ ತಪ್ಪದೆ ಬರುವೆ ಶಿವನಾಣೆ ಎಂದಾಗ ಅದನ್ನು ಬಿಟ್ಟು ಬಿಟ್ಟ. ಮಾತಿನಂತೆ ಬೆಳಗಿನ ಜಾವಕ್ಕೆ ಎಲ್ಲಾ ಜಿಂಕೆಗಳು, ಮರಿಗಳು ಬಂದು ಬೇಡನನ್ನು ಕುರಿತು ನಮ್ಮನ್ನು ಈಗ ಕೊಲ್ಲು ಎಂದವು. ಉಷಾ ಕಾಲ ಸಮೀಪಿಸಿತ್ತು. ಬೇಡನ ಮನಸ್ಸೇ ಪರಿವರ್ತನೆಯಾಗಿತ್ತು. ಆಗ ಅವನು ಶಿವ ಶಿವಾ ನಿಮ್ಮನ್ನು ಕೊಂದು ನಾನಾವ ನರಕಕ್ಕೆ ಹೋಗಲಿ? ಆದಿನ ಬೇಡನಿಗರಿವಿಲ್ಲದಂತೆ ನಿರಾಹಾರ ಲಿಂಗಾರ್ಚನೆ, ಜಾಗರಣೆ, ಶಿವನಾಮಸ್ಮರಣೆ ಎಲ್ಲಾ ಆಗಿ ಕಟ್ಟಾ ಶಿವರಾತ್ರಿ ಆಚರಣೆ ನಡೆದಿತ್ತು. ಶಿವನು ಅವನ ಬಗ್ಗೆ ಪ್ರಸನ್ನನಾಗಿದ್ದ ಕೂಡಲೇ ಅಲ್ಲಿಗೆ ಬಂದ ಶಿವಗಣಗಳು ವಿಮಾನದಲ್ಲಿ ಆ ಜಿಂಕೆಗಳೊಂದಿಗೆ ಕುಟುಂಬ ಸಹಿತ ಬೇಡನನ್ನು ಕೂಡಿಸಿಕೊಂಡು ಕೈಲಾಸಕ್ಕೆ ಕರೆದೊಯ್ದರು. ಅವನನ್ನು ಬರಮಾಡಿಕೊಂಡು ಶಿವನು ನನಗಷ್ಟೆ ಅಲ್ಲ ನಿನ್ನ ಕಥೆ ಕೇಳಿದವರಿಗೂ ಶಿವರಾತ್ರಿಯಂದು ಮಡಿದವರಿಗೂ ಕೈಲಾಸ ಪದವಿ ಖಚಿತ ಎಂದು ಲೋಕಕ್ಕೆ ಆಶ್ವಾಸನೆಯಿತ್ತನು.

ಈ ರೀತಿಯಾಗಿ ಆ ದಿನವನ್ನು ಶಿವರಾತ್ರಿಯಂದು ಲೋಕದ ಜನರಲ್ಲಿ ಭಕ್ತಿ ನಿಷ್ಠೆಯಿಂದ ಶಿವಧ್ಯಾನ ಮಾಡುತ್ತಾ ಜಾಗರಣೆಯನ್ನು ಮಾಡುತ್ತಾರೆ. ತಮಟಕಲ್ಲಿನ ಜನರು ಸಹ ಇದೇ ರೀತಿಯಾಗಿ ಶಿವರಾತ್ರಿಯನ್ನು ಆಚರಣೆ ಮಾಡುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆ ಮಕ್ಕಳನ್ನು ಹೆರುವ ಸಲಹುವ ಸ್ವಾಭಾವಿಕ ಕೇಂದ್ರವಾದ ಸ್ತ್ರೀಮಾತ್ರ ಅದೇ ಸ್ಥಾನದಲ್ಲಿದ್ದಾಳೆ. ಪುರುಷನ ಕಾರ್ಯ ಸಾಧನೆಯಲ್ಲಿ ಭಾಗಿಯಾಗಿದ್ದಾಳೆ. ಆದರೆ ಅವಳನ್ನು ಕಾಣುವ ದೃಷ್ಟಿಕೋನ ಮಾತ್ರ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ವಿವಿಧ ಧರ್ಮಗಳು ಮಹಿಳೆಗೆ ಪೂಜ್ಯ ಸ್ಥಾನ ನೀಡುತ್ತಿವೆ. ಆದರೆ ಧರ್ಮಗಳು ಇಲ್ಲಸಲ್ಲದ ನಿರ್ಬಂಧಗಳನ್ನು ಹೇರುವುದು ಬೌದ್ಧಿಕ ವಿಕಾಸಕ್ಕೆ ಮಾರಕವಾಗಿದೆ. ಒಂದು ದೇಶದಲ್ಲಿಯ ಮಹಿಳೆಯರ ಸ್ಥಾನಮಾನ ಆಧುನಿಕತೆಯ ಅಳತೆಗೋಲು ಎನ್ನಬಹುದು. ಸಮುದಾಯದಲ್ಲಿ ಮಹಿಳೆಯ ಸ್ಥಾನ ನಿರ್ಧಾರವಾಗುವುದು ಆ ಸಮುದಾಯದಲ್ಲಿ ತನ್ನನ್ನು ತಾನು ನಿರ್ಧರಿಸಿಕೊಳ್ಳಲು ಅವಳಿಗಿರುವ ಸಮಾನ ಅಂಶಗಳಿಂದ, ಶೈಕ್ಷಣಿಕ ಅವಕಾಶಗಳು ಪ್ರಮುಖವಾದುದು. ಜಗತ್ತಿನಾದ್ಯಂತ ಎಲ್ಲ ಸಮಾಜದಲ್ಲಿ ಮತ್ತು ಸಂಸ್ಕೃತಿಯಲ್ಲಿ ಮಹಿಳೆಯರು ಅನ್ಯಾಯಕ್ಕೆ ಮತ್ತು ತುಳಿತಕ್ಕೆ ಹಾಗೂ ಪುರುಷರ ದಬ್ಬಾಳಿಕೆಗೆ ಒಳಗಾಗುತ್ತಲೆ ಇದ್ದಾರೆ. ಇದನ್ನು ಯಾರು ಅಲ್ಲಗಳೆಯಲಾರರು. ಸಾಮಾಜಿಕವಾಗಿ, ಆರ್ಥಿಕವಾಗಿ ಅವಳೇ ಪುರುಷರ ಮೇಲೆ ಅವಲಂಬಿಯಾಗಿದ್ದಾಳೆ. ಮಹಿಳೆಯ ಜೀವನ ಎಲ್ಲಾ ಹಂತಗಳಲ್ಲಿ ಪುರುಷಾಧೀನಳು. ಮಹಿಳೆಯರ ಸ್ಥಾನಮಾನ ಸಮಾಜದಲ್ಲಿ ಪ್ರತ್ಯೇಕ ವ್ಯಕ್ತಿತ್ವವನ್ನು ಮತ್ತು ಸ್ಥಾನಮಾನಗಳನ್ನು ಕಳೆದುಕೊಂಡಿದ್ದಳು. ಅವಳ ಅಸ್ತಿತ್ವ ಮತ್ತು ಸಂತೋಷ ಅವಳ ಪತಿಯನ್ನು ಅವಲಂಬಿಸಿತ್ತು. ಪತಿ ಕುರುಡನಾಗಿರಲಿ, ಕುಂಟನಾಗಿರಲಿ, ಕ್ರೂರಿಯಾಗಿರಲಿ ಪತ್ನಿ ಮಾತ್ರ ಅವನಿಗೆ ನಿಷ್ಠೆಯಿಂದ ವಿಧೇಯ ಪೂರಕವಾಗಿ ಗಂಡನಿಗಾಗಿ ಮಕ್ಕಳಿಗಾಗಿ ತನ್ನ ಸುಖ ಸಂತೋಷಗಳನ್ನು ತ್ಯಾಗ ಮಾಡಬೇಕು ಎನ್ನುವಂತಹದ್ದು ನಾವು ತಿಳಿಯಬಹುದಾದ ವಿಷಯವಾಗಿದೆ.

ಹೆಣ್ಣು ಪುರುಷ ಕೇಂದ್ರಿತ ಸಮಾಜದಲ್ಲಿದ್ದರೂ ಅವಳಿಗೆ ಸ್ವತಂತ್ರ ಇದೆ. ಅವಳು ಜೀವನ ಪೂರ್ತಿ ದುಡಿಯುತ್ತಾಳೆ. ಅವಳಿಗೆ ಜ್ಞಾನ ಇಲ್ಲದಿದ್ದರು ತಿಳುವಳಿಕೆ ಇದೆ. ಜೀವನ ವಾತ್ಸಲ್ಯಗಳು ಅವಳ ರಕ್ತದ ಕಣಕಣಗಳಲ್ಲಿಯೂ ಭದ್ರವಾಗಿ ನೆಲೆಯೂರಿವೆ. ಅವಳಿಗೆ ಸ್ತ್ರೀವಾದ ನಿರೂಪಣೆ, ಚಿಂತನೆ ಇಂತಹ ಯಾವ ಸಿದ್ಧಾಂತಗಳ ಅರಿವು ಆಗಲಿ ಇಲ್ಲ. ಇವು ಶಿಷ್ಟ ಸಮಾಜದ ಅಕ್ಷರಸ್ಥ ಸಮುದಾಯದಲ್ಲಿ ಹುಟ್ಟಿಕೊಂಡ ಸಿದ್ಧಾಂತಗಳು. ಆದರೆ ಅನಕ್ಷರಸ್ಥ ಸಮುದಾಯದ ಹೆಣ್ಣು ಜನಪದ ಸಂಸ್ಕೃತಿಯಲ್ಲಿ ಇದ್ದರೂ ಅವಳು ತನ್ನ ನೈಜತೆಯನ್ನು ಉಳಿಸಿಕೊಂಡಿದ್ದಾಳೆ. ಕೆಲವು ಹೆಣ್ಣು ಮಕ್ಕಳು ಪುರುಷನಷ್ಟೆ ಸಮರ್ಥವಾಗಿ ಕೌಟುಂಬಿಕ ಜವಾಬ್ದಾರಿಯನ್ನು ನಿಭಾಯಿಸಿಕೊಂಡು ಹೋಗಬಲ್ಲ ಜಾಣ್ಮೆಯನ್ನು ಹೊಂದಿದ್ದಾರೆ. ಹೆಣ್ಣು ಗಂಡು ಜೈವಿಕ ಕ್ರಿಯೆಯಲ್ಲಿ ಪ್ರಕೃತಿದತ್ತವಾಗಿ ಬದಲಾವಣೆ ಹೊಂದಿರಬಹುದು. ಆದರೆ ಶಕ್ತಿ ವ್ಯಕ್ತಿ ಚಿಂತನೆಯಲ್ಲಿ ಮಹಿಳೆಗೆ ಪುರುಷನನ್ನು ಮೀರಿ ನಿಲ್ಲುವ ಶಕ್ತಿ ಇದೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯ ಬಂಧಿಯಾಗಿ ಅವನು

ಕೊಟ್ಟಂತಹ ಸ್ಥಾನಮಾನಗಳನ್ನು ಸ್ವೀಕರಿಸುತ್ತಾ ಬಂದಿದ್ದಾಳೆ. ಇಂದು ಈ ಎಲ್ಲಾ ಸ್ಥಿತಿಯನ್ನು ಮೀರಿ ಗಂಡು ಹೆಣ್ಣು ಸಮಾನರು ಎಂಬುದನ್ನು ತಿಳಿದುಕೊಳ್ಳುವ ಅನಿವಾರ್ಯತೆ ಇಂದಿನ ಸಮಾಜದಲ್ಲಿ ಸೃಷ್ಟಿಯಾಗಬೇಕಾಗಿದೆ.

ಮಹಿಳೆಗೆ ಕುಟುಂಬದಲ್ಲಿ ಪ್ರಮುಖ ಸ್ಥಾನವಿದೆ. ಮನೆಯ ಯಜಮಾನ ಪುರುಷನೇ ಆಗಿರುತ್ತಾನೆ. ಆದರೆ ಅವನ ವ್ಯಕ್ತಿತ್ವದ ಹಿಂದೆ ಹೆಣ್ಣಿನ ಸಹಕಾರ ತುಂಬಾನೆ ಇದೆ. ಕೌಟುಂಬಿಕ ಜೀವನದಲ್ಲಿ ಹೆಣ್ಣು ತಾಯಿಯಾಗಿ, ಹೆಂಡತಿಯಾಗಿ, ಅಕ್ಕನಾಗಿ, ಮಗಳಾಗಿ, ಅತ್ತೆಯಾಗಿ, ಅತ್ತಿಗೆ, ನಾದಿನಿ, ಸೊಸೆ, ವಾರಗಿತ್ತಿ ಹೀಗೆ ಇನ್ನೂ ಅನೇಕ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತಾಳೆ. ಈ ಎಲ್ಲಾ ಪಾತ್ರಗಳಿಗೂ ಕುಟುಂಬದಲ್ಲಿ ನೋವು–ನಲಿವು, ಪ್ರೀತಿ–ದ್ವೇಷ, ಅಸೂಯೆ ಹಾಗೂ ಇನ್ನಿತರ ಅನೇಕ ಸಂದಿಗ್ದ ಸನ್ನಿವೇಶಗಳನ್ನು ಸಹಿಸಿಕೊಳ್ಳುವ ಗುಣ ಇದೆ. ಮಹಿಳೆ ತನ್ನ ಕುಟುಂಬದ ಶ್ರೇಯಸ್ಸಿಗೆ ಹೆಚ್ಚು ದುಡಿಯುತ್ತಾಳೆ. ಗ್ರಾಮೀಣ ಪ್ರದೇಶದ ಮಹಿಳೆಯರು ಹೊಲ ಮನೆ ಎನ್ನದೆ ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಅವಳು ಅಡುಗೆ ಮಾಡುವ ಕೆಲಸದಿಂದ ಹಿಡಿದು ಮಕ್ಕಳ ಆರೈಕೆ ಪಾಲನೆ ನೋಡಿಕೊಳ್ಳುವುದರ ಜೊತೆಗೆ ಪುರುಷನ ಸರಿಸಮನಾಗಿ ಕೃಷಿ ಕ್ಷೇತ್ರದಲ್ಲಿಯೂ ದುಡಿಯುತ್ತಾಳೆ. ಅಷ್ಟೇ ಅಲ್ಲದೆ ತೋಟಗಾರಿಕೆ, ಪಶುಪಾಲನೆ, ತರಕಾರಿ, ವ್ಯಾಪಾರ, ಹಣ್ಣಿನ ವ್ಯಾಪಾರ, ಹೈನುಗಾರಿಕೆ, ಸಾಕಾಣಿಕೆ, ಕೆಲವು ಕೈಗಾರಿಕೆಗಳಲ್ಲಿಯೂ ನಿರಂತರವಾಗಿ ಕೆಲಸ ಮಾಡುತ್ತಾ ಇದ್ದಾಳೆ. ವ್ಯವಹಾರ ಮತ್ತು ಶ್ರಮದ ಬದುಕು ಪ್ರಾದೇಶಿಕವಾಗಿ ತುಂಬಾ ವಿಶಿಷ್ಟವಾಗಿರುತ್ತದೆ. ಕುಟುಂಬದಲ್ಲಿ ಗಂಡ ಅತಿ ಕುಡುಕನಾಗಿದ್ದರೆ, ಜೂಜುಕೋರನಾಗಿದ್ದರೆ, ವ್ಯಭಿಚಾರಿಯಾಗಿದ್ದರೆ ಅಂತಹ ಸಂದರ್ಭದಲ್ಲಿ ಮನೆಯ ಒಡೆತನವನ್ನು ಮಹಿಳೆ ವಹಿಸಿಕೊಂಡಿರುವುದನ್ನು ನಾವು ನೋಡುತ್ತೇವೆ. ಇದು ಇತ್ತೀಚಿನ ಬೆಳವಣಿಗೆಯಾಗಿದೆ. ಇಲ್ಲಿನ ಮಹಿಳೆಗೆ ತನ್ನ ಕುಟುಂಬದ ಅಳಿವು ಮತ್ತು ಉಳಿವಿನ ಬಗ್ಗೆ ಸದಾ ಯೋಚನೆ ಇರುತ್ತದೆ. ಹಾಗಾಗಿ ಇಲ್ಲಿನ ಬಹುಪಾಲು ಮಹಿಳೆಯರು ಅನಕ್ಷರಸ್ಥರು. ಆದರೆ ಅವರಿಗೆ ನೈತಿಕ ಹಕ್ಕಿನ ಬಗ್ಗೆ ಅರಿವಿದೆ. ದಿವಾಳಿತನಕ್ಕೆ ತಮ್ಮ ಕುಟುಂಬವನ್ನು ಬಾಗಿಯಾಗಲು ಬಿಡುವುದಿಲ್ಲ. ಅಂತಹ ಕಡೆ ಮಹಿಳೆಯರು ಜಾಗೃತರಾಗಿರುತ್ತಾರೆ. ಇಡೀ ಸಮಾಜವನ್ನು ಅವಳು ತನ್ನ ಅರಿವಿಗೆ ತೆಗೆದುಕೊಂಡು ಕುಟುಂಬದ ಪಾತ್ರ ಹೇಗೆ ಇದೆ? ಅಂತ ಪ್ರಶ್ನೆ ಮಾಡಿಕೊಳ್ಳುತ್ತಲೇ ಸಾಮಾಜಿಕ ಸಂರಚನಾ ಸಿದ್ಧಾಂತಕ್ಕೊಳಗಾಗುತ್ತಾರೆ. ಮಹಿಳೆಯರಲ್ಲಿ ದೇವರು ಮತ್ತು ಧರ್ಮಗಳು ಜೀವನದ ಉಸಿರಾಗಿವೆ. ಇವರು ತಮ್ಮ ಕುಲದೇವರ ಬಗ್ಗೆ ಅಪಾರವಾದ ನಂಬಿಕೆ ಇಟ್ಟುಕೊಂಡಿದ್ದಾರೆ. ಹಾಗೆಯೇ ಮೂಢನಂಬಿಕೆ, ಸಂಪ್ರದಾಯ, ಆಚರಣೆ ನಿಯಮಗಳು ಹಬ್ಬ ಹರಿದಿನಗಳು, ಜಾತ್ರೆ ಇನ್ನು ಮುಂತಾದ ಸಾಂಸ್ಕೃತಿಕ ಸಂದರ್ಭದಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಾಳೆ. ಈ ರೀತಿಯ ಪಾಲ್ಗೊಳ್ಳುವಿಕೆಯಲ್ಲಿ ಮಹಿಳೆಯರ ಸ್ಥಾನವೇನು ಎಂದು ನೋಡುವುದಾದರೆ ಹಬ್ಬಗಳ ಸಂದರ್ಭದಲ್ಲಿ ಮನೆಯಲ್ಲಿ ಮಹಿಳೆಯರಿದ್ದರೆ ಮಾತ್ರ ಸಂತಸ. ಹಬ್ಬವನ್ನು ವಿಜೃಂಭಣೆಯಿಂದ ಮಾಡಲು ಸಾಧ್ಯ.

ಹಬ್ಬದ ವಾತಾವರಣ ಸಂತೋಷ, ನಗುವಿನಿಂದ ತುಂಬಿ ತುಳುಕುತ್ತದೆ. ಏಕೆಂದರೆ ಮಹಿಳೆಯರೇ ಮನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಮನೆಯಲ್ಲಿ ನಡೆಯುವ ಪ್ರತಿಯೊಂದು ಹಬ್ಬಗಳಲ್ಲಿ ಮಹಿಳೆ ಪ್ರಮುಖ ಸ್ಥಾನ ಪಡೆಯುತ್ತಾಳೆ. ಹಬ್ಬಗಳಲ್ಲಿ ಆಹಾರವನ್ನು ಸಿದ್ಧಪಡಿಸುವ, ಮನೆಯನ್ನು ಸ್ವಚ್ಛವಾಗಿಡುವ, ಅಲಂಕಾರಗೊಳಿಸುವ, ಮಕ್ಕಳಿಗೆ ಸ್ನಾನ ಮಾಡಿಸುವ, ಬಟ್ಟೆಗಳನ್ನು ತೊಡಿಸುವ ಮೊದಲಾದ ಜವಾಬ್ದಾರಿಯನ್ನು ವಹಿಸಿರುತ್ತಾರೆ. ಇದು ಎಲ್ಲ ಹಬ್ಬಗಳಲ್ಲಿ ಮಹಿಳೆಯರಿಗೆ ಇರುವ ಸ್ಥಾನವಾಗಿದೆ. ಆದರೆ ಒಂದೊಂದು ಹಬ್ಬದಲ್ಲಿ ಗಂಡಿನ ಪಾತ್ರ ಅಥವಾ ಹೆಣ್ಣಿನ ಪಾತ್ರ ಪ್ರಮುಖವಾಗಿರುವುದನ್ನು ಕಾಣಬಹುದು. ಮಹಿಳೆ ಕೇವಲ ಅಡುಗೆ ಮಾಡುವುದಕ್ಕೆ ಮಾತ್ರ ಸೀಮಿತವಾಗಿದ್ದಾಳೋ ಅಥವಾ ಅದರಾಚೆಗೂ ಅವಳಿಗೆ ಒಂದು ಸ್ಥಾನಮಾನ, ಜವಾಬ್ದಾರಿಯನ್ನು ಪುರುಷಪ್ರಧಾನ ಸಮಾಜ ನೀಡಿದೆಯೋ ಇಲ್ಲವೆ ಎಂಬುದನ್ನು ಈ ಮೇಲೆ ಹೇಳಿದ ಹಬ್ಬಗಳ ಆಚರಣೆಗಳಿಂದ ತಿಳಿದುಕೊಳ್ಳೋಣ. ಪ್ರಸ್ತುತ ತಮಟಕಲ್ಲು ಗ್ರಾಮದಲ್ಲಿ ಆಚರಿಸುವ ಹಬ್ಬಗಳಲ್ಲಿ ಮಹಿಳೆಯ ಸ್ಥಾನವೇನು ಎನ್ನುವುದನ್ನು ನೋಡೋಣ. ಈ ಯುಗಾದಿ ಹಬ್ಬದಲ್ಲಿ ಮಹಿಳೆಯರು ಸಿಹಿ ತಿಂಡಿ ತಿನಿಸುಗಳನ್ನು ಮಾಡುತ್ತಾರೆ. ಚಿಕ್ಕ ಹೆಣ್ಣು ಮಕ್ಕಳಿಗೆ ಸೀರೆಯನ್ನು ಉಡಿಸಿ ಮೊಳಕೆ ಆರತೆಯನ್ನು ಮಾಡಿಸುತ್ತಾರೆ. ಇಲ್ಲಿ ಗಂಡು ಮಕ್ಕಳ ಪಾತ್ರ ತುಂಬ ಪ್ರಮುಖವಾದುದು ಇದು ಊರಿನ ಜನರೆಲ್ಲ ಸೇರಿ ಮಾಡುವ ಹಬ್ಬವಾಗಿದೆ. ಈ ಹಬ್ಬವನ್ನು ನಾಲ್ಕು ದಿನಗಳ ಕಾಲ ಮಾಡುವರು ಊರಿನ ಪ್ರಮುಖ ಮುಖಂಡರು ಪೂರ್ವಭಾವಿ ಸಭೆಯನ್ನು ಸೇರುತ್ತಾರೆ. ಯುಗಾದಿ ಹಬ್ಬದಲ್ಲಿಯೇ ಆಂಜನೇಯ ಸ್ವಾಮಿ ಜಾತ್ರಾ ಮಹೋತ್ಸವ ಮಾಡುವುದರಿಂದ ಯಾವ ಯಾವ ಆಚರಣೆಗೆ ಅಂದರೆ ಗಂಗಾ ಪೂಜೆ, ಲಕ್ಕವ್ವ, ತುಳಸವ್ವ ಪೂಜೆ, ಅಗ್ನಿ ಕೆಂಡ ತಯಾರಿಕೆಗೆ, ತೇರಿನ ಅಲಂಕಾರಕ್ಕೆ ಬಂದಿರುವ ಭಕ್ತರಿಗೆ ಪ್ರಸಾದ ನೀಡಲು, ಈ ರೀತಿಯಾಗಿ ಯಾವುದಕ್ಕೆ ಎಷ್ಟು ಖರ್ಚು ಮಾಡಬೇಕು ಎನ್ನುವುದನ್ನು ನಿರ್ಧರಿಸುವುದು ಗಂಡಸರೇ ಹೊರತು ಹೆಣ್ಣು ಮಕ್ಕಳಲ್ಲ. ಇಲ್ಲಿ ಹೆಣ್ಣುಮಕ್ಕಳು ಕೇವಲ ಅಡುಗೆ ಕೆಲಸಕ್ಕೆ ಆರತಿ ಎತ್ತಲು ಮಾತ್ರ ಸೀಮಿತವಾಗಿರುತ್ತಾರೆ. ಎಲ್ಲ ಹೆಚ್ಚಿನ ಜವಾಬ್ದಾರಿ, ಸ್ಥಾನಮಾನ ಗಂಡಸರದ್ದೇ ಆಗಿರುತ್ತದೆ. ಇನ್ನು ರಾಮನವಮಿ ಹಬ್ಬದಲ್ಲಿ ಗಂಡಸರದ್ದೆ ಪ್ರಮುಖ ಪಾತ್ರ. ಏಕೆಂದರೆ ಯುಗಾದಿಯ ೩ನೇ ದಿನ ಚಂದ್ರನನ್ನು ನೋಡಿದ ದಿನದಿಂದ ಹಿಡಿದು ರಾಮನವಮಿ ದಿನದವರೆಗೆ ಒಂಭತ್ತು ದಿನಗಳ ಕಾಲ ಆಂಜನೇಯನ ದೇವಸ್ಥಾನದಲ್ಲಿ ಪ್ರತಿನಿತ್ಯ ಭಜನೆಯನ್ನು ಮಾಡುತ್ತಾರೆ. ಹೀಗೆ ಭಜನೆ ಮಾಡುವವರು ಗಂಡಸರೇ ಆಗಿರುತ್ತಾರೆ. ಮಹಿಳೆಯರು ಇದ್ದರು ಒಬ್ಬರು ಅಥವಾ ಇಬ್ಬರು ಇರುತ್ತಾರೆ ಅಷ್ಟೇ. ಆದ್ದರಿಂದ ಇಲ್ಲಿ ಗಂಡಸಿನ ಪಾತ್ರ ಪ್ರಮುಖವಾಗಿದೆ. ಇನ್ನು ಕಾರು ಹುಣ್ಣಿಮೆಯ ಸಂದರ್ಭದಲ್ಲಿ ಎತ್ತುಗಳ ಅಲಂಕಾರ ಮಾಡುವುದು ಪೂಜೆ ಮಾಡುವ ಎಲ್ಲ ಜವಾಬ್ದಾರಿ ಗಂಡುಮಕ್ಕಳದ್ದೇ ಆಗಿರುತ್ತದೆ. ಹೋಳಿಗೆಮ್ಮ ಹಬ್ಬದಲ್ಲಿ ಮಹಿಳೆಯರದ್ದೆ ಪ್ರಮುಖ ಪಾತ್ರ. ಮನೆಯನ್ನು ಸ್ವಚ್ಛಗೊಳಿಸುವುದರ ಜೊತೆ ಜೊತೆಯಲ್ಲಿ ಅಡುಗೆಯನ್ನು ಮಾಡುತ್ತಾ ದೇವರ ಪೂಜೆಗೆ ಸಿದ್ಧಪಡಿಸುವ ಜವಾಬ್ದಾರಿ

ಮಹಿಳೆಯರದ್ದೇ ಆಗಿರುತ್ತದೆ. ಇಲ್ಲಿ ಗಂಡಸರದ್ದು ಕೇವಲ ಭೋಜನ ಮಾಡುವುದು. ಚಿಕ್ಕ ಪುಟ್ಟ ಕೆಲಸಗಳನ್ನು ಮಾಡುವುದಾಗಿದೆ. ಇನ್ನು ಏಕಾದಶಿಯಲ್ಲಿ ಉಪವಾಸ ವ್ರತ ಆಚರಣೆ ಏನಿದ್ದರು ಮಹಿಳೆಯರಿಗೆ ಸೀಮಿತ ಮನೆಯಲ್ಲಿ ಪೂಜೆಯನ್ನು, ಆಚರಣೆಯನ್ನು ತುಂಬ ನಿಷ್ಠೆಯಿಂದ ಭಕ್ತಿಯಿಂದ ಮಾಡುವವಳು ಮಹಿಳೆಯೇ ಆಗಿದ್ದಾಳೆ. ನಾಗರಪಂಚಮಿಯಂತು ಹೆಣ್ಣುಮಕ್ಕಳ ಹಬ್ಬವೇ ಆಗಿದೆ. ಇಲ್ಲಿ ಮಹಿಳೆಗೆ ಹೆಚ್ಚಿನ ಜವಾಬ್ದಾರಿ ಇದೆ. ಇಲ್ಲಿ ಪೂಜೆ, ಅಡುಗೆ ಎಲ್ಲ ಕೆಲಸವು ಮಹಿಳೆಯದ್ದೆ ಆಗಿದೆ.

ಇನ್ನೂ ಗಣೇಶ ಹಬ್ಬ. ಇದರಲ್ಲಿ ಗಂಡು ಮಕ್ಕಳೇ ತುಂಬ ಪ್ರಮುಖ ಪಾತ್ರವಹಿಸುತ್ತಾರೆ. ಗಣೇಶ ಚತುರ್ಥಿ ಎಂದರೆ ಊರಿನ ಹುಡುಗರಿಗೆ ಎಲ್ಲಿ ಇಲ್ಲದ ಸಂತೋಷ. ಮೂರು ದಿನಗಳ ಮುಂಚಿತವಾಗಿಯೇ ಗಣೇಶನನ್ನು ಕೂಡಿಸುವ ಜಾಗವನ್ನು ಸ್ವಚ್ಛಗೊಳಿಸಿಕೊಳ್ಳುವುದು, ಬಣ್ಣದ ಪೇಪರ್ ವಿನ್ಯಾಸವಾಗಿ ಕತ್ತರಿಸಿಕೊಳ್ಳುವ, ಗಣೇಶನನ್ನು ತರುವ ಅದನ್ನು ಕಳಿಸುವ ಎಲ್ಲ ಜವಾಬ್ದಾರಿ ಗಂಡಸಿನದ್ದೇ ಆಗಿದೆ. ದೀಪಾವಳಿ, ಸಂಕ್ರಾಂತಿ, ಹಬ್ಬಗಳಲ್ಲಿ ಮಹಿಳೆಯರದ್ದೇ ಪ್ರಮುಖ ಪಾತ್ರವಾಗಿರುತ್ತದೆ. ಇನ್ನು ಜೀವನಾವರ್ತನ ಆಚರಣೆಗಳಲ್ಲಿ ಮಹಿಳೆಯರ ಸ್ಥಾನವನ್ನು ನೋಡುವುದಾದರೆ ಸೀಮಂತ ಕಾರ್ಯ, ಋತುಮತಿ, ನಾಮಕರಣ ಈ ಎಲ್ಲಾ ಸಂದರ್ಭದಲ್ಲೂ ಮಹಿಳೆಯರ ಪಾತ್ರ ಮಹತ್ವದ್ದಾಗಿದೆ. ಈ ಎಲ್ಲಾ ಆಚರಣೆಗಳಲ್ಲೂ ಮಹಿಳೆಯೇ ಮುಂದೆ ನಿಂತು ಎಲ್ಲ ಕಾರ್ಯಗಳನ್ನು ನಡೆಸುತ್ತಾಳೆ. ಇಲ್ಲಿ ಪುರುಷಪಾತ್ರ ಅಷ್ಟೇನು ಇಲ್ಲ. ತಲೆ ಮಂಡೆ ಕೊಡುವುದು, ನಿಶ್ಚಿತಾರ್ಥ, ಮದುವೆ, ಶವಸಂಸ್ಕಾರ ಪದ್ಧತಿ ಈ ಎಲ್ಲ ಆಚರಣೆಗಳಲ್ಲಿ ಗಂಡಸಿನ ಪಾತ್ರ ತುಂಬ ಪ್ರಮುಖವಾದದ್ದು. ಮಕ್ಕಳ ತಲೆ ಮಂಡೆ ಕೊಡುವ ಸಂದರ್ಭದಲ್ಲಿ ಸೋದರಮಾವ ಅತ್ಯವಶ್ಯಕವಾಗಿ ಬೇಕು. ಇನ್ನು ನಿಶ್ಚಿತಾರ್ಥ ಮದುವೆ ಎಲ್ಲ ಸಂದರ್ಭದಲ್ಲೂ ಮಹಿಳೆಯರಿಗಿಂತ ಪುರುಷರದ್ದೆ ಪಾತ್ರ ಪ್ರಮುಖ ಮತ್ತು ಎಲ್ಲ ನಿರ್ಧಾರ ಮತ್ತು ಜವಾಬ್ದಾರಿಗಳು ಗಂಡಸಿನದ್ದೇ ಆಗಿದ್ದು ಇಲ್ಲಿ ಮಹಿಳೆಯ ನಿರ್ಧಾರಗಳಿಗೆ ಮನ್ನಣೆ ಇಲ್ಲ. ಕೆಲವು ಕುಟುಂಬಗಳಲ್ಲಿ ಗಂಡ ಮತ್ತು ಹೆಂಡತಿ ಇಬ್ಬರಲ್ಲಿಯೂ ಸಮಾನತೆ ಎನ್ನುವುದು ಇದ್ದರೆ ಮಹಿಳೆಯರ ನಿರ್ಧಾರ, ಸಲಹೆಗಳಿಗೂ ಮನ್ನಣೆ ಇರುತ್ತದೆ. ಪುರುಷರ ಪರಮಾಧಿಕಾರವೇ ಇರುವ ಮನೆಗಳಲ್ಲಿ ಪುರುಷರ ನಿರ್ಧಾರಗಳೇ ಅಂತಿಮ. ಅವು ತಪ್ಪು ಇರಲಿ ಇಲ್ಲ ಸರಿಯಿರಲಿ ಮನೆಯ ಹೆಣ್ಣು ಮಕ್ಕಳು ತಲೆಬಾಗಲೇಬೇಕು. ಮದುವೆಯ ಕೆಲವು ಆಚರಣೆಗಳಲ್ಲಿ ಮಹಿಳೆಯರೆ ಮುಖ್ಯ ಪಾತ್ರವಹಿಸುತ್ತಾರೆ.

**೪.೩. ಜನಪದ ನಂಬಿಕೆಗಳು ಮತ್ತು ವಿಧಿ-ನಿಷೇಧಗಳಲ್ಲಿ ಮಹಿಳೆ :**

ಜನಪದ ನಂಬಿಕೆ, ಜನಪದದ ಮುಖ್ಯ ಪ್ರಕಾರಗಳಲ್ಲಿ ಒಂದಾಗಿ ಪರಿಗಣಿತವಾಗಿದೆ. ಜನಪದರು ಆಚರಿಸುವ ಆಚರಣೆ, ಸಂಪ್ರದಾಯಗಳು ನಂಬಿಕೆ ಮೇಲೆ ನಿಂತಿವೆ. ಜನಪದರ ಜೀವನದಲ್ಲಿ ನಂಬಿಕೆಗಳ ಪಾತ್ರ ಮುಖ್ಯವಾದುದು. ಅವುಗಳೇ ಜನಪದ ಕೆಲಸಕ್ಕೆ ಆಧಾರಗಳು. ತೀರಾ ಆಧುನಿಕ ಸಮಾಜದಲ್ಲಿಯೂ ನಂಬಿಕೆಗಳಿಂದ ದೂರಾಗದೆ ಸಿಲುಕಿಕೊಳ್ಳುವ ಸ್ಥಿತಿಯು

ಕಂಡುಬರುತ್ತದೆ. ದೇವರು, ಪೂಜೆ, ತೀರ್ಥಯಾತ್ರೆ, ಹಬ್ಬ ಹರಿದಿನ, ಸ್ವಪ್ನ ಹೀಗೆ ಜೀವನಕ್ಕೆ ಸಂಬಂಧಿಸಿದ ಸ್ಥಾನದಲ್ಲಿ ತನ್ನ ಅಸ್ತಿತ್ವದ ಕಾಲು ಚಾಚಿರುವ ನಂಬಿಕೆಗಳು ಸಂಸ್ಕೃತಿಯ ಮೂಲ ನೆಲೆಗಳಾಗಿವೆ. ಒಂದೊಂದು ಧರ್ಮ, ಜನಾಂಗ ಸಮುದಾಯ ಬುಡಕಟ್ಟುಗಳು ಅನುಸರಿಸುವ ನಂಬಿಕೆಗಳು ಅವರವರಿಗೆ ತೋರು ದೀಪಗಳಾಗಿ ಮಾರ್ಗದರ್ಶಿಗಳಾಗಿವೆ. ನೀತಿ ನಿಯಮಗಳಾಗಿವೆ.

ಆರ್.ಎಸ್. ಬಾಗ್ಸ್ ಎಂಬ ಜಾನಪದ ವಿದ್ವಾಂಸರು ನಂಬಿಕೆಗಳನ್ನು ವೈಜ್ಞಾನಿಕ ಬಗೆಯಲ್ಲಿ ವರ್ಗೀಕರಿಸಿದ್ದಾನೆ. ಅದೇ ರೀತಿಯಾಗಿ ಇನ್ನಿತರೆ ವಿದ್ವಾಂಸರು ನಂಬಿಕೆಗಳಲ್ಲಿ ಬೇರೆ ಬೇರೆ ಪ್ರಕಾರಗಳಾಗಿ ಗುರುತಿಸಿದ್ದಾರೆ. ನಂಬಿಕೆ ಎನ್ನುವ ಪದದ ಮಹತ್ವ ಬಹಳಷ್ಟು ಆಳವಾದ, ವಿಶಾಲವಾದ, ಅತ್ಯಂತ ಮೌಲ್ಯಯುತ ಪದವಾಗಿದೆ. ಈ ಪದವು ಚಲಿಸುವ ಬಂಡಿಗೆ ಕಡೆಗೀಲು ಇದ್ದಂತೆ. ಜೀವಿಗಳ ದೇಹದ ಚಲನೆಗೆ ಉಸಿರಾಟ ಮುಖ್ಯವಾದಂತೆ ನಂಬಿಕೆ ಜೀವನ ಚಕ್ರಕ್ಕೆ ಅಷ್ಟೆ ಮುಖ್ಯವಾಗಿದೆ. ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ ನಂಬಿಕೆಗಳನ್ನು ಮೂಡನಂಬಿಕೆಗಳು ಎಂದು ಹೇಳಲಾಗುವುದು. ಈ ಹೇಳಿಕೆಯನ್ನು ವಿಶ್ಲೇಷಿಸಿ, ವಿಮರ್ಶಿಸಿ ವೈಜ್ಞಾನಿಕ ಪರಿಶೀಲನೆಗೆ ಒಳಪಡಿಸದೆ ಯಾವುದೋ ಅಂಧಶ್ರದ್ಧೆಗೆ ಕಟ್ಟುಬಿದ್ದು ನಂಬಿಕೆಗಳಿಗೆ ಬದ್ಧರಾಗಿ ವರ್ತಿಸುವವರ ಹಿನ್ನೆಲೆಯಲ್ಲಿ ಈ ಮಾತು ಬೆಳಕಿಗೆ ಬಂದಿರಬಹುದು. ಆದರೆ ಮೂಡನಂಬಿಕೆಗಳು ಎಂಬ ಮಾತು ನಂಬಿಕೆಗಳಿಗೆ ಅನ್ವಯವಾಗುವುದಿಲ್ಲ. ಇಂಗ್ಲೀಷಿನ BELIE ಮತ್ತು SUPERSTITION ಎಂಬ ಮಾತುಗಳನ್ನು ಗಮನಿಸಿದಾಗ ಮೂಢನಂಬಿಕೆಗಳಿಗೂ ನಂಬಿಕೆಗಳಿಗೂ ವ್ಯತ್ಯಾಸವಿರುವುದು ಕಂಡುಬರುತ್ತದೆ ಆದ್ದರಿಂದ ಇಂಗ್ಲೀಷಿನ BELIEಈ ಎಂಬುದಕ್ಕೆ ಜನಪದ ನಂಬಿಕೆಗಳು SUPERSTITION ಎಂಬುದಕ್ಕೆ ಮೂಡನಂಬಿಕೆಗಳು ಎನ್ನುವ ಪದಗಳ ಬಳಕೆಯಿಂದಾಗಿ ಯಾವ ವಿಧವಾದ ಸಂದಿಗ್ದತೆಯೂ ತಲೆದೋರದೆ ಇಂಗ್ಲೀಷಿನ ಆ ಎರಡು ಪದಗಳಿಗೂ ಇರುವ ಅಂತರದ ಅರಿವು ಕನ್ನಡದ ಸಂವಾದಿ ಪದಗಳಲ್ಲಿ ವ್ಯಕ್ತವಾಗುವುದನ್ನು ಮನಗಾಣಬಹುದು. ಮೂಢ ನಂಬಿಕೆಗಳು ವೈಚಾರಿಕತೆಗೆ ಹಾಗೂ ಅನುಭವಗಳಿಗೆ ವಿರುದ್ಧವಾದವು. ಇವುಗಳಿಗೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದೆ ದೊರಕಬಹುದಾದ ಆಧಾರಗಳಿಗೆ ವಿರುದ್ಧವಾಗಿರುತ್ತವೆ.

ಕೆಲವೊಮ್ಮೆ ಇಂತಹ ಮೂಢನಂಬಿಕೆಗಳು ತಮಾಷೆಗೂ ಎಡೆಮಾಡಿಕೊಡುತ್ತವೆ. ಪಿತೃಕಾರ್ಯ ಸಂದರ್ಭದಲ್ಲಿ ಅಡ್ಡಾದ ಬೆಕ್ಕನ್ನು ಕಟ್ಟಿ ಹಾಕಿದ್ದನ್ನು ನೋಡಿದ ಮಕ್ಕಳು ಮುಂದೆ ತಾವು ಕೂಡಾ ತಮ್ಮಲ್ಲಿ ಬೆಕ್ಕು ಇರದಿದ್ದರೂ ಬೇರೆ ಕಡೆಯಿಂದ ಬೆಕ್ಕನ್ನು ತಂದು ಕಟ್ಟಿಹಾಕಿ ಪಿತೃಕಾರ್ಯ ನೆರವೇರಿಸಿದರಂತೆ. ಇದೇ ಪದ್ಧತಿ ಸಮಾಜದಲ್ಲಿ ಪ್ರಭಾವಬೀರಿತು. ಸಾಮಾನ್ಯವಾಗಿ ಹೊರ ಹೊರಟಿರುವ ಯಾರಿಗೂ ಬೆಕ್ಕು ಅಡ್ಡ ಬರಬಾರದೆಂಬ ನಂಬಿಕೆಯಾಗಿ ರೂಢಿಯಾಯಿತು. ಇಂತಹ ಮೂಢನಂಬಿಕೆಗಳಲ್ಲಿನ ಮೂಢ ವಿಚಾರಗಳು ವೈಜ್ಞಾನಿಕ, ವೈಚಾರಿಕವಾಗಿ ಪ್ರಜ್ಞೆಯುಳ್ಳವರಿಗೆ ಕಾಣಿಸುತ್ತವೆ. ಆದರೆ ವೈಜ್ಞಾನಿಕ ಪ್ರಜ್ಞೆಯಿರದೆ, ವಿಚಾರ ಶಕ್ತಿಯಿರದೆ ಇರುವವರು ಅಂತಹವುಗಳನ್ನು ಶ್ರದ್ಧೆಯಿಂದ ಪಾಲಿಸುತ್ತಿರುತ್ತಾರೆ. ಅದನ್ನು ಬಿಡು ಎಂದು ಯಾರಾದರೂ ಹೇಳಿದರೂ ಅದನ್ನು

ಬಿಡುವ ಧೈರ್ಯ ಮಾಡುವುದಿಲ್ಲ. ಅದೇ ಮೂಢನಂಬಿಕೆ.

ಜನಪದ ನಂಬಿಕೆಗಳಲ್ಲಿ ಬಹುಪಾಲು ವೈಜ್ಞಾನಿಕ ಸತ್ಯ ಕಂಡುಬರುತ್ತವೆ. ಆದ್ದರಿಂದ ನಂಬಿಕೆಗಳನ್ನು ವೈಜ್ಞಾನಿಕ ಮತ್ತು ಅವೈಜ್ಞಾನಿಕ ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಲಾಗಿದೆ. ಜನಪದದಲ್ಲಿ ವಿಜ್ಞಾನವೂ ಇದೆ. ನಂಬಿಕೆಯೂ ಇದೆ. ಹಾಗೆಯೇ ಧರ್ಮವೂ ಇದೆ. ಆಸಕ್ತಿ, ಬೇಕಾದುದನ್ನು ಜ್ಞಾನದಿಂದ ರೂಢಿಸಿಕೊಳ್ಳುತ್ತಾನೆ. ಊಹಾತ್ಮಕ ನಂಬಿಕೆಯ ಒಂದು ತತ್ವವಿರದೆ ಯಾವ ಸಂಶೋಧಕರನ್ನು ಯಾವ ವಿಜ್ಞಾನಿಯೂ ತನ್ನ ಕಾರ್ಯದಲ್ಲಿ ಮುನ್ನಡೆಯಲಾರ. ಹೀಗಿರಬಹುದು, ಹೀಗಾಗಬಹುದೆಂಬ ನಂಬಿಕೆಯೇ ಅಲ್ಲಿಯ ಮೂಲ. ಆದ್ದರಿಂದ ನಂಬಿಕೆಯ ಜಾಗ ಸಾರ್ವತ್ರಿಕ, ಸಾರ್ವಕಾಲಿಕ ತನ್ನ ರೂಪವನ್ನು ತನ್ನ ಇರುವಿಕೆಯನ್ನು ಬೇರೆ ಬೇರೆ ರೀತಿಯಲ್ಲಿ ಅದು ಪ್ರಕಟಪಡಿಸುತ್ತದೆ.

ಜನಪದ ನಂಬಿಕೆಗಳು ಬಹಳ ಪ್ರಾಚೀನವಾದವು. ಅವುಗಳ ಪ್ರಾಚೀನತೆಯನ್ನು ಕುರಿತು ಹೇಳುವುದಾದರೆ ಭೂಮಿಯ ಮೇಲೆ ಎಂದು ಮಾನವನ ಉಗಮವಾಯಿತೋ ಅಂದೆ ಮಾನವನ ಮನೋಮಂದಿರದಲ್ಲಿ ಅವು ಮೂಡಿದವೆನ್ನಬಹುದು. ಮಾನವನ ಭಾವನೆಗಳ ಅಭಿವ್ಯಕ್ತಿಯ ಮಾಧ್ಯಮವಾದ ಭಾಷೆ ಹುಟ್ಟಿದಾಗ ಜನಪದ ನಂಬಿಕೆಗಳು ಅಭಿವ್ಯಕ್ತಿ ಪಡೆದು ಜನ ಜೀವನದಲ್ಲಿ ಚಲಾವಣೆ ಹೊಂದಿದವು. ಜನಪದ ನಂಬಿಕೆಗಳ ಉಗಮಕ್ಕೆ ಕಾರಣ ಮಾನವನ ಮಾನಸಿಕ ಆಂದೋಲನ, ಮಾನಸಿಕ ಆಂದೋಲನಕ್ಕೆ ಮಾನವ ಒಳಗಾಗಲು ನೈಸರ್ಗಿಕ ಶಕ್ತಿ ಪ್ರಭಾವ ಬೀರಿದೆ.

ಇಂದಿನ ಕಾನೂನುಗಳಿಗಿಂತಲೂ ಹಿಂದಿನ ನಂಬಿಕೆಗಳು ಮೀರಿ ನಿಂತಿವೆ. ನಂಬಿಕೆಗಳು ಕಾಲಮಾನ ಮತ್ತು ಪ್ರಾದೇಶಿಕ ಸಾಮಾಜಿಕ ಪರಿವರ್ತನೆ ಸನ್ನಿವೇಶಕ್ಕೆ ತಕ್ಕಂತೆ ಬದಲಾಗುತ್ತವೆ. ಒಂದರ ಹುಟ್ಟಿನಲ್ಲಿ ಮತ್ತೊಂದು ಉದಯಿಸುತ್ತಾ ಬದಲಾವಣೆಗೊಂಡು ಶಾಸನಗಳಾಗಿ ರಚನೆಗೊಂಡರೂ ಮತ್ತೆ ನಾವು ನಂಬಿಕೆಗಳಾಗಿ ನಮ್ಮ ದೈನಂದಿನ ಜೀವನದಲ್ಲಿ ಸಾಗಿಸಿಕೊಂಡು ಬರುತ್ತಿದ್ದೇವೆ. ನಂಬಿಕೆಗಳನ್ನು ಶಾಸನ ಅಥವಾ ಕಾನೂನುಗಳಂತೆ ಬರೆದು ಎಚ್ಚರಿಕೆಯ ಫಲಕಗಳನ್ನು ಮನೆಗಳಲ್ಲಾಗಲಿ, ದೇವಸ್ಥಾನಗಳಲ್ಲಾಗಲಿ ಅಥವಾ ಯಾವುದೇ ಸಾರ್ವಜನಿಕ ಸ್ಥಳಗಳಲ್ಲಾಗಲಿ ಹಾಕಿಲ್ಲ. ಸಾರ್ವಜನಿಕ ಸ್ಥಳದಲ್ಲಿ ಸರ್ಕಾರದ ಮೂಲಕ ಹಾಕಿರುವ ಸ್ವಚ್ಛತೆ ಕಾಪಾಡಿ ಬಸ್ಸಿನಲ್ಲಿ ಟಿಕೇಟ್ ಪಡೆದುಕೊಳ್ಳದಿದ್ದರೆ ೫೦೦ ರೂ.ಗಳನ್ನು ದಂಡ ಮತ್ತು ವರದಕ್ಷಿಣೆ ತೆಗೆದುಕೊಂಡರೆ ಕಾನೂನಿನ ಪ್ರಕಾರ ಅಪರಾಧ ಎಂದು ಹೇಳುವ ವರದಕ್ಷಿಣೆ ನಿಷೇಧ ಕಾಯ್ದೆಗಳು ಜಾರಿಗೆ ತರಲಾಗಿದೆ. ಆದರೂ ಅವುಗಳನ್ನು ಉಲ್ಲಂಘಿಸುತ್ತಾರೆ. ಆದರೆ ಪರಂಪರಾನುಗತವಾಗಿ ಮೌಖಿಕವಾಗಿ ಆಚರಣೆಯಲ್ಲಿ ಬಂದ ನಂಬಿಕೆಗಳನ್ನು ಉಲ್ಲಂಘಿಸದೆ ಅವುಗಳನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬರುತ್ತಾರೆ.

ಮನುಷ್ಯನ ಆಪ್ತ ಮನಸ್ಸನ್ನು ಗಟ್ಟಿಗೊಳಿಸುತ್ತೇವೆ ನಂಬಿಕೆಗಳನ್ನು ಬಿಡಲಾಗುವುದಿಲ್ಲ. ಸರ್ಕಾರದ ಮೂಲಕ ಹೊರಡಿಸಿದ ಕಾನೂನುಗಳನ್ನು ಮೀರಿದರೆ ಶಿಕ್ಷೆಯನ್ನು ಕೊಡುವ ಕ್ರಮ ಕೈಗೊಳ್ಳಲಾಗುತ್ತದೆ. ಆದರೆ ನಂಬಿಕೆಗಳನ್ನು ಪಾಲಿಸದಿದ್ದಾಗ ಯಾವುದೇ ವ್ಯಕ್ತಿಗೆ ಶಿಕ್ಷೆ ಕೊಡುವುದಿಲ್ಲ. ಆದರೆ ವ್ಯಕ್ತಿಗೆ ತನ್ನ ಆತ್ಮ ಸಾಕ್ಷಿಯೇ ಆ ನಂಬಿಕೆಗಳಿಗೆ ವಿಧೇಯವಾಗಿರುವಂತೆ ಮಾಡುತ್ತದೆ.

**೧. ಗರ್ಭಿಣಿಯರು ಹೆಣ ಹೂಳುವ ಸ್ಥಳಕ್ಕೆ ಹೋಗಬಾರದು** : ಹೆಣ ಹೂಳುವ ಸ್ಥಳದಲ್ಲಿ ದುಃಖಿತರಾದ ಬಂಧು-ಬಾಂಧವರೆಲ್ಲರೂ ಅತೀ ದುಃಖಿತರಾಗಿ ಅಳುತ್ತಿರುತ್ತಾರೆ. ಇಂತಹ ಘಟನೆಯಿಂದ ಗರ್ಭಿಣಿ ಮಾನಸಿಕ ಅಘಾತಕ್ಕೆ ಒಳಗಾಗಬಾರದೆಂಬ ನಂಬಿಕೆಯಿಂದ ಹೀಗೆ ಹೇಳಿರಬೇಕು. ಮತ್ತು ಬಹಳ ಹೊತ್ತು ಒಂದೇ ಸ್ಥಳದಲ್ಲಿ ಕೂರಬೇಕಾಗುತ್ತದೆ. ಇದು ಗರ್ಭಿಣಿಯಿಂದಾಗುವುದಿಲ್ಲ. ಅವಳು ದೈಹಿಕ ಮತ್ತು ಮಾನಸಿಕ ತೊಂದರೆಗೆ ಒಳಗಾಗುವುದನ್ನು ತಪ್ಪಿಸುವ ಉದ್ದೇಶ ಈ ನಂಬಿಕೆಯಲ್ಲಿದೆ.

**೨. ಗರ್ಭಿಣಿಯು ಕವಚುಗಾಲು ಹಾಕಿಕೊಂಡು ಕುಳಿತುಕೊಳ್ಳಬಾರದು** : ಗರ್ಭಿಣಿಯು ಕವಚುಗಾಲು ಹಾಕಿಕೊಂಡು ಕುಳಿತುಕೊಳ್ಳುವುದು ಆರಾಮವಾಗಿರುವುದಿಲ್ಲ. ಇದರ ಜೊತೆಗೆ ವೈದ್ಯಕೀಯವಾಗಿ ಕೂಡ ಅನಾನುಕೂಲ ಕಾಣಬಹುದು ಎಂದು ಡಾ. ರಾಮಲಿಂಗಯ್ಯ ಉಪ್ಪಿನ ಕೇರಿಯವರು ತಮ್ಮ ಲೇಖನದಲ್ಲಿ ಹೀಗೆ ಹೇಳುವರು ಗರ್ಭಿಣಿಯಲ್ಲಿ ಪಿಂಡ ದೊಡ್ಡದಾಗುತ್ತಿದ್ದಂತೆ ಗರ್ಭಚೀಲ ಹೊಟ್ಟೆಯ ಬಹುಭಾಗವನ್ನು ಅಕ್ರಮಿಸ ತೊಡಗುತ್ತದೆ. ಆಗ ಕಾಲಿನ ಮೇಲಿನ ರಕ್ತವನ್ನು ಹೊಟ್ಟೆಗೆ ತರುವ ಈ ಲಿಯಾಕ ಅಭಿಧಮನಿಗಳ ಮೇಲೆ ಪಿಂಡದ ಒತ್ತಡ ಬಿದ್ದು ರಕ್ತ ಚಲನೆಗೆ ತಡೆ ಉಂಟಾಗಿ ಬಸುರಿಯರಲ್ಲಿ ನೀಲು ಹುಂಬುಗಳಾಗುವುದು, ಜಮ್ಮುಗಡುವಿಕೆ ತೀವ್ರವಾಗಬಹುದು. (ರಾಮಲಿಂಗಯ್ಯ ಉಪ್ಪಿನಕೆರೆ, ೧೯೯೯, ಪುಟ-೧೧೨).

**೩. ಎಳೆಯ ಮಕ್ಕಳನ್ನು ಗರ್ಭಿಣಿಯರು ಎತ್ತಿಕೊಳ್ಳಬಾರದು** : ಎಳೆಯ ಮಕ್ಕಳು ಏನು ತಿಳಿಯದ ತಮ್ಮ ಕೈಕಾಲು ಬಡಿಯುತ್ತಲೆ ತಮ್ಮದೇ ಆಟದಲ್ಲಿ ಮಗ್ನವಾಗಿರುತ್ತವೆ. ಇಂತಹ ಸಂದರ್ಭದಲ್ಲಿ ಗರ್ಭಿಣಿ ಮಹಿಳೆಯರು ಮಕ್ಕಳನ್ನು ಎತ್ತುಕೊಂಡಾಗ ಹೊಟ್ಟೆಗೆ ಏಟು ಬಿದ್ದು ಗರ್ಭಪಾತವಾಗುವ ಸಂಭವ ಹೆಚ್ಚಾಗಿರುತ್ತದೆ. ಇಂತಹವುಗಳಿಂದ ಎಚ್ಚರವಾಗಿರುವಂತೆ ಗರ್ಭಿಣಿ ನಡುಮನೆಯಲ್ಲಿ ಕುಳಿತಕೊಳ್ಳುವುದು, ಮಲಗುವುದು ಮಾಡಬಾರದು. ಇವರನ್ನು ಆ ಸಮಯದಲ್ಲಿ ದಾಟಬಾರದು ಎನ್ನುವ ನಂಬಿಕೆಗಳೂ ಇವೆ.

**೪. ಗರ್ಭಿಣಿ ಮಹಿಳೆ ತಂಗಳನ್ನ ತಿನ್ನಬಾರದು** : ತಂಗಳನ್ನ ಊಟ ಮಾಡುವುದರಿಂದ ಗರ್ಭಿಣಿಯರಿಗಷ್ಟೆ ಏಕೆ ಎಲ್ಲರಿಗೂ ಒಳ್ಳೆಯದಲ್ಲ. ಇನ್ನೊಂದು ಬೆಳವಣಿಗೆಯಾಗುವ ಜೀವಿಯನ್ನು ಹೊತ್ತಿರುವ ಅದಕ್ಕೆ ತನ್ಮೂಲಕ ಆಹಾರ ರವಾನಿಸುತ್ತಿರುವ ಗರ್ಭಿಣಿಗೆ ಖಂಡಿತವಾಗಿ ತಂಗಳನ್ನ ಊಟ ಮಾಡುವುದು ಸರಿಯಲ್ಲ. ಇದರಿಂದಾಗಿ ಆಕೆಯ ಆರೋಗ್ಯ ಹದಗೆಡಬಹುದು. ಆಲಸ್ಯ

ಹೆಚ್ಚಾಗುತ್ತದೆ. ಸರಿಯಾಗಿ ಮುಚ್ಚದೆ ಇರುವ ಸಂದರ್ಭದಲ್ಲಿ ನೊಣ ಇತರೆ ಕ್ರಿಮಿಗಳು ಆಹಾರದಲ್ಲಿ ಸೇರಬಹುದು. ಅಡುಗೆ ತಯಾರಿಸಿದ ಧೀರ್ಘಕಾಲದಲ್ಲಿ ಆಹಾರದಲ್ಲಿ ರುಚಿಯನ್ನು ಕೆಡಿಸುವ ಕೀಟಗಳು ಉತ್ಪತ್ತಿಯಾಗುತ್ತವೆ. ಈ ಕಾರಣಗಳಿಂದಾಗಿ ತಂಗಳನ್ನು ಊಟ ಮಾಡಬಾರದೆಂಬ ನಂಬಿಕೆಯಿದೆ.

**೫. ತಾಯಿ ಹೊರಗಿನಿಂದ ಬಂದ ತಕ್ಷಣ ಮಗುವಿಗೆ ಹಾಲನ್ನು ಕುಡಿಸಬಾರದು :**ಹೊರಗಿನಿಂದ ಬಂದ ತಾಯಿ ಎದೆ ತೊಳೆದು ಗೋಡೆಯ ಮೇಲೆ ಹಿಂಡಿ ಸ್ವಲ್ಪ ಹೊತ್ತು ಕುಳಿತು ನೀರು ಕುಡಿದು ನಂತರ ಮಗುವಿಗೆ ಹಾಲು ಕುಡಿಸುವಳು. ಸ್ವಚ್ಛತೆ ಕ್ರಮ ಮಗುವಿನ ಆರೋಗ್ಯ ಕಾಪಾಡುವ ಕ್ರಮ ಈ ನಂಬಿಕೆಯಲ್ಲಿದೆ. ಹೊರಗಿನಿಂದ ಬಂದ ತಾಯಿ ಸ್ತನದಲ್ಲಿ ಕ್ರಿಮಿಗಳು ನೆಲೆಸಿರಬಹುದು. ಬಿಸಿಲಿನಿಂದ ಎಧೆ ಹಾಲು ಬಿಸಿಯೆನಿಸುತ್ತವೆ. ಆದ್ದರಿಂದ ನೀರಿನಿಂದ ತೊಳೆದಾಗ ಕ್ರಿಮಿಗಳು ನಾಶ ಆಗುತ್ತವೆ. ಮತ್ತು ಎದೆಯ ಹಾಲು ತಂಪುಗೊಳ್ಳುವುದು ಇದರಿಂದ ಮಗುವಿಗೂ ಒಳ್ಳೆಯದು.

**೬. ಬಾಣಂತಿ ತಲೆ ಬಾಚಬಾರದು :** ಬಾಣಂತಿ ತಲೆ ಬಾಚಬಾರದೆನ್ನುವ ನಂಬಿಕೆಯಲ್ಲಿ ಅರ್ಥವಿದೆ. ಏಕೆಂದರೆ ಹೆರಿಗೆ ಸಮಯದಲ್ಲಿ ತಲೆಯ ಭಾಗದಿಂದ ಪಾದದವರೆಗೆ ನರನಾಡಿಗಳೆಲ್ಲಾ ಸಡಿಲಗೊಂಡಿರುತ್ತವೆ. ಇದರಿಂದಾಗಿ ತಲೆ ಬಾಚುವುದರಿಂದ ನೋವು ಹೆಚ್ಚಾಗಿ ಕಾಣಿಸಿಕೊಳ್ಳುವುದು. ಬಾಣಂತನ ಅವಧಿಯವರೆಗೆ ತಲೆಯ ರಕ್ಷಣೆಗಾಗಿ ಬಟ್ಟೆಯನ್ನು ಕಟ್ಟಿಕೊಂಡಿರುವುದು. ಬಾಣಂತನ ಮುಗಿದ ನಂತರ ಮತ್ತೆ ಮೊದಲಿನಂತೆ ದಿನಾಲೂ ಬಾಚುವುದು. ಆದರೆ ಈಗಿನ ಮಹಿಳೆಯರು ಹೆರಿಗೆಯಾಗಿ ೫ ದಿನಗಳ ನಂತರ ನಿತ್ಯವೂ ತಲೆ ಬಾಚಿಕೊಳ್ಳುತ್ತಾರೆ.

**೭. ಎಳೆಯ ಮಕ್ಕಳಿಗೆ ಬಾಚಣಿಗೆಯಿಂದ ಬಾಚಬಾರದು :** ಎಳೆಯ ಮಕ್ಕಳ ತಲೆಯ ಚರ್ಮ ಮೃದುವಾಗಿರುತ್ತೆ ಮತ್ತು ಕೂದಲು ಕಡಿಮೆಯಾಗುವುದರಿಂದ ತಲೆಗೆ ಬಾಚಣಿಗೆಯಿಂದ ಬಾಚುವುದರಿಂದ ಮಕ್ಕಳ ನೆತ್ತಿ ಇನ್ನು ಕೂಡಿರುವುದಿಲ್ಲ. ಆದ್ದರಿಂದ ಚುಚ್ಚಿ ನೋವುಂಟು ಮಾಡುತ್ತದೆ. ಇಂತಹ ಉದ್ದೇಶದಿಂದ ಈ ನಂಬಿಕೆಯಿದೆ.

**೮. ಮಗುವಿಗೆ ಸ್ನಾನದ ನಂತರ ಹಾಲುಣಿಸಬಾರದು :** ಎಳೆಯ ಮಗುವಿಗೆ ಎಣ್ಣೆ ಹಚ್ಚಿ ಬಿಸಿ ನೀರಿನಿಂದ ಸ್ನಾನ ಮಾಡಿಸಿದ ತಕ್ಷಣ ಮೈಯೆಲ್ಲಾ ಬಟ್ಟೆಯಿಂದ ವರಿಸಿ ಬೆಚ್ಚಗೆ ಮಲಗಿಸಿದರೆ ಚಳಿಯಾಗುವುದಿಲ್ಲ. ಹೊರತಾಗಿ ಸ್ನಾನ ಬಳಿಕ ಮಗುವಿಗೆ ಗಾಳಿ ತಗಲುವಂತೆ ಹಾಲುಣಿಸುತ್ತಾ ಕುಳಿತರೆ ಗಾಳಿ ತಾಗಿ ಮಗುವಿಗೆ ಶೀತವಾಗುವ ಸಂಭವ ಹೆಚ್ಚು. ಆದ್ದರಿಂದ ಇದನ್ನು ತಪ್ಪಿಸಲು ಸ್ನಾನದ ನಂತರ ಹಾಲುಣಿಸಬಾರದೆಂಬ ನಂಬಿಕೆಯಿಂದೆ.

**೯. ದೀಪವನ್ನು ಬಾಯಿಂದ ಉಫ್ ಎಂದು ಊದಿ ಆರಿಸಬಾರದು :** ಕೈಯಿಂದ ಆರಿಸಬೇಕು.

**೧೦. ಯಾವುದಾದರೂ ಕೆಲಸಕ್ಕೆ ಹೊರಟಾಗ ಬೆಕ್ಕು ಅಡ್ಡ ಬರಬಾರದು :** ಹೋದ ಕೆಲಸ

ಆಗುವುದಿಲ್ಲ. ಅಪಶುಕನ ಎನ್ನುತ್ತಾರೆ.

೧೧. **ಅಳುವವರ ಎಡಗಡೆ ಕುಳಿತುಕೊಳ್ಳಬಾರದು** : ಸೂಜಿಯಿಂದ ಬಟ್ಟೆ ಹೊಲೆಯುವವರ ಬಲಗಡೆ ಕುಳಿತುಕೊಳ್ಳಬಾರದು.

೧೨. ತುಂಬಿದ ಗಡಿಗೆ ಎದುರಾದರೆ ಶುಭ.

೧೩. ನಾವು ಯಾರಾದರೂ ಒಬ್ಬ ವ್ಯಕ್ತಿಯನ್ನು ಕುರಿತು ಮಾತನಾಡುವಾಗ ಅದೇ ವ್ಯಕ್ತಿ ಅಲ್ಲಿಗೆ ಬಂದರೆ ಅವನಿಗೆ ನೂರು ವರ್ಷ ಆಯಸ್ಸು ಎಂದು ಹೇಳುತ್ತಾರೆ.

೧೪. ಯಾವುದೇ ಕೃಷಿ ಚಟುವಟಿಕೆ ಆರಂಭವಾಗುವ ಮೊದಲು ಪೂಜೆ ಮಾಡಬೇಕು.

೧೫. ಮನೆಯೊಳಗೆ ಕಾಗೆ ಬರಬಾರದು.

೧೬. ದೇವರು ಬಲಭಾಗದಿಂದ ಹೂವು ಕೊಟ್ಟರೆ ಕೆಲಸ ಆಗುತ್ತದೆ. ಎಡಭಾಗದಿಂದ ಕೊಟ್ಟರೆ ಕೆಲಸ ಆಗುವುದಿಲ್ಲ ಎಂಬ ನಂಬಿಕೆ.

೧೭. ಮನೆಯಲ್ಲಿ ಯಾರಾದರೂ ಸತ್ತರೆ ವರ್ಷ ತುಂಬುವುದರೊಳಗೆ ಮದುವೆ ಮಾಡಬೇಕು. ಇಲ್ಲವಾದರೆ ಮೂರು ವರ್ಷ ಬಿಟ್ಟು ಮಾಡಬೇಕು.

೧೮. ಹೆಣ್ಣಿಗೆ ಎಡಗಣ್ಣು, ಗಂಡಿಗೆ ಬಲಗಣ್ಣು ಹಾರಿದರೆ ಒಳ್ಳೆಯದು.

೧೯. ರಾತ್ರಿ ಹೊತ್ತಲ್ಲಿ ಕಸವನ್ನು ಹೊರಗೆ ಹಾಕಬಾರದು. ಲಕ್ಷ್ಮಿ ಹೊರಗೆ ಹೋಗುತ್ತಾಳೆ.

೨೦. ಬೆಳಗ್ಗೆ ಏಳುವಾಗ ಬಲ ಮಗ್ಗುಲಲ್ಲಿ ಏಳಬೇಕು.

೨೧. ತುಂಬಿದ ಬಿಂದಿಗೆ(ಕೊಡಪಣ) ಎದುರು ಬಂದರೆ ಶುಭ.

೨೨. ನಾಲಿಗೆಯ ಮೇಲೆ ಮಚ್ಚೆ ಇದ್ದರೆ ಅವರು ಆಡಿದ ಮಾತು ನಿಜವಾಗುತ್ತದೆ.

೨೩. ಹಲ್ಲಿ ಮೈಮೇಲೆ ಬಿದ್ದರೆ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋಗಿ ಎಣ್ಣೆ ಹಾಕಿ ಬರಬೇಕು.

೨೪. ರಾತ್ರಿ ಹೊತ್ತಿನಲ್ಲಿ ಹೆಣ್ಣುಮಕ್ಕಳು ಸುಣ್ಣದ ಸೋರೆಗೆ ಕೈ ಇಟ್ಟು ಸುಣ್ಣ ತೆಗೆದುಕೊಳ್ಳಬಾರದು.

೨೫. ಗಂಡು ಮಕ್ಕಳಿಗೆ ಪೊರಕೆಯಿಂದ ಹೊಡೆಯಬಾರದು.

೨೬. ಊಟ ಮಾಡುವಾಗ ಕೈ ತುತ್ತು ಜಾರಿ ಕೆಳಗೆ ಬೀಳಬಾರದು.

೨೭. ಆರು ಬೆರಳು ಇರುವವರು ಅದೃಷ್ಟವಂತರು.

೨೮. ಗಂಡಿಗೆ ತಲೆಯಲ್ಲಿ ಎರಡು ಸುಳಿ ಇದ್ದರೆ ಅವನಿಗೆ ಎರಡು ಮದುವೆ ಯೋಗ ಇದೆ ಎನ್ನುವ ನಂಬಿಕೆ.

೨೯. ಸಂಜೆ ದೀಪ ಹಚ್ಚುವಾಗ ಮಲಗಬಾರದು. ಕಸ ಬಳಿಯುವುದು, ತಲೆ ಬಾಚುವುದು

ಮಾಡಬಾರದು.

೩೦. ಎಲ್ಲಿಗಾದರೂ ಹೋಗುವಾಗ ಮುಂಗುಸಿ, ಆಕಳು ಎದುರು ಬಂದರೆ ಶುಭ ಶಕುನ.

೩೧. ಶವಸಂಸ್ಕಾರ ಮಾಡಿ ಬರುವವರ ಎದುರಿಗೆ ಹೋಗಬಾರದು.

೩೨. ಶವ ಹೊತ್ತು ಬರುವವರ ಎದುರು ಬಂದರೆ ಒಳ್ಳೆಯದು.

೩೩. ಹೊಸ ಮನೆಗೆ ಹೋಗುವಾಗ ಹಾಲು ಉಕ್ಕಿಸಿ ಪೂಜೆ ಮಾಡಿಸಿ ಹೋಗಬೇಕು.

೩೪. ಮೊದಲ ಬಾರಿಗೆ ಮಗುವನ್ನು ನೋಡುವಾಗ ಅದರ ಕೈಗೆ ಹಣವನ್ನು ಇಟ್ಟು ನೋಡಬೇಕು.

೩೫. ಮಗು ಹುಟ್ಟುವಾಗ ಕರುಳು ಸುತ್ತಿಕೊಂಡು ಬಂದರೆ ಸೋದರ ಮಾವನಿಗೆ ದೋಷ ಅಥವಾ ಗಂಡಾಂತರ.

೩೬. ಒಂಟಿ ಕಾಲಿನಲ್ಲಿ ನಿಲ್ಲಬಾರದು.

೩೭. ಗರ್ಭಿಣಿ ಹೆಣ್ಣು ಮಕ್ಕಳು ಬಾಳೆ ಎಲೆಯಲ್ಲಿ ಊಟ ಮಾಡಬಾರದು.

೩೮. ನಾಯಿ ಆಕಾಶಕ್ಕೆ ಮುಖ ಮಾಡಿ ಕೂಗಿದರೆ ಮಳೆ ಕರೆಯುತ್ತಿದೆ ಎನ್ನುವ ನಂಬಿಕೆ.

೩೯. ಹೊರಗೆ ಹೋಗುವಾಗ ಎಲ್ಲಿಗೆ ಎಂದು ಕೇಳಬಾರದು.

೪೦. ಬಾಣಂತಿ ಬರಿಗಾಲಿನಲ್ಲಿ ಓಡಾಡಬಾರದು.

೪೧. ಶುಭ ಕಾರ್ಯಕ್ಕೆ ಮೂವರು ಹೋಗಬಾರದು. ಹೋಗುವುದು ಅನಿವಾರ್ಯವಾದರೆ ಜೊತೆಯಲ್ಲಿ ಒಂದು ಚಿಕ್ಕಮಗುವನ್ನಾಗಲೀ ಕರೆದುಕೊಂಡು ಹೋಗಬೇಕು.

೪೨. ಉಪ್ಪನ್ನು ಕದಿಯಬಾರದು. ಉಪ್ಪು ಚೆಲ್ಲಿದರೆ ಮನೆಯಲ್ಲಿ ಸಾಲವಾಗುತ್ತದೆ ಎನ್ನುವ ನಂಬಿಕೆ. ಉಪ್ಪನ್ನು ಮೇಲಿಟ್ಟರೆ ಸಾಲ ಹೆಚ್ಚಾಗುತ್ತದೆ ಎಂದು ನಂಬಿಕೆ.

೪೩. ಮನೆಯಲ್ಲಿ ಜೇಡರ ಬಲೆ ಕಟ್ಟಬಾರದು.

೪೪. ಬಿಕ್ಕಳಿಗೆ ಬಂದರೆ ಯಾರೋ ನೆನಪಿಸಿಕೊಳ್ಳುತ್ತಿದ್ದಾರೆ ಎಂದರ್ಥ.

೪೫. ದೇವಸ್ಥಾನದ ದರ್ಶನದ ನಂತರ ಸ್ವಲ್ಪ ಹೊತ್ತು ಕುಳಿತು ಬರಬೇಕು.

೪೬. ಮದುವೆಯಾದ ವರ್ಷ ಆಷಾಢ ಮಾಸದಲ್ಲಿ ಅತ್ತೆ, ಸೊಸೆ ಒಂದೇ ಮನೆಯಲ್ಲಿ ಇರಬಾರದು.

೪೭. ಚಿಕ್ಕ ಮಕ್ಕಳು ಮಲಗಿರುವಾಗ ಅಲಂಕಾರ ಮಾಡಬಾರದು.

೪೮. ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು ಸಾಲ ಹೆಚ್ಚಾಗುತ್ತದೆ.

೪೯. ಚಿಕ್ಕುಗಳು ಮನೆಯ ಒಳಗಡೆ ಜಗಳ ಮಾಡಬಾರದು. ಮನೆಯಲ್ಲಿ ಜಗಳ ಆಗುತ್ತದೆ

ಎನ್ನುವ ನಂಬಿಕೆ.

೫೦. ಯಾರಾದರೂ ವ್ಯಕ್ತಿ ಮಲಗಿದಾಗ ಅವರ ಸುತ್ತಲು ಕುಳಿತುಕೊಳ್ಳಬಾರದು. ಶವದ ಮುಂದೆ ಕುಳಿತಂತೆ.

೫೧. ರಾತ್ರಿ ಮೊಸರು ಬೇಕಾದರೆ ಹಾಲು ತೆಗೆದುಕೊಂಡು ಹೋಗಬೇಕು.

೫೨. ಶುಕ್ರವಾರ ಹಣವನ್ನು ಬೇರೆಯವರಿಗೆ ಕೂಡಬಾರದು.

೫೩. ಗರ್ಭಿಣಿಯರು ಗ್ರಹಣ ಕಾಲದಲ್ಲಿ ತರಕಾರಿ, ಹಣ್ಣು ಕೊಯ್ಯಬಾರದು. ಹಾಗೆ ಮಾಡಿದರೆ ಅಂಗವಿಕಲ ಮಕ್ಕಳು ಹುಟ್ಟುತ್ತವೆ.

೫೪. ಹೆಣ್ಣು ಮಕ್ಕಳು ಅಕ್ಕಿ ಆರಿಸುವಾಗ ಅಕ್ಕಿ ತಿನ್ನಬಾರದು, ತಿಂದರೆ ಅವರ ಮದುವೆಯಲ್ಲಿ ಮಳೆ ಬರುತ್ತದೆ.

೫೫. ಸೇರು, ಕಾಳು ಮಾಡುವ ಮರವನ್ನು, ಒಳಕಲ್ಲನ್ನು ಕಾಲಿನಿಂದ ತುಳಿಯಬಾರದು. ಅದು ಲಕ್ಷ್ಮಿ ಇದ್ದ ಹಾಗೆ.

೫೬. ಹೋಗುತ್ತೇನೆ ಎನ್ನಬಾರದು, ಹೋಗಿ ಬರುತ್ತೇನೆ ಎನ್ನಬೇಕು.

೫೭. ಮಗಳನ್ನು ಮಂಗಳವಾರ, ಸೊಸೆಯನ್ನು ಶುಕ್ರವಾರ ತವರು ಮನೆಗೆ ಕಳಿಸಬಾರದು.

೫೮. ಬರೀ ತೊಟ್ಟಿಲನ್ನು ತೂಗಬಾರದು, ಮಕ್ಕಳಿಗೆ ಹೊಟ್ಟೆ ನೋವು ಬರುತ್ತದೆ.

೫೯. ಯಾರಾದರೂ ಮಲಗಿದಾಗ ದಾಟಬಾರದು. ಬಾಣಂತಿಯರ ಕಾಲನ್ನು ದಾಟಬಾರದು.

೬೦. ಸೋಮವಾರ ಎತ್ತುಗಳನ್ನು ವ್ಯವಸಾಯಕ್ಕೆ ಹೂಡಬಾರದು.

೬೧. ಹೊಸ್ತಿಲಿನ ಮೇಲೆ ಸೀನಬಾರದು.

೬೨. ಮನೆಯಲ್ಲಿ ಸದಾ ಜಗಳವಾಡಬಾರದು. ಕಾದ ಮನೆ ಕಾರೆಮುಳ್ಳ ಹೊಡೆದ ಹಾಗೆ ಎನ್ನುತ್ತಾರೆ.

೬೩. ವ್ಯಕ್ತಿ ಏನಾದರೂ ಮಾತನಾಡುವಾಗ ವಿದ್ಯುತ್‌ಶಕ್ತಿ ಅಥವಾ ಕರೆಂಟ್ ಬಂದರೆ ಅದು ಸತ್ಯ ಎಂದು ನಂಬುತ್ತಾರೆ ಮತ್ತು ದೇವಸ್ಥಾನದಲ್ಲಿ ಗಂಟೆ ಬಾರಿಸಿದರೆ ಸತ್ಯ ಎಂದು ನಂಬುತ್ತಾರೆ.

೬೪. ಯಾರಾದರೂ ಮಾತನಾಡುವಾಗ ಮಲಗಿರುವ ನಾಯಿ ಎದ್ದು ಹೋದರೆ ಸತ್ಯ ಎಂದು ನಂಬುತ್ತಾರೆ.

೬೫. ಹೆಣ್ಣುಮಕ್ಕಳಿಗೆ ಎಡಗಡೆ, ಗಂಡು ಮಕ್ಕಳಿಗೆ ಬಲಗಡೆ ಮಚ್ಚೆ ಇದ್ದು ಅದು ನೆಲಕ್ಕೆ ತಗಲದಿದ್ದರೆ ಅದೃಷ್ಟವಂತರು ಎಂದು.

೬೬. ಉತ್ತರ ದಿಕ್ಕಿಗೆ ತಲೆ ಇಟ್ಟು ಮಲಗಬಾರದು.

೬೭. ಬೆಳಗ್ಗೆ ಎದ್ದ ತಕ್ಷಣ ದೇವರ ಮುಖ ನೋಡಬೇಕು.

೬೮. ಪ್ರಯಾಣ ಮಾಡುವಾಗ ಬುತ್ತಿ ಸಿಕ್ಕರೆ ತುಂಬ ಒಳ್ಳೆಯದು.

೬೯. ಉಗುರು ಕಟ್ಟು ಮಾಡಿರುವುದನ್ನು ತುಳಿಯಬಾರದು, ಸಾಲವಾಗುತ್ತದೆ ಎನ್ನುವ ನಂಬಿಕೆ.

೭೦. ಮೈಮೇಲೆ ಬಟ್ಟೆ ಹೊಲಿಯಬಾರದು.

೭೧. ಬೇರೊಬ್ಬ ವ್ಯಕ್ತಿ ಜೊತೆ ಮಾತನಾಡುವಾಗ ಹಲ್ಲಿ ಲೋಚ ಗುಟ್ಟಿದರೆ ಆಡಿದ ಮಾತು ನಿಜ ಎಂದರ್ಥ.

ಹೆಣ್ಣಿನ ಬದುಕಿನ ಸುತ್ತ ಸುತ್ತಿಕೊಂಡಿರುವ ನಂಬಿಕೆಗಳು ಅವಳು ಬದುಕುವ ಹಕ್ಕನ್ನೆ ಕಸಿದುಕೊಂಡಿವೆ. ಸ್ತ್ರೀ ಬಲಿ, ಶಿಶುಬಲಿ, ಬೆತ್ತಲೆ ಸೇವೆ, ಕೆರೆಗೆ ಹಾರ ಇತ್ಯಾದಿ ಸಂಪ್ರದಾಯಗಳ ಹಿಂದಿರುವ ಅಮಾನವೀಯತೆ ಮಹಿಳೆಯ ಬದುಕನ್ನು ಅಸಹನೀಯವಾಗಿಸಿದೆ.

ಇದಕ್ಕೆ ವ್ಯತಿರಿಕ್ತವಾಗಿ ಜೀವನದ ಕಾಳಜಿ ಮತ್ತು ಮಾನವೀಯ ಸ್ಪಂದನೆಯುಳ್ಳ ಕೆಲವು ನಂಬಿಕೆಗಳು ಜನಪದರ ಸ್ತ್ರೀಪರ ಚಿಂತನೆಯ ನೆಲೆಗಳನ್ನು ಪ್ರಕಟಿಸುತ್ತವೆ. ಜನನ, ಋತುಮತಿ, ವಿವಾಹ, ಬಸಿರು, ಹೆರಿಗೆ ಇತ್ಯಾದಿ ಅವಸ್ಥೆಗಳಿಗೆ ಸಂಬಂಧಿಸಿದ ಅನೇಕ ನಂಬಿಕೆಗಳು ಹೆಣ್ಣಿನ ದೈಹಿಕ ಮಾನಸಿಕ ವಿಶ್ರಾಂತಿಗೆ ಒತ್ತು ನೀಡುತ್ತವೆ. ಬಸಿರು, ಬಯಕೆ ಸೀಮಂತಕ್ಕೆ ಸಂಬಂಧಿಸಿದ ನಂಬಿಕೆಗಳು ಗರ್ಭಿಣಿ ಹಾಗೂ ಗರ್ಭಸ್ಥ ಶಿಶುವಿನ ಆರೋಗ್ಯ ಆರೈಕೆಯ ಆಶಯ ಹೊತ್ತಿವೆ. ಗರ್ಭಿಣಿಯ ಆಸೆ ಪೂರೈಸದಿದ್ದರೆ ಶಿಶುವಿನ ಕಿವಿ ಸೋರುತ್ತದೆ. ಮೊದಲ ಹೆರಿಗೆ ತವರು ಮನೆಯಲ್ಲಿ ಎಂಬ ನಂಬಿಕೆಗಳು ಗರ್ಭಿಣಿಗೆ ಅಗತ್ಯವಾದ ಪ್ರೀತಿ, ಆರೈಕೆ ಒದಗಿಸುವ ಗುರಿಯನ್ನು ಹೊಂದಿವೆ. ಆದರೆ ಇದರೊಂದಿಗೆ ಅಚರಿಸುವ ಮೈಲಿಗೆ ಸೂತಕಗಳು ಮಹಿಳೆಯನ್ನು ದೂರವಿರಿಸಿ ಕಿರಿ ಕಿರಿ ಮುಜುಗರವನ್ನುಂಟು ಮಾಡುತ್ತವೆ. ಅವಳಲ್ಲಿ ಕೀಳರಿಮೆಯನ್ನು ರುಜುಮಾಡುತ್ತವೆ. ಪರವಾಲಂಬಿಯಾಗುವಂತೆ ಮಾಡುತ್ತವೆ.

ವಿಧವೆಯರನ್ನು ಅಮಂಗಲೆಯರೆಂದು ಬಿಂಬಿಸಿ ಅವರ ಉಡಿಗೆ, ತೊಡುಗೆಗಳ ಮೇಲೆ ನಿರ್ಬಂಧಗಳನ್ನು ವಿಧಿಸಲಾಗಿದೆ. ಶುಭ ಸಮಾರಂಭಗಳಲ್ಲಿ ಅವರ ಭಾಗವಹಿಸುವಿಕೆಯನ್ನು ನಿಷೇಧಿಸಲಾಗಿದೆ. ಪತಿ ಪರದೈವ ಎಂದು ಸಾರಿರುವ ಸಾಂಸ್ಕೃತಿಕ ಪರಿಸರದಲ್ಲಿ ಹೆಂಡತಿಗೆ ಪ್ರತ್ಯೇಕ ಸ್ವತಂತ್ರ ಅಸ್ತಿತ್ವದ ಕಲ್ಪನೆಯನ್ನು ನಿರಾಕರಿಸಲಾಗಿದೆ.

ವೈಧವ್ಯ ಬಂಜೆತನಗಳು ಮಹಿಳೆಯ ಬದುಕಿಗೆ ಶಾಪಗಳಾಗಿವೆ. ಗಂಡನನ್ನು ಕಳೆದುಕೊಂಡ ಹೆಣ್ಣು ಯಾವುದೇ ಶುಭ ಕಾರ್ಯಗಳಿಗೆ ಹೋಗಬಾರದು. ಒಂದು ವೇಳೆ ಅವಳು ಹೋದರು

ಸಹ ಅಲ್ಲಿ ಮಹಿಳೆಯರೇ ಅಶುಭದ ಸೂಚಕ ಕರೆದ ತಕ್ಷಣ ಬಂದು ಬಿಡುವುದೇ ಎಂದಲ್ಲ ಅವಳಿಗೆ ಬೈದುಕೊಳ್ಳುತ್ತಾರೆ. ನೇರವಾಗಿ ಅವಳಿಗೆ ಹೇಳಿಯೇ ಬಿಡುತ್ತಾರೆ. ಯಾವುದೇ ಕಾರ್ಯ ಮಾಡದೆ ಒಂದು ಹತ್ತಿರ ಸುಮ್ಮನೆ ಕುಳಿತುಕೋ ಎಂದು ಹೇಳುತ್ತಾರೆ. ಇನ್ನು ಬಂಜೆತನ ಮಹಿಳೆ ಬೇಕೆಂದು ತಾನು ಮಾಡಿಕೊಂಡಿದ್ದಲ್ಲದ ತಪ್ಪಿಗಾಗಿ ಜೀವನ ಪೂರ್ತಿ ಯಾವುದೇ ಕಾರ್ಯಕ್ರಮಗಳಿಗೆ ಹೋಗದೆ ಮಕ್ಕಳಿಲ್ಲ ಎನ್ನುವ ಕೊರಗಿನ ಜೊತೆಗೆ ಸಮಾಜದ ಟೀಕೆಗೂ ಗುರಿಯಾಗಬೇಕು. ತಾಯ್ತನ ಮುತ್ತೈದೆತನಗಳ ಹೇರಿಕೆ ಜನಪದ ನಂಬಿಕೆಗಳ ಫಲಿತಗಳಾಗಿವೆ. ಹುಟ್ಟು, ಸಾವುಗಳಂಥ ನೈಸರ್ಗಿಕ ಆಗು ಹೋಗುಗಳಿಗೂ ಹೆಣ್ಣನ್ನು ಹೊಣೆಗಾರಳನ್ನಾಗಿಸುವುದು, ಶಿಕ್ಷಿಸುವುದು ವ್ಯವಸ್ಥೆಯ ಅಮಾನವೀಯ ಏಕಪಕ್ಷೀಯ ನೀತಿಯನ್ನು ಪ್ರಕಟಿಸುತ್ತದೆ.

ಹೀಗೆ ಮಹಿಳೆಯ ಜೀವನದ ವಿವಾಹ, ಬಸುರಿ, ಬಾಣಂತಿ, ಮೈನೆರೆದಾಗ ಮಕ್ಕಳ ಕುರಿತು ಜನಪದರು ಕಂಡುಕೊಂಡ ನಂಬಿಕೆ ಮತ್ತು ಆಚರಣೆಗಳು ಆಯಾ ಋತುಮಾನ, ಸಮಯ ಸಂದರ್ಭ ಹಾಗೂ ಅವರ ಮಾನಸಿಕ ಮತ್ತು ಕೆಲಸಗಳ ಸೌಲಭ್ಯಕ್ಕನುಗುಣವಾಗಿ ರೂಢಿಸಿಕೊಂಡು ಬಂದಿರುವುದಾಗಿದೆ. ಅವರು ಅನುಸರಿಸಿಕೊಂಡು ಬಂದ ನಂಬಿಕೆಗಳು ವ್ಯಕ್ತಿಗತವಾಗಿ ರೂಢಿಯಲ್ಲಿ ಬಂದು ಸಮಾಜದಲ್ಲಿ ಚೌಕಟ್ಟನ್ನು ನಿರ್ಮಿಸಿಕೊಡುವುದು.

ಒಂದು ರೀತಿಯಲ್ಲಿ ಸಮಾಜದ ಚೌಕಟ್ಟನ್ನು ಮೀರದಂತೆ ಜೀವನ ವ್ಯವಸ್ಥೆಯನ್ನು ನಿರೂಪಿಸಲು ನಂಬಿಕೆಗಳು ಕಾರಣಗಳಾಗಿವೆ. ಇವುಗಳನ್ನು ಮೀರಿದರೆ ಸಮಾಜದಲ್ಲಿ ನಿಂದನೆಗೆ ಒಳಗಾಗುವ ಸಂದರ್ಭಗಳು ಜೀವನಕ್ಕೆ ಎಂತಹ ಸಮಯಗಳನ್ನು ತಂದೊಡ್ಡುತ್ತವೆ ಎನ್ನುವುದು ಈ ನಂಬಿಕೆಗಳಿಂದ ತಿಳಿಯಬಹುದು.

ವ್ಯಕ್ತಿಯ ವ್ಯಕ್ತಿತ್ವ ವಿಕಾಸದ ಸಾಧ್ಯತೆಗಳ್ನು ಮೊಟಕುಗೊಳಿಸಿ ಉದ್ಯೋಗ ಶೀಲತೆ, ಕಾರ್ಯಕ್ಷಮತೆ ಬೌದ್ಧಿಕ ಪ್ರಪಂಚದಿಂದ ವಂಚಿಸುವಲ್ಲಿ ಆಕೆಯ ವ್ಯಕ್ತಿತ್ವ, ಬುದ್ಧಿ, ಪ್ರತಿಭೆ, ದೇಹ ಇವುಗಳ ಸುತ್ತ ಪಾರಂಪರಿಕವಾಗಿ ಹೆಣೆಯಲಾಗಿರುವ ಅನೇಕ ಅವೈಜ್ಞಾನಿಕ ನಂಬಿಕೆಗಳು ಕಾರಣವಾಗಿವೆ. ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ ನಗುವ ಹೆಂಗಸನ್ನು ನಂಬಬಾರದು. ಹೆಣ್ಣು ಅಬಲೆ, ಭಾವನಾಶೀಲೆ, ಬುದ್ದಿಹೀನೆ ಇತ್ಯಾದಿ ನೇತ್ಯಾತ್ಮಕ ವಿಚಾರಗಳಿಂದ ಉಂಟಾದ ಅಸಹಾಯಕತೆ ಅವಲಂಬನೆ ಕೀಳರಿಮೆಗಳು ಮಹಿಳೆಯರ ಬದುಕನ್ನು ಅಧೀನ ನೆಲೆಗೆ ದೂಡಿವೆ.

# ಅಧ್ಯಾಯ ಐದು:
# ಜನಪದ ಆಟ, ವೈದ್ಯ, ಕೃಷಿ ಹಾಗೂ ಇತರೆಡೆ ಮಹಿಳೆಯರ ಪಾತ್ರ

## ಅಧ್ಯಾಯ : ಐದು

# ಜನಪದ ಆಟ, ವೈದ್ಯ, ಕೃಷಿ ಹಾಗೂ ಇತರೆಡೆ ಮಹಿಳೆಯ ಪಾತ್ರ

### ೫.೧. ಜನಪದ ಆಟಗಳಲ್ಲಿ ಮಹಿಳೆ :

ಜನಪದರು ಜನಪದ ಕಲೆಗಳಿಗೆ ಕೊಟ್ಟಷ್ಟೇ ಮಹತ್ವವನ್ನು ಕ್ರೀಡೆಗೂ ಕೊಡುತ್ತಾ ಬಂದಿದ್ದಾರೆ. ತಮ್ಮ ದೈನಂದಿನ ದಿನವಿಡೀ ದುಡಿತದ ಮಧ್ಯವೂ ತಮ್ಮ ಬೇಸರವನ್ನು ಕಳೆದುಕೊಳ್ಳುವುದಕ್ಕಾಗಿ ಹಾಡು, ಕುಣಿತಗಳ ಮೊರೆ ಹೋದಂತೆ ತಮ್ಮ ಬಿಡುವಿನ ವೇಳೆಯಲ್ಲಿ ಕ್ರೀಡೆಗೂ ಗಮನ ಕೊಡುತ್ತಾ ಬಂದಿದ್ದಾರೆ. ತಮ್ಮ ರೈತಾಪಿ ಬದುಕನ್ನು ಸಂಕೇತಿಸುವ ಹಲವು ಹತ್ತು ಬಗೆಯ ಜನಪದ ಆಟಗಳು ರೂಢಿಯಲ್ಲಿದ್ದು ಜನಪದ ಪರಂಪರೆಯಲ್ಲಿ ನಿರಂತರವಾಗುತ್ತಾ ಬಂದಿದೆ. ತಮ್ಮ ಅಪರಿಮಿತ ದುಡಿತದ ಜೊತೆಗೆ ಮೈಕಟ್ಟು ದೃಢವಾಗಿಸುವ, ಆರೋಗ್ಯದ ಬಗೆಗೆ ಮಾನಸಿಕ ಶಕ್ತಿಯನ್ನು ಚುರುಕುಗೊಳಿಸುವ ಕಾಳಜಿ ಹೊಂದಿರುವ ಆಶಯ ಈ ಕ್ರೀಡೆಗಳು ಹೊಂದಿವೆ. ಹಾಗಾಗಿಯೇ ಆಟಗಳಿಗೆ ಎಲ್ಲಿಲ್ಲದ ಮಹತ್ವ

ಜನಪದ ಕ್ರೀಡೆಗಳು ನಮ್ಮ ಸಂಸ್ಕೃತಿಯ ಸಂಕೇತಗಳೆಂಬಂತೆ ಬದುಕಿನಲ್ಲಿ ಬೆರೆತಂಥವುಗಳು. ಅವು ಬರೀ ಆಟಗಳಾಗಿ ನಿಲ್ಲದೆ ಮನುಷ್ಯನಿಗೆ ದೈಹಿಕ ಮತ್ತು ಮಾನಸಿಕ ಸದೃಢತೆಯೊಂದಿಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಮಹತ್ವವನ್ನು ತಿಳಿಯಪಡಿಸುತ್ತವೆ. ಗ್ರಾಮ ಸಮಾಜ ತನ್ನದೇ ಆದ ರೀತಿಯಲ್ಲಿ ಕೃಷಿ ಪರವಾದ ಹಬ್ಬಗಳನ್ನು, ಆಚರಣೆಗಳನ್ನು, ಕ್ರೀಡೆಗಳನ್ನು ಮುಂದುವರೆಸಿಕೊಂಡು ಬಂದಿದೆ. ಜನಪದ ಆಟಗಳು ಗ್ರಾಮೀಣ ಬದುಕಿನೊಂದಿಗೆ ಬೆರೆತುಕೊಂಡಿವೆ. ಮನೋರಂಜನೆಗೆ ಶಾರೀರಿಕ ಬಲಸಂವರ್ಧನೆಗೆ ಎರಡಕ್ಕೂ ಇವು ಸಹಾಯಕವಾಗಿವೆ. ಹಳ್ಳಿಗಳಲ್ಲಿ ಮಕ್ಕಳು ಚಿಕ್ಕವರಿರುವಾಗಲೇ ಆಡುವುದನ್ನು ಸಹಜವಾಗಿಯೇ ರೂಢಿಸಿಕೊಂಡೆ ಬೆಳೆಯುತ್ತಾರೆ. ಇಂದಿನ ಆಧುನಿಕ ಸಂದರ್ಭದಲ್ಲಿ ಫುಟ್‌ಬಾಲ್. ಥ್ರೋಬಾಲ್. ಕ್ರಿಕೆಟ್‌ಗಳಂತಹ ಆಟಗಳನ್ನು ನಾವು ಕಾಣುತ್ತಿರುವುದು ಸಹಜವಷ್ಟೆ ಆದರೆ ಈ ಆಟಗಳು ನಮ್ಮ ಗ್ರಾಮೀಣರಿಗೆ ಚಿರಪರಿಚಿತವಾಗಿರುವ ಚಿನ್ನಿದಾಂಡು ಮತ್ತು ಚೆಂಡು ಆಟಗಳಿಂದ ವಿಕಾಸ ಪಡೆದ ಸ್ವರೂಪದವುಗಳು ಎಂಬುದು

ಸಹಜವಾಗಿಯೇ ಸತ್ಯವಾದುದಾಗಿದೆ. ಆದರೆ ಇಂದು ಅನೇಕ ಆಟಗಳು ಮರೆಯಾಗಿ ದೂರದರ್ಶನದ ಮುಂದೆ ಕೂರುತ್ತಾ ಕಾಲ ಕಳೆಯಲಾಗುತ್ತಿದೆ. ಇವುಗಳ ಪುನರುತ್ಥಾನದ ಚಿಂತನೆಯ ಅಗತ್ಯ ಎದ್ದು ತೋರುತ್ತದೆ. ಮಳೆಗಾಲ, ಚಳಿಗಾಲ, ಬೇಸಿಗೆ ಕಾಲದಲ್ಲಿ ಕಾಲಕ್ಕೆ ಅನುಸಾರವಾಗಿ ಒಳಾಂಗಣ, ಹೊರಾಂಗಣದಲ್ಲಿ ಆಡುವ ಆಟಗಳು ಯಾವುದೇ ಖರ್ಚುಗಳಿಲ್ಲದೆ ಆರ್ಥಿಕ ಹೊರೆಯಿಲ್ಲದೆ ಆಡುವ ಆಟಗಳಾಗಿವೆ. ಇಂದಿನ ಆಟಗಳಂತೆ ಕಟ್ಟುನಿಟ್ಟಿನ ನಿಯಮಗಳನ್ನು ಹೊಂದದೆ ನಮ್ಮ ಹಿರಿಯರು ಈ ಆಟಗಳನ್ನಾಡುತ್ತಾ ಆನಂದ ಪಡೆಯುವುದರೊಂದಿಗೆ ಸಾಮಾಜಿಕ ಸಂಬಂಧ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ಗಟ್ಟಿಗೊಳಿಸುವುದರ ಜೊತೆಗೆ ವಂಶವಾಹಿಯಾಗಿ ಪೀಳಿಗೆಯಿಂದ ಪೀಳಿಗೆಗೆ ವರ್ಗಾಂತರ ವಾಗುವಂಥವುಗಳಾಗಿವೆ. ಹಾಗೆಯೇ ಸಾಮಾಜಿಕ ಅಗತ್ಯಗಳನ್ನು ಪೂರೈಸುವ ಕಾರಣದಿಂದ ಕಲಿಕೆಯಾಗಿ ಮೈಗೂಢಿಸಿಕೊಂಡಂಥವುಗಳು. ಉದಾ:- ಕಲ್ಲು, ಮಣ್ಣು, ಕಟ್ಟಿಗೆಗಳು ಮಕ್ಕಳಿಗೆ ಅತ್ಯಂತ ಪ್ರಿಯವಾದವು. ಅದರಂತೆ ಮಣ್ಣಿನಲ್ಲಿ ಆಡುವ ಮಕ್ಕಳಿಗೆ ಮಣ್ಣೆಂದರೆ ತುಂಬ ಸಂತೋಷವಾದುದು. ಮಣ್ಣಿನಿಂದ ಇಂದಿಗೂ ಕುಂಬಾರರು ಮಡಿಕೆಗಳನ್ನು ತಯಾರಿಸುತ್ತಾರೆ.

ಮಕ್ಕಳಾಗಿದ್ದಾಗ ಕೇವಲ ಮನೋರಂಜನೆಗೆಂದು ಆಡುತ್ತಿದ್ದ ಆಟಗಳು ಮನುಷ್ಯನ ಹುಟ್ಟು ಪ್ರವೃತ್ತಿಯಾದ ಸ್ಪರ್ಧಾ ಮನೋಭಾವನೆಯನ್ನು ಜಾಗೃತಗೊಳಿಸುತ್ತವೆ. ಕ್ರೀಡೆ ಅಥವಾ ಆಟವೆಂಬುದು ಏಕಘಟಕ ಕ್ರೀಡೆಯಲ್ಲಿ ಇಲ್ಲ. ನಿರ್ದಿಷ್ಟವಾಗಿ ಇಬ್ಬರು ಅಥವಾ ಎರಡು ತಂಡಗಳು ಮುಖಾಮುಖಿಯಾಗಿ ಸ್ಪರ್ಧಿಸಬೇಕಾಗುತ್ತದೆ. ಇಬ್ಬರಲ್ಲೂ ಸ್ಪರ್ಧೆ ಇರುತ್ತದೆ. ಸೋಲು-ಗೆಲುವು ಎಂಬುದೇ ಇಲ್ಲಿ ನಿರ್ಣಾಯಕ. ಯಾವುದೇ ಗ್ರಾಮೀಣ ಆಟದಲ್ಲಿ ಸಂವಹನ ಮತ್ತು ಕ್ರಿಯೆಗಳ ಸಹಚರ್ಯ ಇದ್ದೇ ಇರುತ್ತದೆ. ಈ ಸಂವಹನವು ಕ್ರಿಯಾತ್ಮಕವಾಗಿ ಆಟಗಾರರ ಚಾತುರ್ಯ-ಬುದ್ಧಿ ಸಾಂಘಿಕತೆ, ಶಿಸ್ತು, ನೀತಿ, ನಿಯಮಾವಳಿಗಳನ್ನು ಪ್ರಚೋದಿಸುತ್ತವೆ. ಸಮಾಜದಲ್ಲಿ ಸಮಚಿತ್ತತೆಯ ಮನೋಭಾವವನ್ನು ರೂಪಿಸಿಕೊಳ್ಳಬೇಕೆಂದು ಪಾಠವನ್ನು ಪರೋಕ್ಷವಾಗಿ ವರ್ಧಿಸುವಂತೆ ಮಾಡುತ್ತದೆ. ಅಂದರೆ ಮನಸ್ಸನ್ನು ಹದಗೊಳಿಸುವ ಮಾಧ್ಯಮವಾಗಿ ಜನಪದ ಆಟಗಳು ಕೆಲಸ ಮಾಡುತ್ತವೆ. ಜನಪದ ಆಟಗಳು ಕೇವಲ ಮನರಂಜನೆಯನ್ನು ಉಂಟು ಮಾಡುವುದಲ್ಲದೇ ಸಮಾಜದೊಳಗಿನ ಏರುಪೇರುಗಳನ್ನು ಸರಿ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಜನಪದ ಆಟಗಳಲ್ಲಿ ಕೆಲವನ್ನು ದಿನನಿತ್ಯ ಇನ್ನು ಕೆಲವು ಹಬ್ಬ-ಹರಿದಿನಗಳಂತಹ ವಿಶೇಷ ಸಂದರ್ಭದಲ್ಲಿ ಆಡುತ್ತಾರೆ. ಜನಪದ ಆಟಗಳನ್ನು ವರ್ಗೀಕರಿಸಲಾಗಿದೆ. ಈ ಕೆಳಗಿನಂತಿವೆ.

೧. ಮಕ್ಕಳ ಆಟಗಳು

೨. ಹೆಣ್ಣು ಮಕ್ಕಳ ಆಟಗಳು

೩. ಗಂಡು ಮಕ್ಕಳ ಆಟಗಳು

೪. ಪ್ರಾಣಿ ಸಂಬಂಧಿ ಆಟಗಳು ಎಂದು ನಾಲ್ಕು ವಿಭಾಗಗಳಲ್ಲಿ ನೋಡಬಹುದಾಗಿದೆ. ಆದರೆ ಇಲ್ಲಿ ಮಹಿಳೆ ಮತ್ತು ಹೆಣ್ಣು ಮಕ್ಕಳು ಆಡುವ ಆಟಗಳನ್ನು ಮಾತ್ರ ವಿಶ್ಲೇಷಣೆ ಮಾಡಲಾಗಿದೆ. ಹೆಣ್ಣು ಮಕ್ಕಳಿಗೆ ಮೀಸಲಾದ ಹಾವು ಏಣಿ ಆಟ, ಕುಂಟಾಬಿಲ್ಲೆ, ಹಗ್ಗದಾಟ, ಜೋಕಾಲಿ ಆಟ, ಹೆಣ್ಣು ಗಂಡು ಸಮಾನವಾಗಿ ಆಡುವ ಪಗಡೆ ಆಟ, ಹುಣಸೆಬೀಜ ಅಥವಾ ಚೌಕಬಾರ ಆಟ, ಕವಡೆ ಆಟ, ಆನೆಕಟ್ಟೆ ಆಟ ಈ ಎಲ್ಲಾ ಬಗೆಯ ಆಟಗಳು ಜನಪದ ಬುದ್ಧಿ ಕೌಶಲ್ಯತೆಯ ಚುರುಕುತನದ ಪ್ರತೀಕವಾಗಿವೆ.

ಮಹಿಳೆ ಜನಪದ ಆಟದಲ್ಲಿಯೂ ಭಾಗಿಯಾಗುತ್ತಾಳೆ. ಹಬ್ಬದಂತಹ ದಿನಗಳಲ್ಲಿ ಹೆಂಗಸರು, ಮನೆಯಲ್ಲಿನ ಹಬ್ಬದ ಎಲ್ಲಾ ಕೆಲಸ ಮುಗಿಸಿಕೊಂಡು ಆಮೇಲೆ ವಿಶ್ರಾಂತಿ ಪಡೆಯಲು ಊರ ಹೊರಗಿನ ಹುಣಸೆ ಮರಕ್ಕೆ ಗಂಡಸರ ಸಹಾಯದಿಂದ ಜೋಕಾಲಿ ಹಾಕಿಸಿಕೊಳ್ಳುತ್ತಾರೆ. ತುಂಬಾ ಸಂತೋಷದಿಂದ ಎಲ್ಲಾ ಗೆಳತಿಯರು ಸೇರಿಕೊಂಡು ಜೋಕಾಲಿಯನ್ನು ಎರಡು-ಮೂರು ಗಂಟೆ ಆಡಿ ಬರುತ್ತಾರೆ. ಮಹಿಳೆಯರು ಅದರಲ್ಲೂ ಮದುವೆಯಾದ ಹೆಂಗಳೆಯರು ಹೊಸದಾಗಿ ಮದುವೆಯಾದ ಹುಡುಗಿಯರು ಈ ಆಟ ಆಡಲು ಹೋಗುತ್ತಾರೆ. ಈ ಆಟ ಮನಸ್ಸಿಗೆ ಒಳ್ಳೆಯ ಮುದ ನೀಡುತ್ತದೆ.

ಮಹಿಳೆಗೆ ಬೇಸಿಗೆ ಕಾಲ ತುಂಬಾ ವಿಶ್ರಾಂತಿ ಕಾಲ. ಇವರು ಸಮಯವನ್ನು ಕಳೆಯಲು ಚೌಕಬಾರ, ದಸ್ಯಬಾರ, ಪಗಡೆ ಆಟಗಳನ್ನು ಮನೆಯ ಮುಂದಿನ ಅಂಗಳದಲ್ಲಿ ಆಡುತ್ತಾರೆ. ಮಧ್ಯ ವಯಸ್ಸಿನ ಮತ್ತು ವಯಸ್ಸಾದ ಅಜ್ಜಿಯರು ಹೆಚ್ಚಿನದಾಗಿ ಈ ಆಟಗಳನ್ನು ಆಡುತ್ತಾರೆ. ಇಬ್ಬಿಬ್ಬರು ಸೇರಿ ಒಂದು ಗುಂಪಾಗಿ ಅಥವಾ ಮೂವರು ಸೇರಿ ಈ ಆಟವನ್ನು ಆಡುತ್ತಾರೆ.

ಮಕ್ಕಳ ವಯಸ್ಸಿನಲ್ಲಿ ಹುಡುಗಿಯರು ಕುಂಟಾಬಿಲ್ಲೆ, ಕಣ್ಣು ಮುಚ್ಚಾಲೆ ಆಟ ಆಡುತ್ತಾರೆ. ಕುಂಟಾಬಿಲ್ಲೆಯನ್ನು ತನ್ನ ಸಮುದಾಯದ ಅಕ್ಕಪಕ್ಕದ, ನೆರೆಹೊರೆಯ ಸಮವಯಸ್ಕ ಹುಡುಗಿಯೊಂದಿಗೆ ಆಟ ಆಡುತ್ತಾಳೆ. ನೆಲದಲ್ಲಿ ಚೌಕಾಕಾರವಾಗಿ ನಾಲ್ಕು ಮನೆ ಅಥವಾ ಆರು ಮನೆಯನ್ನು ಸುಮಾರು ೮ ಅಡಿ ಉದ್ದದಲ್ಲಿ ಬರೆದು ಅದರಲ್ಲಿ ಕರಿಯಬೋಕಿ ಬಿಲ್ಲೆಯನ್ನು ಬಳಸಿಕೊಂಡು ಕುಂಟಾಬಿಲ್ಲೆ ಆಡುತ್ತಾರೆ. ಇದನ್ನು ಆಡುವುದರಿಂದ ಚಿಕ್ಕ ಹುಡುಗಿಯರಿಗೆ ಒಳ್ಳೆಯ ವ್ಯಾಯಾಮವಾಗುತ್ತದೆ. ಮತ್ತು ಮಾನಸಿಕವಾಗಿ ಚುರುಕು ಆಗುತ್ತಾರೆ. ಇದು ಕೂಡ ಜನಪದರಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಹುಡುಗಿ ಇಂತಹ ಆಟದಲ್ಲಿ ಪಾಲ್ಗೊಳ್ಳುತ್ತಾರೆ. ಕಣ್ಣುಮುಚ್ಚಾಲೆ ಆಟವು ಕೂಡ ತುಂಬಾ ಸೊಗಸಾಗಿರುತ್ತದೆ. ಈ ಆಟದಲ್ಲಿ ಹೆಣ್ಣು/ಗಂಡು ಭೇದವಿಲ್ಲದೆ ಎಲ್ಲರೂ ಆಟಕ್ಕೆ ಸೇರುತ್ತಾರೆ. ಅದರಲ್ಲಿಯೂ ಹುಡುಗಿಯರು ಹೆಚ್ಚಿನ ಪಾಲು ಇರುತ್ತಾರೆ. ಅವರಲ್ಲಿ ಯಾರಾದರೂ ತುಂಬಾ ಹಿರಿಯ ಹುಡುಗಿ ಇನ್ನೊಬ್ಬ ಹುಡುಗಿಯ ಕಣ್ಣು ಮುಚ್ಚುತ್ತಾಳೆ. ಆಟ ಸೇರಿದವರೆಲ್ಲರೂ ಆ ಸಂದರ್ಭದಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಆಮೇಲೆ ಕಣ್ಣು ಮುಚ್ಚಿಸಿಕೊಂಡಿದ್ದ ಹುಡುಗಿ ಅವರನ್ನು ಹುಡುಕಬೇಕು. ಅದರಲ್ಲಿ ಯಾರು ಮೊದಲು ಆವಳ ಕೈಗೆ ಸಿಗುತ್ತಾರೋ

ಅವರು ನಂತರ ಕಣ್ಣು ಮುಚ್ಚಿಸಿಕೊಳ್ಳಬೇಕು. ಇದು ಒಂದು ರೀತಿಯಲ್ಲಿ ಮಕ್ಕಳಿಗೆ ಮೋಜಿನ ಆಟವಾಗಿರುತ್ತದೆ. ಹೀಗೆ ಜನಪದ ಆಟದಲ್ಲಿ ಹೆಂಗಸರು, ಸಣ್ಣವರು, ದೊಡ್ಡವರು, ಮುದುಕರು ಎನ್ನದೆ ಎಲ್ಲರೂ ತಮ್ಮ ತಮ್ಮ ಸಂದರ್ಭಕ್ಕನುಗುಣವಾಗಿ ಬೇರೆ ಬೇರೆ ರೀತಿಯ ಆಟಗಳನ್ನು ಆಡುತ್ತಾರೆ. ಮೇಲೆ ಗುರುತಿಸಿರುವ ಆಟಗಳು ಈಗ ಚಾಲ್ತಿಯಲ್ಲಿರುವ ಆಟಗಳಾಗಿರುತ್ತವೆ. ಇಂದು ಜನಪದ ಆಟಗಳು ದೂರದರ್ಶನದ ಪ್ರಭಾವದಿಂದ ನಶಿಸಿ ಹೋಗುತ್ತಿವೆ.

**ಮಕ್ಕಳಾಟಗಳು ಮತ್ತು ಹೆಣ್ಣು ಮಕ್ಕಳ ಆಟಗಳು :**

ಮಕ್ಕಳಾಟಗಳು ಮನೋರಂಜನೆಯನ್ನು ಮುಖ್ಯ ಗುರಿಯಾಗಿಸಿಕೊಂಡಿರುತ್ತವೆ. ಮಕ್ಕಳು ಸಂತೋಷದಿಂದ ಆಡುತ್ತಲೇ ಬೆಳೆಯಬೇಕೆಂಬ ಸಾಮಾಜಿಕ ಪ್ರಜ್ಞೆ ಮಕ್ಕಳ ನೂರಾರು ಆಟಗಳಿಗೆ ಜನ್ಮ ಕೊಟ್ಟಿದೆ. ಮಕ್ಕಳ ಎಲ್ಲ ಆಟಗಳಲ್ಲಿ ಸ್ಪರ್ಧೆ ಇದ್ದೇ ಇರುತ್ತದೆಂಬುದೇನಿಲ್ಲ. ಮಕ್ಕಳು ತಮ್ಮ ಸಂತೋಷಕ್ಕೆ ಸುಮ್ಮನೆ ಕೆಲವು ಆಟಗಳನ್ನು ಆಡಿಕೊಳ್ಳುವುದುಂಟು. ಉದಾ:– ಮರಳಿನಿಂದ ಚಿಕ್ಕದಾಗಿ ಗೂಡುಕಟ್ಟಿ ಆಡುವುದು. ಬಣ್ಣ ಬಣ್ಣದ ಹಾಳೆಗಳಿಂದ ಗಾಳಿಪಟ ತಯಾರಿಸಿ ಗಾಳಿಪಟದಾಟ ಆಡುವುದನ್ನು ಗಮನಿಸಬಹುದು.

ಗ್ರಾಮದ ಮಟ್ಟಿಗೆ ಹೇಳುವುದಾದರೆ ಪುರುಷರಷ್ಟೇ ಮಹಿಳೆಯರ ಆಟಗಳು ಇರುವುದು ವಿಶೇಷ ಸಂಗತಿಯಾಗಿದೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಬೇಗ ಮದುವೆ ಮಾಡಿಕೊಡುವುದು ಹಳ್ಳಿಗಳಲ್ಲಿ ರೂಢಿ. ಹುಡುಗಿಯೊಬ್ಬಳು ಋತುಮತಿಯಾದ ಮೇಲೆ ಓಣಿಯಲ್ಲಿ ಆಡುವುದು ನಮ್ಮ ಜನಪದ ಸಂಸ್ಕೃತಿಗೆ ಸಾಧ್ಯವಿಲ್ಲದ ಮಾತು. ಆದರೂ ಸಹ ೧೦ ರಿಂದ ೧೪ ವರ್ಷ ವಯಸ್ಸಿನ ಹೆಣ್ಣು ಮಕ್ಕಳು ಆಟದಲ್ಲಿ ಪಾಲ್ಗೊಳ್ಳುತ್ತಾರೆ. ಅವುಗಳೆಂದರೆ;

೧. ಉಪ್ಪಮ್ಮ ಉಪ್ಪಾಟ

೨. ಬಳೆಚೂರಿನ ಆಟ

೩. ಮರಕೋತಿ ಆಟ

೪. ಕುಂಟಾಬಿಲ್ಲೆ ಆಟ

೫. ಕೆರೆದಡ

೬. ಕಣ್ಣುಮುಚ್ಚಾಲೆ

೭. ಕಪ್ಪೆಯಾಟ

೮. ಹಗ್ಗ ಜಿಗಿತ

೯. ಚೀಟಿ ಆಡುವುದು

೧೦. ಕಲರ್ ಕಲರ್ ವಾಟ್ ಕಲರ್ ಆಟ

ಹೆಣ್ಣು ಮಕ್ಕಳು ಚಿಕ್ಕವರಿದ್ದಾಗ ಆಡುವ ಆಟಗಳಾಗಿವೆ. ಅವು ಆಡುವುದು ಹೇಗೆ ಎನ್ನುವ ವಿಶ್ಲೇಷಣೆಯನ್ನು ಈ ಕೆಳಗೆ ಕೊಡಲಾಗಿದೆ.

**೧. ಉಪ್ಪಮ್ಮ ಉಪ್ಪಾಟ :** ಈ ಆಟವನ್ನು ಗ್ರಾಮೀಣ ಭಾಗದಲ್ಲಿ ಸಾಮಾನ್ಯವಾಗಿ ಹೆಣ್ಣು ಮಕ್ಕಳೇ ಹೆಚ್ಚಾಗಿ ಆಡುತ್ತಾರೆ. ಈ ಆಟಕ್ಕೆ ಯಾವುದೇ ಸಲಕರಣೆಗಳ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಎಂಟು ಜನ ಚಪ್ಪಾಳೆ ಹಾಕುವ ಮೂಲಕ ಕೊನೆಗೆ ಯಾರು ಉಳಿಯುವರೋ ಅವರನ್ನು ಉಪ್ಪು ಕೊಡುವವಳಾಗಿ ಶಾಲೆ ಅಥವಾ ದೇವಾಲಯದಲ್ಲಿನ ಕಂಬದ ಸಾಲುಗಳಲ್ಲಾದರೂ ಈ ಆಟ ಆಡಬಹುದಾಗಿದೆ. ಉಪ್ಪು ಕೊಡುವವಳ ಹೊರತಾಗಿ ಉಳಿದವರೆಲ್ಲರೂ ಪ್ರತಿ ಕಂಬಕ್ಕೆ ಒಬ್ಬರಂತೆ ನಿಲ್ಲಬೇಕು. ಉಪ್ಪು ಮಾರುವವರು ತಲೆಯ ಮೇಲೆ ಉಪ್ಪಿನ ಮೂಟೆಯಂತೆ ಕೈ ಹೊತ್ತು ಮೊದಲನೇ ಕಂಬದ ಬಳಿ ನಿಂತವರ ಪಕ್ಕಕ್ಕೇ ಬಂದು ಉಪ್ಪು ಬೇಕೆ ಉಪ್ಪು ಎಂದು ಕೇಳುವಳು. ಈ ಕಂಬ ಹಿಡಿದು ನಿಂತವರು ಆ ಮನೆಗೆ ಹೋಗು ನನಗೆ ಬೇಡ ಎನ್ನುತ್ತಾರೆ. ಆಗ ಉಪ್ಪು ಮಾರುವವಳು ಎರಡನೇ ಕಂಬದ ಬಳಿ ಬರುತ್ತಾಳೆ. ಅವರೂ ಕೂಡ ಮುಂದಿನ ಮನೆ ತೋರಿಸುತ್ತಾರೆ. ಆಗ ಪ್ರತಿ ಕಂಬಕ್ಕೆ ನಿಂತವರು ತಾವು ಒಬ್ಬರಿಗೊಬ್ಬರು ಕಂಬ ಬದಲಾಯಿಸಿಕೊಳ್ಳುತ್ತಾರೆ. ಬದಲಾಯಿಸಿಕೊಳ್ಳುವಾಗ ಉಪ್ಪು ಮಾರುವವರು ಒಂದು ಕಂಬವನ್ನು ಹಿಡಿಯುತ್ತಾಳೆ. ಕಂಬ ಸಿಗದೆ ಇರುವವರು ಮತ್ತೆ ಎಲ್ಲರ ಮನೆಗೆ ಉಪ್ಪು ಬೇಕೆ ಉಪ್ಪು ಎಂದು ತಿರುಗುತ್ತಾ ಹೀಗೆ ಆಟ ಮುಂದುವರೆಯುತ್ತದೆ.

**೨. ಬಳೆ ಚೂರಿನ ಆಟ :** ಇಬ್ಬರು ಮಕ್ಕಳು ಸೇರಿ ಪ್ರತಿಯೊಬ್ಬರು ನಾಲ್ಕು ನಾಲ್ಕು ಚಿಕ್ಕ ಚಿಕ್ಕ ತಗ್ಗುಗಳನ್ನು ವಿರುದ್ಧ ದಿಕ್ಕಿನಲ್ಲಿ ನಿರ್ಮಿಸುವುದು. ಒಬ್ಬೊರಿಗೊಬ್ಬರಿಗೆ ತಿಳಿಯದಂತೆ ಬಳೆಯ ಗಾಜಿನ ಚೂರುಗಳನ್ನು ಅಂದರೆ ವಿವಿಧ ಬಣ್ಣದ ಹಲವಾರು ಚೂರುಗಳನ್ನು ತೆಗೆದುಕೊಂಡು ಒಬ್ಬರನ್ನು ದೂರಕ್ಕೆ ಹೋಗುವಂತೆ ತಿಳಿಸಿ ಒಂದು ತಗ್ಗಿನಲ್ಲಿ ಹಾಕಿ ನಾಲ್ಕು ತಗ್ಗುಗಳಲ್ಲಿ ಮಣ್ಣು ಹಾಕಿ ಮತ್ತೊಬ್ಬರು ಆ ತಗ್ಗುಗಳ ಹತ್ತಿರ ಒಂದು ಚಿಕ್ಕ ಕಲ್ಲನ್ನು ಇಟ್ಟಿರುತ್ತಾರೆ. ನಂತರ ಇನ್ನೊಬ್ಬರು ಬಂದು ಆ ಕಲ್ಲಿಗೆ ತನ್ನ ನಾಲ್ಕು ಕೈ ಬೆರಳುಗಳಿಂದ ಕಲ್ಲಿನ ಮೇಲೆ ಮೂಡಿಸುತ್ತಾನೆ. ಆಗ ಯಾವ ಬೆರಳು ದುಂಡಾಗಿ ಮೂಡಿರುತ್ತದೋ ಆ ನಂಬರಿನ ತಗ್ಗಿನಲ್ಲಿ ಬಳೆಚೂರು ಇವೆ ಎಂದು ನಂಬುತ್ತಾರೆ, ಅದನ್ನು ತೆರೆಯುತ್ತಾರೆ. ಒಂದು ವೇಳೆ ತೆಗೆದವನಿಗೆ ಬಳೆಚೂರು ಇರುವ ತೆಗ್ಗು ದೊರೆತರೆ ಆತನಿಗೆ ಅದರಲ್ಲಿರುವ ಚೂರುಗಳ ಜೊತೆಗೆ ಅವು ಎಷ್ಟಿರುತ್ತವೆಯೋ ಅಷ್ಟು ಚೂರುಗಳನ್ನು ಮುಚ್ಚಿಟ್ಟ ಮೊದಲ ವ್ಯಕ್ತಿ ಕೊಡಬೇಕೆಂದು ನಿಯಮ. ಒಂದು ವೇಳೆ ಬಳೆ ಚೂರು ಇದ್ದು ತಗ್ಗು ಹುಡುಕಲು ವಿಫಲವಾದರೆ ಮೊದಲಿನ ವ್ಯಕ್ತಿ ಬೇರೆ ತಗ್ಗಿನಲ್ಲಿ ಮುಚ್ಚಿಟ್ಟ ಬಳೆಚೂರಿನಷ್ಟೆ ತನ್ನಲ್ಲಿರುವ ಚೂರುಗಳನ್ನು ಮೊದಲ ವ್ಯಕ್ತಿಗೆ ಕೊಡಬೇಕು.

**೩. ಕುಂಟಾ ಬಿಲ್ಲೆ ಆಟ :** ಕುಂಟೆಬಿಲ್ಲೆ, ಕುಂಟಾಬಿಲ್ಲೆ, ಕುಂಟೆಪಿಲಿ ಹೆಸರಿನಿಂದ ಕರೆಯಿಸಿಕೊಳ್ಳುವ ಈ ಆಟ ಆಡುವ ವಿಧಾನ ಪ್ರಾದೇಶಿಕವಾಗಿ ವಿಭಿನ್ನವಾಗಿದೆ. ಆಡುವ ಮುನ್ನ ಆಟದ

ನಿಯಮದಂತೆ ಸಮತಟ್ಟಾದ ನೆಲದಲ್ಲಿ ಚೌಕಾಕಾರದ ಮನೆಗಳನ್ನು ರಚಿಸಿಕೊಳ್ಳುವುದು. ತೆಳುವಾದ ಬಳಪ ಕಲ್ಲಿನಿಂದ ಅಥವಾ ಒಡೆದ ಸೊರೆಯಿಂದ ಮಾಡಿದ ವೃತ್ತಾಕಾರದ ಬಿಲ್ಲೆ ಅಥವಾ ಮಡಿಕೆ ಚೂರು ಅಥವಾ ಚಪ್ಪಟೆಯಾದ ಕಲ್ಲಿನ ಸಣ್ಣ ತುಂಡು ಆಟದ ಮುಖ್ಯ ಸಾಮಗ್ರಿ. ಇಂದು ಜಗತ್ತಿನ ಎಲ್ಲಾ ಪ್ರದೇಶಗಳಲ್ಲಿ ಪರಿಚಿತವಾಗಿರುವ ಕುಂಟಾಬಿಲ್ಲೆಯಾಟ ವಿಶೇಷವಾಗಿ ಹೆಣ್ಣುಮಕ್ಕಳಿಗೆ ತುಂಬಾ ಪ್ರಿಯವಾದ ಆಟವಾಗಿದೆ. ಇದರಲ್ಲಿ ಸರಳವಾದ ಮತ್ತು ತೊಡಕಿನ ಹಲವು ವಿಧಗಳಿವೆ. ತಾವು ಆಟವಾಡುವುದಕ್ಕೆ ಮುಂಚೆ ಎಲ್ಲಾ ಆಟಗಾರ್ತಿಯರು ಪರಸ್ಪರ ಒಪ್ಪಂದದಂತೆ ಯಾವ ಆಟವಾಡಬೇಕು ಎಂಬುದರಿಂದಾಗಿ ಅಂತಹ ಮನೆಗಳ ರಚನೆ ಮಾಡಿಕೊಂಡು ಆಟವಾಡುವರು.

ಇದರಲ್ಲಿ ಐದು ಮನೆಯಾಟ, ಹತ್ತು ಮನೆಯಾಟ, ಎಂಟು ಮನೆಯಾಟಗಳನ್ನು ಆಡುತ್ತಾರೆ.

**ಐದು ಮಾನೆಯಾಟ** : ಇಬ್ಬರು ಹುಡುಗಿಯರು ಒಬ್ಬರ ನಂತರ ಮತ್ತೊಬ್ಬರು ಅಂದರೆ ಒಬ್ಬರು ಆಟ ಕಳೆದುಕೊಂಡ ಮೇಲೆ ಮತ್ತೊಬ್ಬರು ಆಟವಾಡಬೇಕು. ಆದರೆ ಒಬ್ಬೊಬ್ಬರ ಆಟವು ಪ್ರತ್ಯೇಕವಾಗಿರುತ್ತದೆ. ಯಾರು ಮೊದಲು ಆಟವಾಡಬೇಕು ಎಂಬುದನ್ನು ಕಂಡು ಹಿಡಿಯಲು ಬಿಲ್ಲೆಯ ಒಂದು ಕಡೆ ಎಂಜಲು ಸವರಿ ಒಂದೊಂದನ್ನು ಆಯ್ಕೆ ಮಾಡಿಕೊಂಡು ಟಾಸ್ ಹಾಕಿ ಗೆದ್ದವರು ಆಟ ಪ್ರಾರಂಭಿಸುವರು.

ಆಟವಾಡುವಾಗ ಕಾಲಿನಿಂದ ಗೆರೆಯನ್ನು ತುಳಿಯುವಂತಿಲ್ಲ. ನಾಲ್ಕು ಮನೆ ಕುಂಟಿದ ನಂತರ ಐದನೇ ಮನೆಯಲ್ಲಿ ಕಾಲು ಬಿಡಬಹುದಾಗಿದೆ. ಇದನ್ನು ಕಟ್ಟೆ ಮನೆ ಎಂದು ಕೆಲವು ಕಡೆ, ಪಾಂಡಿ ಮನೆ ಎಂದು ಕರೆಯಲಾಗುತ್ತದೆ. ಆಟವಾಡುವವರು ಮನೆಗಳ ಮುಂಭಾಗದಲ್ಲಿ ನಿಂತು ಬಿಲ್ಲಿಯನ್ನು ಮೊದಲ ಮನೆಗೆ ಹಾಕಿ ಪಕ್ಕದಲ್ಲಿನ ಮನೆಯಿಂದ ಕುಂಟುತ್ತಾ ಬಂದು ಒಂಟಿ ಕಾಲಿನಿಂದಲೇ ಬಿಲ್ಲೆಯನ್ನು ನಿಧಾನಕ್ಕೆ ಮನೆಯಿಂದ ಹೊರಗೆ ತಳ್ಳಿ ಅದು ಬಿದ್ದಿರುವ ಜಾಗಕ್ಕೆ ಹಾಕಬೇಕು. ಹಾರಲು ಸಾಧ್ಯವಾಗದಷ್ಟು ದೂರ ಬಿದ್ದಿದ್ದರೆ ಪ್ರತಿಸ್ಪರ್ಧಿಯನ್ನು ಒಂದು ಹೆಜ್ಜೆ ಕೊಡು ಎಂದು ಕೇಳಿಕೊಂಡು ಬಿಲ್ಲೆಯನ್ನು ಮುಟ್ಟಬಹುದಾಗಿದೆ. ಬಿಲ್ಲೆ ಮನೆಯಲ್ಲಿ ಹಾಕುವಾಗ ಅಥವಾ ತಳ್ಳುವಾಗ ಅದು ಗೆರೆಯ ಮೇಲೆ ಕೂತರೆ ಆಟ ಹೋದಂತೆ. ಬಿಲ್ಲೆ ಎಸೆಯುವಾಗ ನೆಟ್ಟಗೆ ನಿಂತು ಎಸೆಯಬೇಕು. ಯಾವ ಮನೆಗೆ ಬಿಲ್ಲೆ ಹಾಕಬೇಕೋ ಅದೇ ಮನೆಗೆ ಅದು ಬೀಳಬೇಕು. ಬಿಲ್ಲೆಯನ್ನು ಮನೆಯಿಂದ ಮನೆಗೆ ಇಲ್ಲವೇ ಒಂದೇ ಬಾರಿಗೆ ಹೊರ ನೂಕಬಹುದು. ಮೊದಲಿನಂತೆ ಇನ್ನುಳಿದ ಮೂರು ಮನೆಗೂ ಒಂದೊಂದರಂತೆ ಬಿಲ್ಲೆ ಹಾಕಿ ಆಟವಾಡಿದ ಮೇಲೆ ಎರಡನೇ ರೀತಿಯ ಆಟವಾಡಬೇಕು.

ನಾಲ್ಕು ಮನೆಯಾಡಿ ಮುಗಿದ ವೇಳೆ ಮನೆಗಳ ಮುಂಭಾಗದಲ್ಲಿ ಹಿಂತಿರುಗಿ ನಿಂತು ಮುಂಭಾಗದಿಂದ ಬಿಲ್ಲೆ ಎಸೆದು ಅದು ಕಟ್ಟೆ ಮನೆ ಆಚೆ ಹೋಗಿ ಬೀಳಬೇಕು. ನಂತರ ತಲೆಯನ್ನು ಮೇಲಕ್ಕೆತ್ತಿಕೊಂಡು ಪ್ರತಿ ಮನೆಗೂ ಎರಡು ಕಡೆ ಕಾಲು ಬಿಟ್ಟುಕೊಂಡು ಬರುವಾಗ ಅಮಟೆ ಎಂದು ಹೇಳುತ್ತಾ ಗೆರೆಯನ್ನು ತುಳಿಯುವಂತಿಲ್ಲ. ಇದಕ್ಕೆ ಎದುರಾಳಿಯು ಯೆಸ್(Yes)

ಎಂದು ಪ್ರತಿ ಮನೆಗಳನ್ನು ದಾಟುವಾಗ ಸೂಚನೆ ನೀಡಬೇಕು. ಕಟ್ಟೆ ಮನೆಗೆ ಒಂದು ಬಚ್ಚ ಅಥವಾ ಬಿಲ್ಲೆ ಇರುವ ಜಾಗಕ್ಕೆ ನೆಗೆದು ಅದನ್ನು ಕಾಲಿನಿಂದ ಮುಟ್ಟುವುದರೊಂದಿಗೆ ಎರಡನೆಯ ಹಂತ ಕೊನೆಗೊಳ್ಳುತ್ತದೆ.

ಮೂರನೆಯ ಹಂತದಲ್ಲಿ ಆಟಗಾರ್ತಿ ತನ್ನ ಎದುರಾಳಿಯನ್ನು ಕಪ್ಪೋ ಅಥವಾ ಬಿಳುಪೋ ಎಂದು ಕೇಳುತ್ತಾಳೆ. ಕಪ್ಪು ಎಂದರೆ ಹಸ್ತದ ಮೇಲ್ಭಾಗದಲ್ಲಿ ಬಿಲ್ಲೆಯಿಟ್ಟುಕೊಂಡು ಉದ್ದವಾಗಿ ಕೈಚಾಚಿ ಕುಂಟುತ್ತಾ ಹೊರಬರುವುದು. ಕುಂಟುವಾಗ ಅದು ಬಿದ್ದು ಹೋಗದಂತೆ ನೋಡಿಕೊಳ್ಳಬೇಕು.

ನಾಲ್ಕನೆಯ ಹಂತದಲ್ಲಿ ತಲೆಯ ಮೇಲೆ ಬಿಲ್ಲೆಯನ್ನಿರಿಸಿಕೊಂಡು ಅದು ಬೀಳದಂತೆ ಎಲ್ಲಾ ಮನೆಗಳಲ್ಲಿ ಕುಂಟುತ್ತಾ ಹೊರಬರುವುದು. ನಂತರ ಎಡ ಅಥವಾ ಬಲಪಾದದ ಬಿಲ್ಲೆಯನ್ನಿರಿಸಿಕೊಂಡು ಕುಂಟುತ್ತಾ ಹೊರಬರುವುದು. ಆರನೆಯ ಹಂತದಲ್ಲಿ ಕೈ ಮುಷ್ಠಿ ಹಿಡಿದು ಮೇಲ್ಭಾಗದ ಸಂಧಿಯಲ್ಲಿ ಬಿಲ್ಲೆಯಿನ್ನಿಟ್ಟುಕೊಂಡು ಉದ್ದವಾಗಿ ಕೈ ಚಾಚಿ ಕುಂಟುತ್ತಾ ಮನೆಗಳನ್ನು ದಾಟಬೇಕು.

ಕೊನೆಯ ಹಂತದಲ್ಲಿ ಮನೆಯ ಮುಂಬದಿಯ ಸ್ಥಳದಲ್ಲಿ ಹಿಂಬದಿಯಾಗಿ ನಿಂತು ತಲೆಯ ಮೇಲಿನಿಂದ ಬಿಲ್ಲೆ ಎಸೆಯುವಾಗ ಯಾವುದಾದರೊಂದು ಮನೆಗೆ ಸರಿಯಾಗಿ ಬಿದ್ದರೆ ಆ ಮನೆಯನ್ನು ಹಣ್ಣು ಮಾಡಿದರೆ ಅದು ಅವಳಿಗೆ ದಕ್ಕುತ್ತದೆ. ಹೀಗೆ ಯಾರೂ ಹೆಚ್ಚು ಮನೆಗಳನ್ನು ಹಣ್ಣು ಮಾಡುವರೋ ಅವರು ಗೆದ್ದಂತೆ. ಎದುರಾಳಿ ಹಣ್ಣು ಮಾಡಿರುವ ಮನೆಗೆ ಕಾಲನ್ನಿಡದೆ ದಾಟಬೇಕು.

**೪. ಕೆರೆ–ದಡ ಆಟ :** ಏಕಾಗ್ರತೆ ಸ್ಮರಣಾಶಕ್ತಿ ಹಾಗೂ ಕ್ಷಿಪ್ರ ಪ್ರತಿಕ್ರಿಯೆ ಇವೆಲ್ಲವನ್ನು ರಂಜನೀಯವಾಗಿ ಸ್ಪರ್ಧಾತ್ಮಕವಾಗಿ ಪರೀಕ್ಷಿಸುವ ಆಟವೇ ಕೆರೆ ದಡ. ಏಕಕಾಲಕ್ಕೆ ಎಷ್ಟು ಜನ ಬೇಕಾದರೂ ಆಡಬಹುದಾದ ಎಷ್ಟೇ ಸಮಯ ಆಡಿದರೂ ಬೇಸರವೇ ಬಾರದ ಯಾವುದೇ ಸಾಮಗ್ರಿ ಬೇಕಿಲ್ಲದ ಅತ್ಯಂತ ಸರಳವಾದ ಮತ್ತು ವ್ಯಾಯಾಮ ಪ್ರಧಾನ ಆಟವಾಗಿದೆ. ನೆಲದ ಮೇಲೆ ಉದ್ದಕ್ಕೂ ಅಥವಾ ವೃತ್ತಾಕಾರವಾಗಿ ಗೆರೆ ಎಳೆಯಲಾಗುತ್ತದೆ. ಅದರ ಒಂದು ಬದಿ ಕೆರೆ ಮತ್ತೊಂದು ಬದಿಯೇ ದಡ. ಎಲ್ಲಾ ಆಟಗಾರರೂ ಗೆರೆಯ ಒಂದು ಬದಿಯಲ್ಲಿ ಸಾಲಾಗಿ ಸೊಂಟದ ಮೇಲೆ ಕೈಗಳನ್ನಿಟ್ಟುಕೊಂಡು ನಿಲ್ಲುತ್ತಾರೆ. ಆಟಗಾರನ ಎದುರಿಗೆ ಸ್ವಲ್ಪ ದೂರದಲ್ಲಿ ಒಬ್ಬ ಮುಖಂಡ ನಿಲ್ಲುತ್ತಾನೆ. ಗೆರೆಯ ಹಿಂಬದಿಗೆ ದಡ ಎಂದು ಮುಂಭಾಗವೇ ಕೆರೆ ಎಂದು ಮೊದಲೇ ಸ್ಪಷ್ಟವಾಗಿ ತೀರ್ಮಾನಿಸಬೇಕು.

ಹೀಗೆ ಎಲ್ಲರೂ ಸಿದ್ಧರಾದೊಡನೆ ಮುಖಂಡ ಸ್ಪಷ್ಟವಾಗಿ ಜೋರಾಗಿ ಕೆರೆ ಎಂದಾಗ ಕೆರೆಯ ಭಾಗಕ್ಕೆ ದಡ ಎಂದಾಗ ದಡದ ಭಾಗಕ್ಕೆ ಆಟಗಾರರು ಎರಡು ಕಾಲುಗಳಿಂದ ಒಟ್ಟಿಗೆ ಕುಪ್ಪಳಿಸಿ ಜಿಗಿಯಬೇಕು. ಆಟಗಾರರಲ್ಲಿ ಗೊಂದಲವುಂಟು ಮಾಡಬೇಕೆಂಬ ಕಾರಣದಿಂದ ಒಂದೇ ಸಮನೆ ಕೆರೆ ದಡ, ಕೆರೆ ದಡ, ದಡ ಕೆರೆ, ದಡದಡ ಕೆರೆ ಕೆರೆ, ಕೆರೆ ದಡ ಹೀಗೆ ಹೇಳುತ್ತಿರುವನು.

ಮುಖಂಡ ಕೆರೆ ಎಂದಾಗ ದಡಕ್ಕೆ ನೆಗೆದವರು ಅಥವಾ ದಡ ಎಂದಾಗ ಕೆರೆಗೆ ಹಾರಿದವರು ಔಟ್ ಆಗುತ್ತಾರೆ. ಪ್ರತಿಬಾರಿಯೂ ಎಷ್ಟು ಜನ ಔಟ್ ಆಗುವರೋ ಅವರನ್ನು ಹೊರ ಹಾಕಿದ ನಂತರ ಆಟ ಮುಂದುವರಿಯುವುದು. ತಪ್ಪು ಮಾಡದೆ ಕಟ್ಟ ಕಡೆಯವರೆಗೆ ಯಾರೂ ಉಳಿಯುತ್ತಾರೋ ಅವರು ಗೆಲ್ಲುತ್ತಾರೆ.

ಈ ಆಟ ಆಡುವುದರಿಂದ ಏಕಾಗ್ರತೆ ಹೆಚ್ಚಾಗುತ್ತದೆ. ದೇಹ ಮತ್ತು ಮನಸ್ಸು ಎರಡು ಒಟ್ಟಾಗಿ ಕೆಲಸ ಮಾಡಲು ಅನುಕೂಲವಾಗಿರುತ್ತದೆ. ದೇಹದ ಸದೃಢತೆ ಹೆಚ್ಚಾಗಿ ಸದಾ ಆರೋಗ್ಯ ಶಕ್ತಿಯನ್ನು ವೃದ್ಧಿಸುತ್ತದೆ.

**೫. ಕಣ್ಣಾ ಮುಚ್ಚಾಲೆ :** ಕಿರಿಯರಿಗೆ ಅತ್ಯಂತ ಪ್ರಿಯವಾದ ಈ ಆಟದಲ್ಲಿ ಎಷ್ಟು ಜನರಾದರೂ ಭಾಗವಹಿಸ ಬಹುದಾಗಿದೆ. ಅಜ್ಜಿ ಅಥವಾ ಯಾರಾದರೂ ಹಿರಿಯ ವ್ಯಕ್ತಿ ಆಟದಲ್ಲಿ ಭಾಗಿಯಾಗುವುದುಂಟು. ಮೊದಲು ಚಪ್ಪಾಳೆ ಹಾಕಿ ವಿರೋಧಿ ಆಟಗಾರರನ್ನು ಕಂಡು ಹಿಡಿದ ಬಳಿಕ ನಾಯಕತ್ವ ವಹಿಸಿದ ಮಗು ಅಥವಾ ಅಜ್ಜಿ ವಿರೋಧಿ ಆಟಗಾರನ ಕಣ್ಣು ಮುಚ್ಚುತ್ತಾರೆ. ಉಳಿದವರೆಲ್ಲ ಇವರ ಎದುರಿಗೆ ನಿಲುತ್ತಾನೆ. ಆಗ ಕಣ್ಣು ಮುಚ್ಚಿದವರು ಊಹಿಸಿ ಹೇಳಲು ಅವಕಾಶ ಮಾಡಿಕೊಡುವ ಮೂಲಕ ಅದಲ್-ಬದಲ್, ಅದಲ್ ಬದಲ್ ಇವರು ಬಿಟ್ಟು ಅವರನ್ನು ಬಿಟ್ಟು ಇವರ್ಯಾರು ಎಂದು ಅಜ್ಜಿಯಾದವಳು ಕಣ್ಣು ಮುಚ್ಚಿಸಿಕೊಂಡವರ ಕೈ ಹಿಡಿದು ತೋರಿಸಿ ಕೇಳುತ್ತಾರೆ. ಕಣ್ಮುಚ್ಚಿಕೊಂಡವರು ತೋರಿಸಿದವರ ಹೆಸರನ್ನು ಸರಿಯಾಗಿ ಹೇಳಿದರೆ ಕಣ್ಮುಚ್ಚಿಸಿಕೊಂಡವ ಗೆದ್ದಂತೆ. ಈಗ ಗುರುತಿಸಿದ ವ್ಯಕ್ತಿ ಕಣ್ಮುಚ್ಚಿಸಿಕೊಳ್ಳಬೇಕು. ಒಂದೇ ಸಲಕ್ಕೆ ಗುರುತಿಸಬೇಕು. ಇಲ್ಲದಿದ್ದಲ್ಲಿ ಎಲ್ಲ ಬಚ್ಚಿಟ್ಟುಕೊಂಡು ನಂತರ ಈ ಹಾಡನ್ನು ಹೇಳುತ್ತಾರೆ.

ಕಣ್ಣೆ ಮುಚ್ಚೆ ಕಾಡೆ ಗೂಡೆ
ಮುದ್ದಿನ ಮೂಟೆ ಉರುಳೆ ಹೋಯ್ತು
ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ
ನಿಮ್ಮಯ ಹಕ್ಕಿ ಬಚ್ಚಿಟ್ಟುಕೊಳ್ಳಿ

ಎಂದು ಲಯಬದ್ಧವಾಗಿ ಹೀಗೆ ಹೇಳುತ್ತಿದ್ದಂತೆಯೇ ಕಣ್ತೆರೆಯುವ ಮುನ್ನ ಎಲ್ಲರೂ ಕಾಣದಂತೆ ಬಚ್ಚಿಟ್ಟುಕೊಳ್ಳುತ್ತಾರೆ. ಅಜ್ಜಿ ಅಥವಾ ಹಿರಿಯ ವ್ಯಕ್ತಿ ಮುಚ್ಚಿದ ವ್ಯಕ್ತಿ ಕಣ್ಣುಗಳನ್ನು ಬಿಟ್ಟ ನಂತರ ಬಚ್ಚಿಟ್ಟುಕೊಂಡವರನ್ನು ಹುಡುಕಿ ಯಾರನ್ನಾದರೂ ಮುಟ್ಟಿದಲ್ಲಿ ಅವರು ಕಳ್ಳರಾಗುತ್ತಾರೆ. ಮುಟ್ಟಿಸಿಕೊಳ್ಳದೇ ಕಳ್ಳ ಆದವರಿಗೆ ಕಾಣಿಸಿದಂತೆ ಅಥವಾ ಕಂಡರೂ ಮುಟ್ಟಲು ಕೈಗೆ ಸಿಗದಂತೆ ಬಂದು ನಿರ್ದಿಷ್ಟ ಸ್ಥಳದಲ್ಲಿ ಕಣ್ಣು ಮುಚ್ಚಲು ಕುಳಿತ ಅಜ್ಜಿಯ ಅಥವಾ ಹಿರಿಯ ವ್ಯಕ್ತಿಯ ಬೆನ್ನಿಗೆ ಮುಟ್ಟಿದರೆ ಅವರು ಗೆದ್ದಂತೆ ಅಥವಾ ಬಚಾವ ಆದಂತೆ ಅವರನ್ನು ಮುಟ್ಟುವಂತಿಲ್ಲ. ಎಲ್ಲರೂ ಹೀಗೆ ಮಾಡಿ ಗೆಲುವು ಸಾಧಿಸಿದರೆ ತಾನೇ ವಿರೋಧಿಯಾಗಿ ಮತ್ತೆ

ಕಣ್ಮುಚ್ಚಿಸಿಕೊಳ್ಳಬೇಕಾಗುತ್ತದೆ. ಆಟ ಹೀಗೆ ಮುಂದುವರಿಯುತ್ತದೆ. ಒಂದು ವೇಳೆ ವಿರೋಧಿ ಆಟಗಾರನಿಗೆ ಮೊದಲಿಗೆ ಸಿಕ್ಕಿ ಬಿದ್ದವನು ವಿರೋಧಿ ಆಟಗಾರನಾಗಬೇಕು.

ಈ ಆಟದ ಮೂಲಕ ಮಕ್ಕಳು ಚುರುಕಾಗಿ ಓಡುವುದನ್ನು, ಬುದ್ಧಿವಂತಿಕೆಯಿಂದ ಅಡಗಿಸಿಕೊಳ್ಳುವುದು, ಪರಸ್ಪರ ಸೌಹಾರ್ದತೆ-ಸಹಬಾಳ್ವೆಯ ಗುಣ ರೂಢಿಯಾಗುತ್ತದೆ. ಊಹೆ ಮತ್ತು ತಾರ್ಕಿಕ ಶಕ್ತಿ ಬೆಳೆಯುವುದರೊಂದಿಗೆ ಅಪಾಯದಿಂದ ಪಾರಾಗುವ ಉಪಾಯಗಳು ತಿಳಿಯುತ್ತವೆ. ಉತ್ತಮ ಮನೋರಂಜನೆಯ ಜೊತೆಗೆ ಶಾರೀರಿಕ ಸದೃಢತೆ ಹೆಚ್ಚಾಗುತ್ತದೆ.

**೬. ಕಪ್ಪೆಯಾಟ :** ಕಪ್ಪೆಯ ಹಾಗೆ ಜಿಗಿಯುತ್ತಾ ಹೋಗುವುದರಿಂದ ಇದನ್ನು ಕಪ್ಪೆಯಾಟ ಎಂದು ಕರೆಯುತ್ತಾರೆ. ಈ ಆಟವನ್ನು ಗಂಡು ಮತ್ತು ಹೆಣ್ಣು ಮಕ್ಕಳು ಸೇರಿ ಆಡುತ್ತಾರೆ. ಎಷ್ಟು ಜನರಾದರೂ ಆಡಬಹುದು. ಒಂದು ನಿಗದಿತ ಸ್ಥಳದಲ್ಲಿ ಗೆರೆ ಹಾಕಿದ ಸ್ಥಳದ ಹತ್ತಿರ ಎಲ್ಲ ಆಟಗಾರರು ಸಾಲಾಗಿ ಕುಳಿತುಕೊಳ್ಳುವರು. ಅವರು ಕುಪ್ಪಳಿಸುತ್ತಾ ತಲುಪಲು ನಿರ್ದಿಷ್ಟವಾದ ಸ್ಥಳವನ್ನು ಸೂಚಿಸುತ್ತಾರೆ. ಓಡಲು ಸೀಟಿ ಊದಿದ ತಕ್ಷಣ ಕುಳಿತಲ್ಲಿಂದ ಕಪ್ಪೆಯಂತೆ ಜಿಗಿದು ನಿರ್ದಿಷ್ಟವಾದ ಸ್ಥಳವನ್ನು ಮುಟ್ಟಬೇಕು. ಯಾರು ಮೊದಲು ಮುಟ್ಟುತ್ತಾರೋ ಅವರು ಗೆಲ್ಲುತ್ತಾರೆ.

**೭. ಹಗ್ಗ ಜಿಗಿತ :** ಈ ಆಟವನ್ನು ವಿಶೇಷವಾಗಿ ಹೆಣ್ಣು ಮಕ್ಕಳು ಆಡುತ್ತಾರೆ. ಒಬ್ಬರ ನಂತರ ಮತ್ತೊಬ್ಬರಂತೆ ಎಷ್ಟು ಜನ ಬೇಕಾದರೂ ಆಡಬಹುದಾಗಿದೆ. ಹಗ್ಗದ ಎರಡು ತುದಿಗಳನ್ನು ಎರಡು ಕೈಗಳಿಂದ ಹಿಡಿದು ಅದನ್ನು ಬೆನ್ನ ಹಿಂಬದಿಯಿಂದ ಕಾಲಿನ ಕೆಳಭಾಗದಲ್ಲಿಟ್ಟು ಒಂದೇ ಸಮನೆ ಎರಡು ಕೈಗಳಲ್ಲಿರುವ ಹಗ್ಗವನ್ನು ತಲೆಯ ಮೇಲಿನಿಂದ ಬಳಸಿ ಮುಂದುಗಡೆಗೆ ತಂದು ನೆಗೆದು ಕೆಳಗೆ ತೂರಿಸಿ ಆಡುವುದೇ ಹಗ್ಗ ಜಿಗಿತ. ಪ್ರತಿ ಬಾರಿಗೂ ಹಗ್ಗ ಹಾಕಿ ನೆಗೆಯುವಾಗ ಲೆಕ್ಕ ಹಾಕಿಕೊಳ್ಳುವುದುಂಟು. ಅಂಕಿಯನ್ನು ಎಣಿಸುತ್ತಾ ಆಟುವಾಡುವಾಗ ಹಗ್ಗ ತಗುಲಿ ನಿಂತರೆ ಮತ್ತೆ ಮೊದಲಿನಂತೆಯೇ ಲೆಕ್ಕ ಹಾಕಿ ಅಥವಾ ಒಂದು ಆಟಕ್ಕೆ ಇಂತಿಷ್ಟು ಗಿಚ್ಚಿ ಮಾಡಬೇಕು ಎಂಬ ನಿರ್ಧಾರದಂತೆ ಆಡುತ್ತಾರೆ.

ಮೂವರು ಸೇರಿಯೂ ಆಡಬಹುದಾಗಿದೆ. ಇಬ್ಬರು ಹಗ್ಗ ಹಿಡಿದುಕೊಂಡಿರುತ್ತಾರೆ. ಮತ್ತೊಬ್ಬಳು ನೆಗೆಯುವುದು. ಇಬ್ಬರು ಹಗ್ಗದ ಎರಡು ತುದಿಗಳನ್ನು ಹಿಡಿದುಕೊಂಡು ಎದುರು-ಬದುರಾಗಿ ನಿಂತು ಆಡುವರು. ಹಿಂಬದಿ ಇಲ್ಲವೇ ಮುಂಬದಿಯಿಂದ ಒಂದೇ ಸಮನೆ ತಿರುಗಿಸುತ್ತಿರುವರು. ಆಟವಾಡುವವರು ಸುಸ್ತಾಗುವವರೆಗೂ ಹಗ್ಗ ಕಾಲಿಗೆ ಸಿಕ್ಕಿ ಹಾಕಿಕೊಳ್ಳದಂತೆ ನೆಗೆಯುತ್ತಿರುವಳು. ಇಂತಿಷ್ಟು ಆಟವಾಡಬೇಕೆಂದು ನಿರ್ಧರಿಸಿಕೊಂಡಂತೆ ಯಾರು ಹೆಚ್ಚು ಆಟವಾಡುತ್ತಾರೋ ಅವರು ಗೆದ್ದಂತೆ. ರಸ್ತೆಯ ಮೇಲೆ ಒಂದು ನಿರ್ದಿಷ್ಟ ಗೆರೆಯನ್ನು ಹಾಕಿ ಎಲ್ಲಾ ಆಟಗಾರರು ಈ ಗೆರೆಯ ಮೇಲೆ ಹಗ್ಗ ಹಿಡಿದು ನಿಂತುಕೊಂಡು ಈ ಗೆರೆಯಿಂದ ಅರ್ಧ ಫರ್ಲಾಂಗ ದೂರಕ್ಕೆ ನೆಗೆಯುತ್ತಾರೆ. ಈ ಆಟ ಪಟ್ಟಣಗಳಲ್ಲಿ ಕಂಡುಬಂದರೂ ಇದು ಒಂದು ವ್ಯಾಯಾಮದ ಬಗೆಯಾಗಿದೆ. ಇದನ್ನು ಇಂಗ್ಲೀಷ್‌ನಲ್ಲಿ ಸ್ಕಿಪ್ಪಿಂಗ್ ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ದೇಹದ

ಕಸರತ್ತಿನ ಒಂದು ಬಗೆಯಾಗಿ ವ್ಯಾಯಾಮ ಶಾಲೆಗಳಲ್ಲಿ ಮತ್ತು ಮನೆಗಳಲ್ಲಿ ಈ ಸ್ಕಿಪ್ಪಿಂಗ್ ಮಾಡುವುದುಂಟು.

**೮. ಚೀಟಿ ಆಡುವುದು :** ಸಾಮಾನ್ಯವಾಗಿ ಎಷ್ಟು ಬೇಕಾದರೂ ಆಟವನ್ನು ಆಡುತ್ತಾರೆ. ಪ್ರತಿಯೊಬ್ಬರು ೪ ರಂತೆ ೪ ಚೀಟಿಯನ್ನು ಜೋಡಿಸುವ ಆಟ ಇದು. ಈ ಚೀಟಿಯಲ್ಲಿ ಹೂವಿನ ಹೆಸರು ಬರೆದು ಎಲ್ಲಾರು ಸಹ, ಆ ಎಲ್ಲ ಚೀಟಿಗಳನ್ನು ಮೇಲಕ್ಕೆ ಹಾರಿಸುತ್ತಾರೆ. ನಂತರ ಪ್ರತಿಯೊಬ್ಬರು ೪ ಚೀಟಿಗಳನ್ನು ಆಯ್ದುಕೊಳ್ಳುತ್ತಾರೆ. ನಂತರ ತೆಗೆದು ಓದುವಾಗ ಎಲ್ಲವೂ ಒಂದೇ ರೀತಿಯ ಹೆಸರುಗಳು ಯಾರಿಗೆ ಬಂದಿರುತ್ತದೋ ಅವರು ಮೊದಲ ವಿಜಯಿಗಳು. ಅಂದರೆ ಅವರಿಗೆ ಒಂದು ಸಾವಿರ ಅಂಕಗಳು. ಒಂದು ವೇಳೆ ೩ ಒಂದೇ ತರಹದ ಹೆಸರುಗಳು ಬರದೇ ಇದ್ದರೆ ಮುಂದಿನವರಿಗೆ ಆ ಚೀಟಿಯನ್ನು ಕೊಡುತ್ತಾರೆ. ಅವರು ತಮಗೆ ಬೇಕಾಗಿದ್ದರೆ ತಾವು ತೆಗೆದುಕೊಳ್ಳುತ್ತಾರೆ. ಇಲ್ಲದಿದ್ದರೆ ಪ್ರತಿಯೊಬ್ಬರು ಮುಂದಿನವರಿಗೆ ಕೊಡುತ್ತಾ ಹೋದಾಗ ಯಾರಿಗೆ ಮೊದಲು ಒಂದೇ ರೀತಿಯ ನಾಲ್ಕು ಹೆಸರು ಸೇರುತ್ತವೆಯೋ ಅವರು ಸೆಟ್ ಎಂದು ತೋರಿಸುತ್ತಾರೆ. ಅಷ್ಟೇ ಅಲ್ಲದೆ ಅವರಿಗೆ ೧೦೦೦ ಅಂಕ, ಎರಡನೆಯದಾಗಿ ಬಂದವರಿಗೆ ೯೦೦ ಅಂಕ. ಮೂರನೆಯದಾಗಿ ೮೦೦. ನಾಲ್ಕನೆಯವರಿಗೆ ಮೂರು ಸೊನ್ನೆ ಹೀಗೆ ತಮಗೆ ಸಾಕಾಗುವಷ್ಟು ಬಾರಿ ಆಡಿ ಪ್ರತಿ ಆಟದಲ್ಲಿ ತಾವು ಗಳಿಸಿರುವ ಅಂಕವನ್ನು ತಮ್ಮ ಹೆಸರಿನ ಮುಂದೆ ಪಟ್ಟಿ ಮಾಡುತ್ತಾ ಹೋಗಿ ಕೊನೆಗೆ ಲೆಕ್ಕ ಮಾಡಿ ಮೊದಲ ಸ್ಥಾನ, ಎರಡನೇ ಸ್ಥಾನ, ಮೂರನೇ ಸ್ಥಾನ ನೀಡುತ್ತಾರೆ.

**೯. ಕಲರ್ ಕಲರ್ ವಾಟ್ ಕಲರ್ :** ಎರಡು ಪಕ್ಷಗಳಾಗಿ ಮಕ್ಕಳು ಗುಂಪು ಸೇರುತ್ತಾರೆ. ಕೆಲವು ಜನರು ಸಾಲಾಗಿ ಕುಳಿತುಕೊಳ್ಳುತ್ತಾರೆ. ಇನ್ನೊಂದು ಪಕ್ಷದವರು ತಮ್ಮಲ್ಲಿ ಒಂದು ಹೂವಿನ ಹೆಸರನ್ನು ನಿಶ್ಚಿಯಿಸಿಕೊಂಡಿರುತ್ತಾರೆ. ನಂತರ ಬಂದು ಕುಳಿತ ವ್ಯಕ್ತಿಗಳಿಗೆ ಕಲರ್ ಕಲರ್ ವಾಟ್ ಕಲರ್ ಎಂದು ಹೇಳುತ್ತಾರೆ. ಆಗ ಕುಳಿತವರು ಹೂವೊ ಅಥವಾ ಬಣ್ಣ, ಗಿಡವೋ ಎಂದು ವಿಭಾಗದ ಕುರಿತು ವಿಚಾರಿಸುತ್ತಾರೆ.

**ಉದಾ:** ಆಗ ಇವರು ಹೂವೆಂದು ಹೇಳುತ್ತಾರೆ. ಅವರು ಹೂಗಳ ಬಣ್ಣದ ಹೆಸರುಗಳನ್ನು ಹೇಳುತ್ತಾ ಹೋಗುತ್ತಾರೆ. ಇವರು ಹೇಳಿದ ಕಲರ್‌ನ್ನು ಅಥವಾ ಹೂವನ್ನು ವ್ಯಕ್ತಿ ಮುಟ್ಟಬೇಕು ಇಲ್ಲವಾದರೆ ಅವರನ್ನು ಮುಟ್ಟಿ ಔಟ್ ಮಾಡುತ್ತಾರೆ.

**ಮಹಿಳೆಯರ ಆಟ :**

ಮಹಿಳೆಯರಿಗೆ ಮೀಸಲಾದ ಜೋಕಾಲಿ ಆಟ, ಚೌಕ ಬಾರ, ಕವಡೆ ಆಟ, ಆನೆಕಟ್ಟು ಆಟ, ಪಗಡೆ ಆಟ ಈ ಎಲ್ಲ ಬಗೆಯ ಆಟಗಳು ಜನಪದ ಬುದ್ಧಿ ಕೌಶಲ್ಯತೆಯ ಚುರುಕುತನದ ಪ್ರತೀಕವಾಗಿದೆ.

೧. ಅಳಗುಣಿ ಮಣಿ ಅಥವಾ ಪತ್ತೆ ಮಣಿ :

ಇದಕ್ಕೆ ಅಳಗುಳಿ ಮಣಿ, ಪತ್ತೆ ಮಣಿ, ಚನ್ನೆಮಣಿ ಮುಂತಾದ ಹೆಸರುಗಳು ರೂಢಿಯಲ್ಲಿವೆ. ಇದು ಒಂದುವರೆ ಅಡಿ ಉದ್ದ, ಅರ್ಧ ಅಡಿ ಅಗಲವಿರುವ ಮರದ ನುಣುಪಾದ ಮಣಿ. ಇದರಲ್ಲಿ ಎರಡು ಬದಿಗೆ ಏಳೇಳು ಚಿಕ್ಕ ಗುಣಿಗಳಿರುತ್ತವೆ. ಮಣಿಯ ಎರಡೂ ಕಡೆಯ ತುದಿಯಲ್ಲಿ ಹುಣಸೆ ಬೀಜಗಳನ್ನಿಡಲು ಜಾಗ ಮಾಡಿರುತ್ತಾರೆ. ಮಣಿಯನ್ನು ವಿವಿಧ ಆಕಾರಗಳಲ್ಲಿ ರಚಿಸಿದ್ದು ಗ್ರಾಮೀಣರ ಕಲಾಭಿವ್ಯಕ್ತಿಯನ್ನು ಇದರಲ್ಲಿ ಕಾಣುತ್ತೇವೆ. ಇದನ್ನು ಬೀಟೆ, ಹಲಸು, ನಂದಿ ಮೊದಲಾದ ಮರಗಳಿಂದ ತಯಾರಿಸುತ್ತಾರೆ. ಇದು ಒಳಾಂಗಣ ಆಟವಾದರು, ದನ ಕಾಯುವ ಹುಡುಗರು ಹೊರಗೆ ನೆಲದಲ್ಲಿ ಗುಣಿಗಳನ್ನು ಮಾಡಿಕೊಂಡು ಆಡುವುದುಂಟು. ಕೆಲವು ದೇವಾಲಯಗಳಲ್ಲಿಯೂ ಇದರ ಗುಣಿಗಳು ಕಂಡು ಬರುತ್ತವೆ.

ಆಟ ಆರಂಭಿಸುವ ಮೊದಲು ಎರಡು ಬದಿಗಳಲ್ಲಿ ಒಬ್ಬೊಬ್ಬ ಆಟಗಾರರು ಇರುತ್ತಾರೆ. ಪ್ರತಿ ಆಟಗಾರನ ಬಳಿಯ ಏಳು ಗುಣಿಗಳು ಆಯಾ ಆಟಗಾರನಿಗೆ ಸೇರಿದ್ದು ಎಲ್ಲಾ ಗುಣಿಗಳಿಗೂ ತಲಾ ಐದು ಹುಣಸೆ ಬೀಜ ತುಂಬಿದ ನಂತರ ಆಟ ಆರಂಭಿಸಬೇಕು. ಮೊದಲ ಆಟಗಾರನ ಸರದಿ ಆರಂಭಿಸುವ ತನ್ನ ಬದಿಯ ಯಾವುದೇ ಒಂದು ಗುಣಿಯ ಎಲ್ಲ ಐದು ಬೀಜಗಳನ್ನು ತೆಗೆದು ಅದರ ಪಕ್ಕದ ಗುಣಿಯಿಂದ ಆರಂಭಿಸಿ ಅಪ್ರದಕ್ಷಿಣವಾಗಿ ಗುಳಿಗೊಂದರಂತೆ ಬೀಜ ಹಾಕುತ್ತಾ ಹೋಗಬೇಕು. ಎದುರು ಸಾಲಿನ ಗುಳಿಗೂ ಸೇರಿದಂತೆ ಎಲ್ಲ ಐದು ಬೀಜಗಳು ಮುಗಿದೊಡನೆ ಅದರ ಮುಂದಿನ ಮನೆಯಿಂದ ಎಲ್ಲ ಬೀಜಗಳನ್ನು ತೆಗೆದು ಸುತ್ತನ್ನು ಮುಂದುವರೆಸಬೇಕು. ಹಾಗೆಯೇ ಎರಡು ಮೂರು ಬಾರಿ ಮಾಡುವ ವೇಳೆಗೆ ಕೊನೆಯ ಬೀಜ ಹಾಕಿದ ಪಕ್ಕದ ಖಾಲಿ ಗುಳಿಯೊಂದು ಸಿಗುತ್ತದೆ. ಕೂಡಲೇ ಅದನ್ನು ಸವರಿ ಅದರ ಪಕ್ಕದ ಗುಳಿಯ ಎಲ್ಲ ಬೀಜಗಳನ್ನು ಅದೇ ಗುಳಿಗೆದುರಾದ ಗುಳಿಯಲ್ಲಿನ ಎಲ್ಲ ಬೀಜಗಳನ್ನು ತೆಗೆದಿಟ್ಟುಕೊಳ್ಳಬೇಕು. ಅಲ್ಲಿಗೆ ಅವನ ಒಂದು ಸರದಿ ಮುಗಿಯುತ್ತದೆ.

ಎರಡನೆಯ ಆಟಗಾರ ತನ್ನ ಸಾಲಿನ ಯಾವುದೇ ಗುಳಿಯಿಂದ ಆರಂಭಿಸಿ ಅದೇ ರೀತಿ ಒಂದಷ್ಟು ಬೀಜ ಪಡೆಯುತ್ತಾನೆ. ಹೀಗೆ ಆಡುತ್ತಿರುವಾಗ ಕೈಯಲ್ಲಿನ ಕೊನೆಯ ಬೀಜ ಹಾಕಿದ ಮುಂದಿನ ಎರಡೂ ಗುಳಿಗಳು ಖಾಲಿ ಇದ್ದರೆ ಆ ಸರದಿಯಲ್ಲಿ ಅವನ ಸಂಪಾದನೆ ಸೊನ್ನೆಯಾಗುತ್ತದೆ. ಹೀಗೆ ಆಡುವಾಗ ಯಾವುದೇ ಗುಳಿಯಲ್ಲಿ ನಾಲ್ಕು ಬೀಜಗಳು ಗುಂಪಾಗಿ ಬಿಟ್ಟರೆ ಅದಕ್ಕೆ ಕರು ಎಂಬ ವಿಶೇಷ ಹೆಸರಿದೆ. ಅದು ಅದೇ ಸರದಿಯ ಆಟಗಾರನಿಗೆ ಲಾಭ ಆಗುತ್ತದೆ. ಕರುವನ್ನು ಆತ ಎತ್ತಿಟ್ಟುಕೊಂಡು ಆಟ ಮುಂದುವರಿಸಬಹುದಾಗಿದೆ.

ಇಡೀ ಮಣಿಯ ಎಲ್ಲ ಬೀಜಗಳು ಖಾಲಿಯಾದಾಗ ಇಬ್ಬರೂ ಆಟಗಾರರಲ್ಲಿ ಯಾರ ಬಳಿ ಅತಿ ಹೆಚ್ಚು ಬೀಜಗಳು ಸಂಗ್ರಹವಾಗಿಯೋ ಅವರೇ ಗೆದ್ದಂತೆ. ಆದರೆ ಆಟವನ್ನು ಇಷ್ಟಕ್ಕೆ ಮುಗಿಸದೆ ಮುಂದುವರೆಸಬಹುದು. ಹಾಗೆ ಮಾಡಲು ಕಡಿಮೆ ಬೀಜಗಳನ್ನು ಗಳಿಸಿದವರು,

ಅಷ್ಟನ್ನು ತಮ್ಮ ಕಡೆಯ ಗುಳಿಗಳಿಗೆ ತಲಾ ಐದರಂತೆ ತುಂಬಿ ಉಳಿದವನ್ನು ತಮ್ಮಲ್ಲೇ ಇಟ್ಟುಕೊಳ್ಳುತ್ತಾರೆ. ಆಗ ಅವರು ಸಾಲಿನಲ್ಲಿ ಖಾಲಿ ಉಳಿಯುವ ಗುಳಿಗಳು ಲೆಕ್ಕಕ್ಕಿಲ್ಲ. ಅಂದರೆ ಆ ಗುಳಿಗಳನ್ನು ಮುಚ್ಚಿದೆ ಎಂದರ್ಥ. ಹಾಗಾದಾಗ ಗೆದ್ದ ಆಟಗಾರ ತನ್ನ ಸಾಲಿನ ಎಲ್ಲ ಖಾಲಿ ಮನೆಗಳಿಗೂ ಐದೈದು ಬೀಜ ಹಾಕಿ ಉಳಿದವನ್ನು ಅವನೇ ಇಟ್ಟುಕೊಂಡು ಮತ್ತೆ ಆಟ ಮುಂದುವರೆಸುತ್ತಾನೆ. ಒಬ್ಬ ಆಟಗಾರ ಪಾಪರ್ ಆಗುವವರೆಗೂ ಇದೇ ಚಕ್ರ ಮುಂದುವರೆಯುತ್ತದೆ.

**ಜೋಡಿ ಆಟ :** ಮೇಲಿನ ಆಟದ ನಿಯಮಗಳೇ ಇದಕ್ಕೆ ಅನ್ವಯವಾಗುತ್ತವೆ. ಆದರೆ ಇಲ್ಲಿ ಒಂದೊಂದು ಬೀಜ ಹಾಕುವುದಿಲ್ಲ. ಬದಲಾಗಿ ಆರಂಭದ ಗುಳಿಯು ಐದು ಬೀಜಗಳು ಅದರ ಪಕ್ಕದ ಗುಳಿಗೆ ಮೂರನೆಯದರ ಐದು ಬೀಜಗಳು ನಾಲ್ಕನೆಯ ಗುಳಿಯಲ್ಲಿ ಹಾಗೆ ಮುನ್ನಡೆದಾಗ ಸಿಕ್ಕ ಖಾಲಿ ಗುಳಿಯ ಪಕ್ಕದ ಹಾಗೂ ಆ ಪಕ್ಕದ ಗುಳಿಯ ಎದುರು ಗುಣಿಯ ಎಲ್ಲ ಬೀಜಗಳು. ಆಟಗಾರನಿಗೆ ಈ ಆಟದಲ್ಲಿ ಕರು ಸಿಗುವ ಪ್ರಶ್ನೆಯೇ ಇರುವುದಿಲ್ಲ. ಒಬ್ಬ ಆಟಗಾರ ಖಾಲಿಯಾಗುವವರೆಗೂ ಮುನ್ನಡೆಯುತ್ತದೆ.

**ಕಾಶಿ ಆಟ :** ಈ ಬಗೆಯಲ್ಲಿ ಪ್ರತಿ ಸಾಲಿನ ಮಧ್ಯದ ಗುಳಿಯೇ ಕಾಶಿ. ಪ್ರತಿ ಆಟಗಾರನ ಬದಿಯ ಕಾಶಿಗೂ ಒಂದೊಂದು ಬೀಜ ಮಾತ್ರ. ಉಳಿದವಕ್ಕೆಲ್ಲ ತಲಾ ಐದು ಉಳಿದ ಎಲ್ಲ ನಿಯಮಗಳು ಸವರುವ ಆಟದಂತೆಯೇ ಆದರೂ ಸಿಗುವ ಖಾಲಿ ಗುಳಿಯ ಪಕ್ಕದ ಗುಳಿ ಕಾಶಿ ಗುಳಿಯಾಗಿ ಬಿಟ್ಟರೆ ಅದರಲ್ಲಿ ಒಂದು ಬೀಜ ಉಳಿಸಿ ಬಾಕಿ ಬೀಜಗಳನ್ನು ತೆಗೆದಿಟ್ಟುಕೊಳ್ಳಬೇಕು. ಗುಳಿಗೊಂದರಂತೆ ಹಾಕುತ್ತಾ ಬಂದಾಗ ಕೊನೆಯ ಬೀಜವೇನಾದರೂ ಕಾಶಿ ಗುಣಿಯ ಹಿಂದಿನದಕ್ಕೆ ಮುಗಿದು ಹೋದರೆ ಸರದಿ ಹೋಗುತ್ತದೆ. ಇದರಲ್ಲೂ ಕರು ಉಂಟು. ಮೂರು ಬೀಜಗಳು ಆಯಾ ಸರದಿ ಆಟಗಾರನಿಗೆ ಅವು ಲಾಭವಾಗುತ್ತವೆ. ಒಬ್ಬರ ಹತ್ತಿರ ಬೀಜ ಖಾಲಿ ಆಗುವವರೆಗೂ ಆಟ ಮುಂದುವರೆಯುತ್ತದೆ. ಆಟದಲ್ಲಿ ಸೋತರೆ ಕೆಲವು ಕಡೆ ಕೈಕಾಯಿಸುವುದು. ಸೋತವರ ಮೂಗು ಹಿಡಿದು ಕೈಗೆ ಹೊಡೆಯುವುದು, ಇತ್ತೀಚಿನ ದಿನಗಳಲ್ಲಿ ಹಣವನ್ನು ಕಟ್ಟಿ ಆಡುತ್ತಾರೆ.

ಪತ್ತಮಣಿ ಆಟಕ್ಕೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳಿವೆ. ಈ ಆಟವನ್ನು ರಾತ್ರಿ ಆಡುವಂತಿಲ್ಲ. ಹೆಣ್ಣು ಮಕ್ಕಳು ಈ ಆಟವಾಡಿದರೆ ಬೇಗ ಮದುವೆಯಾಗುವುದೆಂಬ ನಂಬಿಕೆಯಿದೆ. ಕೆಲವು ಸಮುದಾಯದಲ್ಲಿ ದಂಪತಿಗಳಿಂದ ಈ ಆಟ ಆಡಿಸುವುದಿದೆ. ಹಾಗಾಗಿ ಕೆಲವೆಡೆಗೆ ಅಳಗುಣಿಮಣಿಯನ್ನು ಹೆಣ್ಣು ಮಕ್ಕಳಿಗೆ ಬಳುವಳಿಯಾಗಿ ನೀಡುವರು. ಈ ಆಟವನ್ನು ಮಕ್ಕಳಿಂದ ವೃದ್ಧರಾದಿಯಾಗಿ ಆಡುತ್ತಾರೆ. ಇದು ಹೆಣ್ಣುಮಕ್ಕಳಿಗೆ ಪ್ರಿಯವಾದ ಆಟವಾಗಿದೆ. ಈ ಆಟದ ಮೂಲಕ ಲೆಕ್ಕಚಾರ ಮಾಡುವ ಕೌಶಲ್ಯ ವೃದ್ಧಿಸಿ ಪ್ರತಿ ಆಟಗಾರರಲ್ಲಿ ಮಾನಸಿಕ ಬೆಳವಣಿಗೆಯಾಗಿ ಬುದ್ಧಿ ಚುರುಕುಗೊಳ್ಳುವಂತೆ ಮಾಡುವುದಾಗಿದೆ. ಪ್ರತಿ ಆಟಗಾರರಲ್ಲಿ ಮಾನಸಿಕ ಬೆಳವಣಿಗೆಯಾಗಿ ಬುದ್ಧಿ ಚುರುಕುಗೊಳ್ಳುವಂತೆ ಮಾಡುವುದಾಗಿದೆ. ಉತ್ತಮ ಮನೋರಂಜನೆಯೊಂದಿಗೆ ಮುಂದಾಲೋಚನೆ ಶಕ್ತಿ ಬೆಳವಣಿಗೆಯಾಗುತ್ತದೆ.

**ಆನೆ ಕಲ್ಲಾಟ :** ಈ ಆಟವನ್ನು ಹೆಣ್ಣು ಮಕ್ಕಳು ಹೆಚ್ಚಾಗಿ ಆಡುವರು. ಇಲ್ಲಿ ಆಟಗಾರರ ಮಿತಿ ಇರುವುದಿಲ್ಲ. ಈ ಆಟವನ್ನು ಪಳ್ಳಂ, ಹರಳಾಟ, ಕಲ್ಲಾಟ ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ನುಣುಪಾದ ಐದು ಬೆಣಚುಕಲ್ಲುಗಳನ್ನು ಈ ಆಟಕ್ಕೆ ಬಳಸುತ್ತಾರೆ.

ಈ ಆಟ ಆಡಿದರೆ ಮಳೆ ಬರುವುದಿಲ್ಲ ಎನ್ನುವ ನಂಬಿಕೆ ಜನಪದರಲ್ಲಿದೆ. ಐದು ಕಲ್ಲುಗಳನ್ನು ಬಲಗೈ ಹಿಡಿಯ ಹಿಡಿಯಲ್ಲಿ ತೆಗೆದುಕೊಂಡು ನೆಲದ ಮೇಲೆ ಎಸೆಯುವುದು. ಇವುಗಳಲ್ಲಿ ಒಂದು ಕಲ್ಲನ್ನು ಎತ್ತಿ ಮೇಲೆಸೆದು ಅದು ಕೆಳಗೆ ಬೀಳುವಷ್ಟರಲ್ಲಿಯೇ ಕೆಳಗಡೆ ಇರುವ ಮತ್ತೊಂದು ಕಲ್ಲನ್ನು ಕೈಗೆ ತೆಗೆದುಕೊಂಡು ಬೀಳುತ್ತಿರುವ ಕಲ್ಲನ್ನು ಹಿಡಿದುಕೊಳ್ಳಬೇಕು. ಒಂದು ವೇಳೆ ಕಲ್ಲು ಕೆಳಗೆ ಬಿದ್ದರೆ ಆಟ ಹೋದಂತೆ. ಒಂದೊಂದರಂತೆ ನಾಲ್ಕು ಕಲ್ಲುಗಳನ್ನು ಎತ್ತಿಕೊಂಡು ಮೊದಲಿನಂತೆ ಆಟವಾಡಿದರೆ ಅಲ್ಲಿಗೆ ಬಂದು ಗಿಚ್ಚಿಯಾದಂತೆ. ಅಂದರೆ ಒಂದು ಆಟವನ್ನು ಗೆದ್ದಂತಾಗುವುದು.

ಕಲ್ಲನ್ನು ಮೇಲೆಸೆದು ಕೆಳಗೆ ಇರುವ ಕಲ್ಲನ್ನು ತೆಗೆದುಕೊಳ್ಳುವಾಗ ಪ್ರತಿ ಆಟದಲ್ಲಿ ಒಂದು ಎರಡು, ಮೂರು ನಾಲ್ಕು ಕಲ್ಲುಗಳನ್ನು ಸರಿಯಾಗಿ ಎತ್ತಿಕೊಂಡು ನಂತರ ಐದು ಕಲ್ಲುಗಳನ್ನು ಒಟ್ಟಾಗಿ ಸ್ವಲ್ಪ ಮೇಲಕ್ಕೆಸೆದು ಬಲಗೈಯಿಂದ ನೆಲತಟ್ಟಿ, ಎರಡು ಕೈ ಬೊಗಸೆಯಲ್ಲಿ ಹಿಡಿಯುವುದರಿಂದಲೂ ಆಟ ಗೆಲ್ಲುವುದು ಕಂಡು ಬರುತ್ತದೆ. ಕಲ್ಲು ಎತ್ತುವಾಗ ಅವು ಕೆಳಕ್ಕೆ ಬೀಳಬಾರದು. ಎತ್ತಿಕೊಳ್ಳುವಾಗ ಒಂದು ಕೈ ಮತ್ತೊಂದು ಕೈಗೆ ಸೋರಬಾರದು. ಮೊದಲು ಯಾರು ಈ ಎಲ್ಲ ಆಟಗಳನ್ನು ಯಶಸ್ವಿಯಾಗಿ ಆಡುತ್ತಾರೋ ಅವರು ಗೆಲುವು ಸಾಧಿಸಿದಂತೆ.

**ಚೌಕಾಬಾರ :** ಈ ಆಟವನ್ನು ಇಬ್ಬರು ಇಲ್ಲವೆ ನಾಲ್ಕು ಜನ ಆಡಬಹುದಾಗಿದೆ. ಮೊದಲಿಗೆ ನೆಲ ಅಥವಾ ಬಂಡೆಯ ಮೇಲೆ ಚೌಕಾಬಾರದ ಚಿತ್ತಾರ ಬರೆಯುತ್ತಾರೆ. ಒಂದು ಕಡೆ ಬಿಳಿ ಇನ್ನೊಂದೆಡೆ ಕಪ್ಪು ಇರುವಂತೆ ತಯಾರಿಸಿದ ನಾಲ್ಕು ಅಥವಾ ಆರು ಹುಣಸೆ ಬೀಜದ ಪಚ್ಚಿಗಳನ್ನು ತೆಗೆದುಕೊಂಡು ಆಡುವರು. ಕೆಲವರು ಕವಡೆಗಳಿಂದ ಆಡುತ್ತಾರೆ. ಇದರಲ್ಲಿ ಎರಡು ಬಗೆಯ ಆಟಗಳಿವೆ.

**೧. ಐದು ಮನೆಯಾಟ :** ನೆಲದ ಮೇಲೆ ಇಲ್ಲ ರಟ್ಟಿನ ಮೇಲೆ ಐದು ಮನೆಗಳುಳ್ಳ ಐದು ಸಾಲುಗಳನ್ನು ಅಡ್ಡ ಮತ್ತು ಲಂಬವಾಗಿ ಬರೆಯುವುದು. ಮೊದಲನೆಯ ಸಾಲಿನ ಮೂರನೆಯ ಮನೆ ಹಾಗೂ ಮೂರನೆಯ ಸಾಲಿನ ಒಂದು, ಮೂರು, ಐದನೆಯ ಮನೆಗಳಿಗೂ ಹಾಗೂ ಐದನೆಯ ಸಾಲಿನ ಮೂರನೆಯ ಮನೆಗಳನ್ನು ಘಟ್ಟದ ಮನೆ ಎನ್ನುವರು. ಈ ಮನೆಗಳ ಗುರುತಿಗೆ ಎಕ್ಸ್ ತರಹ ಗುರುತು ಮಾಡಬೇಕು. ಈ ಘಟ್ಟದ ಮನೆಯಲ್ಲಿ ಕಾಯಿಗಳನ್ನಿಟ್ಟುಕೊಂಡು ಆಟವಾಡುವುದು. ಮಧ್ಯದ ಘಟ್ಟದ ಮನೆಯಲ್ಲಿ ಕಾಯಿಗಳನ್ನು ಹಣ್ಣು ಮಾಡುವುದು.

ಮೊದಲ ಆಟವಾಡುವವರು ನಾಲ್ಕು ಜನ ಆಡುವುದಾದರೆ ಒಬ್ಬೊಬ್ಬರು ಒಂದೊಂದು ಘಟ್ಟದ ಬಳಿ, ಇಬ್ಬರು ಆಡುವುದಾದರೆ ಎದುರು-ಬದುರಾಗಿ ಕುಳಿತುಕೊಳ್ಳುತ್ತಾರೆ. ಪ್ರತಿ

ಆಟಗಾರರು ಪ್ರತಿ ಘಟ್ಟದಲ್ಲಿ ನಾಲ್ಕು ನಾಲ್ಕು ಕಾಯಿಗಳನ್ನು ಇಡುತ್ತಾರೆ. ಕಾಯಿ ಎಂದರೆ ಹುಣಸೆ ಬೀಜ, ಸಣ್ಣಕಲ್ಲು, ಬಳೆಚೂರು ಇತ್ಯಾದಿ. ಪ್ರತಿಯೊಬ್ಬರು ಬೇರೆ ಬೇರೆ ರೀತಿಯ ಕಾರ್ಯಗಳನ್ನು ಇಟ್ಟುಕೊಳ್ಳಬೇಕು. ಹೀಗೆ ಸಿದ್ಧತೆ ಮಾಡಿಕೊಂಡ ಮೇಲೆ ಯಾರಿಂದ ಆಟ ಆರಂಭಿಸುವುದೆಂದು ನಿರ್ಧರಿಸಿಕೊಳ್ಳುತ್ತಾರೆ. ಹುಣಸೆ ಬೀಜವನ್ನು ನೆಲಕ್ಕೆ ತಿಕ್ಕಿ ಬಿಳುಪು ಬಂದ ಮೇಲೆ ಅದರಿಂದ ಆಟವನ್ನು ಆಡುತ್ತಾರೆ.

ಬಿಳಿ ಎಷ್ಟು ಬಿದ್ದಿರುವುದೋ ಅಷ್ಟು ಸಂಖ್ಯೆಯನ್ನು ಲೆಕ್ಕ ಮಾಡಿ ಅಷ್ಟು ಮನೆಯನ್ನು ತಮ್ಮ ಮನೆಯ ಬಲದಿಂದ ನಡೆಸಬೇಕು. ಅನಂತರ ಮುಂದಿನವರು ಆಡುತ್ತಾರೆ. ಚೌಕಾ ಮತ್ತು ಬಾರ, ದಾಯ (ಒಂದು) ಬಿದ್ದಾಗ ಕಾಯಿ ಕಡಿದಾಗ ಮಾತ್ರ ಇನ್ನೊಂದು ಆಟ ಹೆಚ್ಚಿಗೆ ಆಡುತ್ತಾರೆ. ಎದುರಾಳಿಯ ಕಾಯಿ ಕಡಿಯದೆ ಒಳ ಚೌಕಗಳಿಗೆ ನುಗ್ಗಿಸುವಂತಿಲ್ಲ. ಒಳಕ್ಕೆ ಎಡ ಭಾಗದಿಂದಲೇ ಪ್ರವೇಶಿಸಬೇಕು. ಬೇರೆಯವರ ಕಾಯಿ ಯಾವ ಮನೆಯಲ್ಲಿರುತ್ತದೋ ಅದಕ್ಕನುಗುಣವಾದ ಮೌಲ್ಯದ ಕವಡೆ ಬಿದ್ದರೆ ಮಾತ್ರ ಕಾಯಿ ಕಡಿಯುವ ಅವಕಾಶ. ಕಡಿದ ಕಾಯಿಯನ್ನು ಎದುರಾಳಿಯ ಘಟ್ಟಕ್ಕೆ ಇಡಬೇಕು. ಹೀಗೆ ಸರದಿಯ ಪ್ರಕಾರ ಪಚ್ಚಿಗಳನ್ನು ಹಾಕುತ್ತಾ ಕಾಯಿ ನಡೆಸುತ್ತಾ ಎದುರಾಳಿ ಕಾಯಿ ಸಿಕ್ಕಾಗ ಹೊಡೆಯುತ್ತ ಮುಂದುವರಿದರೆ ಆಟಕ್ಕೆ ಕಳೆ ಏರುತ್ತದೆ. ಕಾಯಿ ಮಧ್ಯದ ಮನೆ ತಲುಪಿದಾಗ ನಾಲ್ಕು ಕಾಯಿಗಳನ್ನು ಮೊದಲು ಹಣ್ಣು ಮಾಡಿದವರು ಗೆಲ್ಲುತ್ತಾರೆ.

ಚೌಕಾಬಾರ ಆಟವು ಆಸಕ್ತಿದಾಯಕ ಮನೋರಂಜನೆ ನೀಡುವುದು, ಯಾವುದನ್ನು ಮುಂದುವರೆಸಿದರೆ ಏನಾಗುತ್ತದೆ ಎಂಬ ಮುಂದಾಲೋಚನೆಯ ಶಕ್ತಿ ವೃದ್ಧಿಸಿ ತಾರ್ಕಿಕ ಮನೋಭಾವ ಬೆಳೆಯುತ್ತದೆ. ಎಣಿಕೆ ಹಾಗೂ ಕೊಡುವ ಕ್ರಿಯೆ ರೂಢಿಗತವಾಗುತ್ತದೆ. ಮಾನಸಿಕ ಬೆಳವಣಿಗೆ ಬುದ್ಧಿ ಮಟ್ಟ ಚುರುಕಾಗಿಸುವುದಾಗಿದೆ.

**ಪಗಡೆಯಾಟ** : ಮಹಾಭಾರತದಲ್ಲಿ ಧರ್ಮರಾಯ ಈ ಆಟದ ಮೂಲಕ ತನ್ನ ಸರ್ವಸ್ವವನ್ನು ಸೋತಿದ್ದರಿಂದ ಪಗಡೆ ಆಟ ದ್ಯೂತಕ್ಕೆ ಸಮನಾರ್ಥಕವಾಗಿ ಬಳಸುತ್ತಾರೆ. ಆದರೆ ಪಗಡೆಯಾಟಕ್ಕೆ ಯಾವುದೇ ಪಣ ಒಡ್ಡದೆಯೂ ಈ ಆಟವನ್ನಾಡಿ ಮನೋರಂಜನೆ ಪಡೆಯಬಹುದಾಗಿದೆ. ಸೀಮೆ ಸುಣ್ಣದಿಂದ ಅಥವಾ ಇದ್ದಿಲಿನಿಂದ ನೆಲದ ಮೇಲೆ ಬರೆದುಕೊಂಡು ಇಬ್ಬರಾಗಲೀ, ನಾಲ್ಕು ಜನರಾಗಲೀ ಆಡಬಹುದಾಗಿದೆ. ಪ್ರತಿ ಆಟಗಾರರಿಗೆ ಎರಡು ತೆರನಾದ ತಲಾ ಆರು ಕಾಯಿಗಳು ದಾಳ ಹಾಕಲು ಆರು ಕವಡೆ ಇಲ್ಲವೆ ಹುಣಸೆ ಬೀಜದಿಂದ ತೇದಿದ ಆರು ದಾಳಗಳು ಈ ಆಟಕ್ಕೆ ಬೇಕಾಗುತ್ತವೆ. ಹಾಸಿನ ಪ್ರತಿ ಭಾಗದಲ್ಲೂ ಹದಿನೆಂಟು ಮನೆಗಳಿರುತ್ತವೆ. ಮಧ್ಯದ ಸಾಲಿನ, ಆರಂಭ ಮತ್ತು ಕೊನೆಯ ಮನೆಗಳೂ ಘಟ್ಟದ ಮನೆಗಳಾಗಿರುತ್ತವೆ.

ಸರದಿ ಪ್ರಕಾರ ಆಟ ಆರಂಭವಾದ ಮೇಲೆ ಆಟಗಾರನ ಕಾಯಿಯು ಹಾಸಿನ ನಾಲ್ಕು ಭಾಗಗಳು ಕೂಡಿಕೊಂಡಂತೆ ದೊಡ್ಡದಾದ ಚೌಕದ ಎಕ್ಸ್ ಆಕಾರದ ಮನೆಯಿಂದ

ಹೊರಡಿಸಬೇಕಾಗುತ್ತದೆ. ದಾಳಗಳನ್ನು ಹಾಕುವಾಗ ಹೊರಡಿಸಬೇಕು. ಎಲ್ಲ ಕಾಯಿಗಳು ಹೀಗೆ ಮಧ್ಯದ ಸಾಲಿನಿಂದ ಹೊರಬಂದ ಮೇಲೆ ಒಂದು ಬಿದ್ದರೆ ಅದರ ಮೌಲ್ಯ ಹತ್ತು ಸಂಖ್ಯೆಯ ಮನೆಗಳ ಕಾಯಿಯನ್ನು ಚಲಿಸಬಹುದು. ಇದನ್ನೇ ದಶ್ಯ ಎಂದು ಕರೆಯುತ್ತಾರೆ. ಎಲ್ಲಾ ದಾಳಗಳು ಕಪ್ಪಾಗಿ ಬಿದ್ದರೆ ಅದನ್ನು ಬಾರ ಎಂದು ಕರೆದು ಅದರ ಮೌಲ್ಯ ಹನ್ನೆರಡಾಗಿರುತ್ತದೆ. ಹೀಗೆ ಎಲ್ಲಾ ಕಾಯಿಗಳನ್ನು ಮಧ್ಯದ ಮನೆಯಿಂದ ಹೊರಟು ಬಲಗಡೆಯಿಂದ ಹಾಸಿನ ನಾಲ್ಕು ಭಾಗಗಳನ್ನು ಸುತ್ತಿಕೊಂಡು ಕಾಯಿ ಹೊರಟ ಆರಂಭದ ಮಧ್ಯ ಸಾಲಿನ ಎಡ ಭಾಗದಿಂದ ಸುತ್ತು ತಿರುಗುವುದರೊಳಗೆ ಕಡತ ಮಾಡಿಕೊಂಡು ಕಾಯಿಗಳನ್ನು ಹಣ್ಣು ಮಾಡಬೇಕಾದ ಘಟ್ಟದ ಮನೆಗಳಲ್ಲಿ ಎದುರಾಳಿಯ ಕಾಯಿಯನ್ನು ಕಡಿಯಲು ಬರುವುದಿಲ್ಲ. ಹೀಗೆ ಸರಳವಾದ ನಿಯಮಗಳಿಂದ ಕೂಡಿದ ಆಟದಲ್ಲಿ ಯಾರು ತಮ್ಮ ಎಲ್ಲ ಕಾರ್ಯಗಳನ್ನು ಮಾಡಲು ಹಣ್ಣು ಮಾಡುತ್ತಾರೋ ಅವರೇ ಗೆದ್ದಂತೆ.

ಈ ರೀತಿಯಾಗಿ ಹೆಣ್ಣುಮಕ್ಕಳು ಚಿಕ್ಕವರಿದ್ದಾಗ ಎಲ್ಲ ಆಟಗಳನ್ನು ಆಡುವ ಸ್ವತಂತ್ರವಿದ್ದು, ಬೆಳೆಯುತ್ತಾ ಹೋದರೆ ಅವಳು ಆಡಲು ಓಣಿಯನ್ನು ಬಿಟ್ಟು ಮನೆಯ ಒಳಗೆ ಆಡುವ ಆಟಗಳಿಗೆ ಸೀಮಿತವಾಗುತ್ತಾಳೆ. ಗಂಡು ಮಕ್ಕಳ ಆಟಗಳಿಗೆ ಹೋಲಿಸಿದಾಗ ಹೆಣ್ಣು ಮಕ್ಕಳ ಆಟಗಳ ಸಂಖ್ಯೆ ಕಡಿಮೆ. ಸಂಸಾರಿಕ ಜವಾಬ್ದಾರಿಯನ್ನು ನಿರ್ವಹಿಸತೊಡಗುವುದರಿಂದ ಬೀದಿಗಿಳಿಯುವ ಅವಕಾಶದಿಂದ ಹೆಣ್ಣು ಮಕ್ಕಳು ವಂಚಿತರಾಗುತ್ತಾರೆ. ಋತುಮತಿ, ಮದುವೆ ಆಗುತ್ತಿದ್ದಂತೆಯೇ ಅವರ ಕ್ರೀಡಾ ಲೋಕ ಸ್ಥಗಿತವಾಗಿ ಬಿಡುತ್ತದೆ. ಆದರೆ ಎಲ್ಲ ಮಹಿಳೆಯರಿಗಲ್ಲಾ, ಕೆಲವು ಬೆರಳೆಣಿಕೆಯಷ್ಟು ಹೆಣ್ಣು ಮಕ್ಕಳು ಆಟಗಳಲ್ಲಿ ರಾಜ್ಯಮಟ್ಟ, ರಾಷ್ಟ್ರಮಟ್ಟದ ಆಟಗಳಲ್ಲಿ ಗೆದ್ದು ಪದಕಗಳನ್ನು ಪ್ರಶಸ್ತಿಗಳನ್ನು ಗಳಿಸಿಕೊಂಡಿದ್ದಾರೆ. ಆದರೆ ಹಳ್ಳಿಯ ಹೆಣ್ಣು ಮಕ್ಕಳಿಗೆ ಇನ್ನೂ ಆಟ ಆಡುವುದರ ಬಗ್ಗೆ ನಿರ್ಬಂಧವಿದೆ. ಆದರೆ ಜನಪದಗಳಲ್ಲಿ ಬಾಲ್ಯದ ಆಟದ ಅನುಭವಗಳನ್ನಷ್ಟೇ ಸುಖಿಸುತ್ತಾ ಮನೆಯ ಒಳಭಾಗವನ್ನು ಕ್ರೀಡಾಂಗಣವೆಂದು ಪರಿಗಣಿಸಿಕೊಂಡು ಆನೆಕಲ್ಲಾಟ, ಚೌಕಬಾರ, ಪಗಡೆಯಾಟ, ಅಳಗುಣ ಮಣಿ ಮುಂತಾದ ಆಟಗಳಿಗೆ ಸೀಮಿತವಾಗಿ ಬಿಡುತ್ತದೆ. ಆದರೆ ಮನೆಯಲ್ಲಿ ಹಿರಿಯರು ಆ ಆಟಗಳನ್ನು ಸಹ ಹೆಣ್ಣು ಮಕ್ಕಳು ಆಡುವುದಕ್ಕೆ ಬಿಡುವುದಿಲ್ಲ. ಮಹಿಳೆಯರು ಕೇವಲ ವಿರಾಮದ ವೇಳೆಯಲ್ಲಿ ಅಂದರೆ ತಮ್ಮ ಜೀವನದಲ್ಲಿ ದಿನವಿಡೀ ಹೊಲ ಮನೆಗಳಲ್ಲಿ ದುಡಿದು ದಣಿದ ಜೀವಕ್ಕೆ ಮನೋರಂಜನೆಯ ಅನಿವಾರ್ಯತೆ ಇದ್ದು ಮನಸ್ಸನ್ನು ಉಲ್ಲಾಸಗೊಳಿಸಿಕೊಳ್ಳಲು, ಸಂತೋಷ ಪಡಿಸಿಕೊಳ್ಳುವುದಕ್ಕಾಗಿ ಬೇಸಿಗೆಯಲ್ಲಿ ಹೊಲದ ಕೆಲಸಗಳು ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಮನೆಯ ಎಲ್ಲ ಕೆಲಸಗಳನ್ನು ಮುಗಿಸಿ ಆಟದಲ್ಲಿ ತೊಡಗಬೇಕು. ಇಲ್ಲವಾದರೆ ಮನೆಯಲ್ಲಿರುವ ಅಜ್ಜಿ, ಅಮ್ಮ, ಹಿರಿಯ ವ್ಯಕ್ತಿಗಳಿಂದ ಒಂದೇ ಸಮನೇ ಬೈಗಳ ಸುರಿ ಮಳೆ ಸುರಿಸುತ್ತಾರೆ. ಒಂದೆರೆಡು- ಮೂರು ಬಾರೀ ಆಟವಾಡುತ್ತಲೇ ಇದ್ದರೆ ಮನೆಯಲ್ಲಿ ಎಷ್ಟು ಕೆಲಸವಿದೆ ಮಾಡುವುದನ್ನು ಬಿಟ್ಟು ಎಲ್ಲರನ್ನು ಸೇರಿಸಿಕೊಂಡು

ಆಟವಾಡುತ್ತಾಳೆ. ಕೆಲಸ ಕಡಿಮೆಯಾಗಿದೆ ಇನ್ನೂ ಇತ್ಯಾದಿಯಾಗಿ ಗೊಣಗುತ್ತಾರೆ. ಹೆಣ್ಣು ಮೇಲೆ ಹೇಳಿದ ಆಟಗಳನ್ನು ಆಡುತ್ತಾ ಇದ್ದರೆ ಮನೆ ಕೆಲಸ ಮಾಡುವುದು ಕಡಿಮೆ ಮಾಡುತ್ತಾಳೆ ಎನ್ನುವ ಉದ್ದೇಶದಿಂದ ಮಳೆ ಬರುವುದಿಲ್ಲ ಎಂದು ಅವೈಜ್ಞಾನಿಕ ಕಾರಣವನ್ನು ಹೇಳಿ ಮಹಿಳೆ ಆಟ ಆಡುವುದನ್ನು ಸಹ ತುಂಬಾ ಹೊತ್ತು ಆಡಲು ಬಿಡುವುದಿಲ್ಲ.

ಹಲವಾರು ರೀತಿಯ ಆಟಗಳನ್ನು ಅವರು ಕಂಡುಕೊಂಡರು. ಈ ಆಟಗಳನ್ನು ಗಂಡಸರಿಗೆ ಸೀಮಿತವಾದ ಆಟಗಳು ಮಹಿಳೆಯರಿಗೆ ಸೀಮಿತವಾದ ಆಟಗಳೆಂದು ನಿರ್ದಿಷ್ಟ ಪಡಿಸಲಾಗಿದೆ.

**೫.೨. ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆ :**

'ಕಾಯಿಲೆ ಮನುಷ್ಯನಿಗೆ ಬಾರದೇ ಮರಕ್ಕೆ ಬರುತ್ತದೆಯೇ' ಎಂಬ ನಾಣ್ಣುಡಿಯಂತೆ ಮಾನವನಿಗೆ ನಿರಂತರವಾಗಿ ಕಾಡುವ ಒಂದಿಲ್ಲೊಂದು ರೋಗ ರುಜಿನಗಳು ಕಾಡುತ್ತವೆ. ಕಾಯಿಲೆಗಳಿಗೆ ಪ್ರಂಪಚದ ಇಂದಿನ ವೈದ್ಯ ಪದ್ಧತಿಗಳಿಗೆ ತಾಯಿಬೇರು ಆಗಿರುವ ಜನಪದ ವೈದ್ಯ ಜನ ಎಷ್ಟೇ ಮುಂದುವರೆದರು ಚಿಕ್ಕ ಪುಟ್ಟ ಕಾಯಿಲೆಗಳಿಗೆ ಆಸ್ಪತ್ರೆಗೆ ಹೋಗದೇ ಪ್ರಸ್ತುತ ದಿನಗಳಲ್ಲಿಯು ಸಹ ಮನೆ ಮದ್ದು ಉಪಯೋಗಿಸುತ್ತಾರೆ. ವೈದ್ಯ ವಿದ್ಯೆ ಮಾನವನಷ್ಟೆ ಪ್ರಾಚೀನವಾದದ್ದು ಮತ್ತು ಮಾನವನೊಂದಿಗೆ ಹುಟ್ಟಿ ಬಂದಿರುವಂತಹದ್ದು ತಲೆಮಾರಿನಿಂದ ತಲೆಮಾರಿಗೆ ಪ್ರಸಾರವಾಗಿ ಬಂದಿರುವಂಥದು. ಮೌಖಿಕ ಪ್ರಸಾರದಿಂದ ಮತ್ತು ರೂಢಿಯಿಂದ ಸಾಂಪ್ರದಾಯಿಕವಾಗಿ ಮುಂದುವರಿದ ವಿಧಾನ ಪ್ರಕೃತಿಯೇ ಔಷಧಾಗಾರ ಪ್ರಕೃತಿಯಿಂದಲೇ ಮನುಷ್ಯ ತನಗೆ ಬೇಕಾದ ಔಷಧಗಳನ್ನು ಆರಿಸಿಕೊಂಡಿದ್ದಾನೆ. ವೈದ್ಯ ವಿದ್ಯೆ ಸಿಂಧೂ ಸಂಸ್ಕೃತಿ, ವೇದ ಸಂಸ್ಕೃತಿಗಳು ರೂಪ ಪಡೆಯುವುದಕ್ಕಿಂತ ಮೊದಲೇ ಬುಡಕಟ್ಟು ಸಮುದಾಯಗಳಲ್ಲಿ ವೈದ್ಯ ಪದ್ದತಿ ಇತ್ತು.

ಜನಪದ ವೈದ್ಯಕ್ಕೆ ನಾಟಿ ವೈದ್ಯ, ನಾಡ ಮದ್ದು, ಗಂವಟಿ ಮದ್ದು, ಮನೆ ಮದ್ದು, ಮದ್ದು, ಗೃಹ ವೈದ್ಯ, ಜನಪದ ವೈದ್ಯ ಮುಂತಾಗಿ ಕರೆಯುತ್ತಿದ್ದು ಅದನ್ನು ನೀಡುವ ಪುರುಷ ಮತ್ತು ಮಹಿಳೆಯರಿಗೆ ಕ್ರಮವಾಗಿ ಮದ್ದುಗಾರ ಮತ್ತು ಮದ್ದುಗಾರ್ತಿ, ಬೈದ್ಯ-ಬೈದಿತಿ, ಬೆಜ್ಜ-ಬೆಜಗ್ತಿ ಎಂದು ಹೆಸರುಗಳಿವೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಗ್ರಾಮೀಣರು ವೈದ್ಯಕ್ಕೆ ಮದ್ದು ಎಂದು ಕರೆಯುವುದೇ ಹೆಚ್ಚು. ಮದ್ದು ಎನ್ನುವ ಶಬ್ದವು ಮರಂದು>ಮರ್ದು>ಮದ್ದು[ವನಸ್ಪತಿ-ಸಸ್ಯ]ದಿಂದ ಎಂಬ ಅರ್ಥವನ್ನು ಹೊರಗೆಡವಿ ಜನಪದ ವೈದ್ಯದಲ್ಲಿ ವನಸ್ಪತಿಯ ಪಾತ್ರವನ್ನು ಸೂಚಿಸುತ್ತದೆ.

ಜನಪದರು ಔಷಧಿಗಾಗಿ ಗಿಡಮೂಲಿಕೆಗಳನ್ನೆ ಹೆಚ್ಚಾಗಿ ಬಳಸುತ್ತಾರೆ. ಗಿಡ ಮರಗಳ ಮಹತ್ವವನ್ನರಿತು ಮನೆಯ ತೋಟಗಳಲ್ಲಿ ಮದ್ದಿನ ಗಿಡ ಮರಗಳನ್ನು ಬೆಳೆಸುವ ರೂಢಿಯನಿಟ್ಟುಕೊಂಡಿದ್ದಾರೆ. ಜನಪದ ಮದ್ದಿನ ಬಳಕೆಯಲ್ಲಿ ಮಹಿಳೆಯರ ಪಾತ್ರ ಹಿರಿದು. ಅನೇಕ ಮಹಿಳೆಯರು ಹಿಂದೆ ತಮ್ಮ ಮನೆಯಲ್ಲಿ ಮದ್ದಿನ ಪೆಟ್ಟಿಗೆಯಿಟ್ಟುಕೊಂಡು ಅದರಲ್ಲಿ ಚಕ್ರಾಣಿಬೇರು, ಕೋವೆ ಬೇರು, ಇಸನಿ ಬೇರು, ಗಾಳಿ ಚಿಕ್ಕೆ, ಅವಪತಿಚಿಕ್ಕೆ ಮುಂತಾದ ಸಸ್ಯ

ಜನ್ಯ ನಾರು ಬೇರುಗಳನ್ನು ತುಂಬಿಡುತ್ತಿದ್ದರು. ಅವರ ಮನೆಯ ಸಂಬಾರ ಬಟ್ಟಲಲ್ಲಿ ಬೆಳ್ಳುಳ್ಳಿ, ಉಳಗಡ್ಡೆ, ಸಾಸಿವೆ, ಜೀರಿಗೆ, ಕರಿಮೆಣಸು, ಯಾಲಕ್ಕಿ, ಲವಂಗ, ದಾಲ್ಚಿನಿ ಮುಂತಾದ ಆಹಾರ ಪಾನೀಯಗಳಿಗೆ ಸೇರಿಸುವ, ಅಂತೆಯೇ ಔಷಧವಾಗಿ ಸೇವಿಸುವ ಸಾಂಬಾರ ಸಾಮಾನುಗಳನ್ನು ಬಳಸುತ್ತಾರೆ.

ಪ್ರಕೃತಿಯಲ್ಲಿರುವ ಪ್ರತಿ ಮರ ಗಿಡ ಯಾವುದೇ ಒಂದು ರೀತಿಯಲ್ಲಿ ಮನುಷ್ಯನಿಗೆ ಸಹಾಯಕವೆ ಆಗಿರುತ್ತದೆ ಜನಪದ ವೈದ್ಯದಲ್ಲಿ ಹೆಚ್ಚಿನ ಮಟ್ಟಿಗೆ ಸಸ್ಯ ಸಂಬಂಧಿ ವಸ್ತುಗಳನ್ನೇ ಬಳಸುತ್ತಾರೆ. ಇನ್ನುಳಿದ ಭಾಗ ಮಂತ್ರ ತಂತ್ರಗಳಿಗೆ ಮತ್ತು ನಂಬಿಕೆಗಳಿಗೆ ಸಂಬಂಧಿಸಿದ್ದು. ಸ್ವಲ್ಪ ಭಾಗ ಪ್ರಾಣಿಗಳಿಗೆ ಮತ್ತು ಪ್ರಾಣಿ ಸಂಬಂಧಿಸಿದ್ದು. ವೈದ್ಯ ವಿಷಯದಲ್ಲಿ ವೈದ್ಯವನ್ನು ಕಲಿತ ವೈದ್ಯ ಪಂಡಿತ ತುಂಬಾ ಗುಟ್ಟು ಮಾಡುತ್ತಾನೆ. ತೀರ ಹತ್ತಿರದವರಿಗೆ ಅಂದರೆ ಮಕ್ಕಳು ಅದರಲ್ಲೂ ತಂದೆಗೆ ವಿಧೇಯರಾಗಿರುವ ಮಕ್ಕಳಿಗೆ ಮಾತ್ರ ಈ ಔಷಧಗಳ ವಿವರಗಳನ್ನು ಹೇಳಿಕೊಡುವುದುಂಟು. ಹಾಗೆ ಹೇಳಿಕೊಡುವಾಗಲೂ ಯಾವುದೇ ಔಷಧಿಯನ್ನು ದುರುಪಯೋಗಪಡಿಸಿಕೊಳ್ಳದಂತೆ ಬುದ್ಧಿ ಮಾತನ್ನು ಹೇಳುತ್ತಾರೆ ಮತ್ತು ಯಾವುಧೇ ವ್ಯಾಪಾರಿ ದೃಷ್ಟಿಯಿಂದ ಈ ಕಾರ್ಯವನ್ನು ಮಾಡಬೇಡ ಎಂದು ಸಹ ಹೇಳುತ್ತಾರೆ. ವ್ಯಾಪಾರದ ದೃಷ್ಟಿಯಿಂದ ಔಷಧಿಗಳನ್ನು ನೀಡಿದರೆ ಅದರಿಂದ ಖಾಯಿಲೆ ಗುಣವಾಗುವುದಿಲ್ಲ ಎಂದು ನಂಬುತ್ತಾರೆ. ಕಾಡಿನಲ್ಲಿ ಸಿಗುವ ವಸ್ತು ಗಿಡಮೂಲಿಕೆಗಳಿಂದ ತಯಾರಾದ ಪ್ರಕೃತಿ ದತ್ತವಾಗಿ ದೊರೆಯುವ ಔಷಧಗಳನ್ನು ವ್ಯಾಪಾರ ಮಾಡುವುದು ಪ್ರಕೃತಿಗೆ ದ್ರೋಹವೆಸಗಿದಂತೆ ಎಂಬ ನಂಬಿಕೆಯಿಂದ ಈ ಬಗೆಯ ಕಟ್ಟುಪಾಡುಗಳನ್ನು ಹಾಕಿಕೊಂಡಿರಬಹುದೆನಿಸುತ್ತದೆ. ಆಧುನೀಕರಣ, ನಗರೀಕರಣ, ಮತ್ತು ಜಾಗತೀಕರಣದ ಹಿನ್ನೆಲೆಯಲ್ಲೂ ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾಗಿ ಅಳಿದುಳಿದ ಜನಪದ ವೈದ್ಯವನ್ನು ಹಲವು ಹತ್ತು ವಿಭಾಗಗಳಾಗಿ ವಿಂಗಡಿಸಬಹುದು. ಮೂಲಿಕೆ ವೈದ್ಯ, ವ್ರಣ ವೈದ್ಯ, ಏಕ ರೋಗ ವಿಶೇಷ ವೈದ್ಯ, ಸೂತಿ ಕೋಪಚಾರ ವೈದ್ಯ, ಮಂತ್ರವೈದ್ಯ, ಹಾಗೂ ಗೃಹ ವೈದ್ಯ ಪರಂಪರೆಗಳು ಎಂದು ವಿಭಾಗಿಸಲಾಗಿದೆ.

ಪ್ರಕೃತಿಯ ಕೊಡುಗೆಯಾಗಿ ಸೃಷ್ಟಿಯಾಗಿರುವ ವೈವಿಧ್ಯಮಯವಾದ ಮತ್ತು ಅಸಂಖ್ಯಾತವಾದ ಜೀವಸಂಕುಲಕ್ಕೆ ಹಲವಾರು ಅನುಕೂಲತೆಗಳು ಇವೆ. ಅದರಲ್ಲಿಯೂ ಎಲ್ಲಾ ಜೀವಿಗಳಿಗಿಂತಲೂ ಭಿನ್ನವಾಗಿ ನಿಲ್ಲುವ ಮನುಷ್ಯ ಜೀವ ಸಂಕುಲಕ್ಕೆ ನಿಸರ್ಗದ ಒಡಲಲ್ಲಿ ಹಲವಾರು ಸೌಲಭ್ಯಗಳು ಲಭ್ಯವಾಗಿವೆ. ಆದರೆ ಮನುಷ್ಯರು ಇಷ್ಟಕ್ಕೆ ಸುಮ್ಮನಾಗದೇ ತನ್ನ ಬುದ್ಧಿಶಕ್ತಿಯ ಬಲದಿಂದಾಗಿ ಪ್ರಕೃತಿಯಲ್ಲಿ ಸಿಗುವ ಔಷಧಿ ಸಸ್ಯಗಳನ್ನು ಉಪಯೋಗಿಸಿಕೊಂಡು ಮನುಷ್ಯನಿಗೆ ಮಾತ್ರವಲ್ಲದೆ ಪ್ರಾಣಿಗಳ ಕಾಯಿಲೆಯನ್ನು ಸಹ ಗುಣಪಡಿಸುತ್ತಾರೆ.

ಪುರಾತನ ಕಾಲದಿಂದಲೂ ನಡೆದು ಬಂದಿರುವ ಮತ್ತು ಈವರೆಗೂ ತನ್ನಲ್ಲಿ ನೈಜವಾದ ಸತ್ವವನ್ನು ಅಡಕವಾಗಿಸಿಕೊಂಡ ದೇಶಿ ವೈದ್ಯದ ಅರಿವು ಮತ್ತೆ ಸ್ಮೃತಿಗೆ ಬರುತ್ತಿದೆ. ಗರ್ಭದೊಳಗೆ

ಇರುವ ಹಸುಳೆಯಿಂದ ಮೊದಲಾಗಿ ಸಾವಿನ ಅಂಚಿನಲ್ಲಿ ಇರುವ ವೃದ್ಧರವರೆಗೂ ಯಾವುದೇ ಅಡ್ಡ ಪರಿಣಾಮಗಳು ಆಗದ ರೀತಿಯಲ್ಲಿ ನಾಟಿ ಔಷಧಿಯನ್ನು ನೀಡಲಾಗುತ್ತದೆ. ಇಂದು ವೈದ್ಯ ವಿಜ್ಞಾನದಲ್ಲಿ ನೀಡುವ ಮಾತ್ರೆಗಳು ಬಹುಪಾಲು ನಮ್ಮ ಹಿರಿಯರು ದೈನಂದಿನ ಆಹಾರ ಕ್ರಮದಲ್ಲಿ ಕಾಯಿಲೆಯು ಬರದಂತೆ ನಿಗಾವಹಿಸುವ ಮುನ್ನೆಚ್ಚರಿಕೆಯ ಆಹಾರ ಪದಾರ್ಥಗಳ ಮುಂದುವರಿದ ರೂಪಾಂತರಗಳಾಗಿವೆ ಎಂದು ಹೇಳಬಹುದು. ಯಾವುದೇ ಬಗೆಯ ವೈದ್ಯಕೀಯ ರಂಗದ ಸಣ್ಣ ಮಾಹಿತಿಯು ಹಿರಿಯ ತಲೆಮಾರಿನ ಅಜ್ಜಿಯಂದಿರು ಎಂತಹ ಸಂಕೀರ್ಣ ಕಾಯಿಲೆಗಳು ಬಂದಾಗ್ಯೂ ಆಸ್ಪತ್ರೆಯತ್ತ ಮುಖ ಮಾಡದೆ ಮನೆಯಲ್ಲಿ ದೈನಂದಿನ ಬಳಕೆಯ ಆಹಾರ, ಕಾಳು, ಸೊಪ್ಪುಗಳನ್ನು ಬಳಸಿ ಆಹಾರವನ್ನು ನೀಡಿ ಕಾಯಿಲೆ ಬಾರದಂತೆ ಮುಂಜಾಗ್ರತೆಯನ್ನು ವಹಿಸುತ್ತಿದ್ದರು. ಹಾಗೊಮ್ಮೆ ಕಾಯಿಲೆಗಳು ಬಂದರು ಕಷಾಯಗಳು, ಮನೆ ಮದ್ದುಗಳು, ಬೇರುಗಳು, ತಪ್ಪಲುಗಳಿಂದ ಔಷಧಿಗಳನ್ನು ಸಿದ್ಧಪಡಿಸಿ ಗುಣಪಡಿಸಿಕೊಳ್ಳುತ್ತಿದ್ದರು.

ಉದಾ: ಇಂದು ರಕ್ತ ಹೀನತೆಗೆ ಔಷಧಿಯಾಗಿ ನೀಡುವ ಕಬ್ಬಿಣಾಂಶದ ಮಾತ್ರೆಗಳ ಗುಣಾಂಶಗಳೆಲ್ಲವೂ ಇಂದಿಗೂ ನಮ್ಮ ಮನೆಯಲ್ಲಿ ಸಿದ್ಧಪಡಿಸುವ ಆಹಾರ ಪದ್ಧತಿಯಲ್ಲಿಯೇ ಕಾಣಿಸಿಕೊಳ್ಳುತ್ತವೆ. ನಮ್ಮ ಪೂರ್ವಿಕ ಪರಂಪರೆಯಲ್ಲಿ ಹಳೆಯ ತಲೆಮಾರುಗಳಲ್ಲಿ ಅಜ್ಜಿಯರು, ತಾಯಿಯಂದಿರು ತಯಾರಿಸುವ ಹುಗ್ಗಿ, ಹೋಳಿಗೆ ಮೊದಲಾದವುಗಳಲ್ಲಿ ಬಳಸುವ ಬೆಲ್ಲ, ಕೊಬ್ಬರಿ, ಶೇಂಗಾಗಳಲ್ಲಿ ಈ ಕಬ್ಬಿಣಾಂಶ ಗುಣಗಳಿವೆ ಎಂದು ಹೇಳಬಹುದು.

ಇಂದು ನಾವೆಲ್ಲರೂ ಒಂದಿಲ್ಲೊಂದು ಕಾಯಿಲೆಗೆ ತುತ್ತಾಗುತ್ತಲೇ ಇದ್ದೇವೆ. ಇಂದಿನ ನಾಗಾಲೋಟದ ಬದುಕಿನಲ್ಲಿ ಒಂದು ನಿಮಿಷವೂ ಕೂಡ ಹಾಳು ಮಾಡದೇ ಯಾರೊಂದಿಗೂ ಬೆರೆಯದೆ ಸದಾ ಒತ್ತಡದಲ್ಲಿ ಬದುಕುತ್ತಿರುವ ನಾವೆಲ್ಲರೂ ಭವಿಷ್ಯತ್ತಿನ ಚಿಂತೆಯಲ್ಲಿ ಮುಳುಗಿ, ಇಂದಿನ ಒತ್ತಡಯುಕ್ತ ಬದುಕಿನಲ್ಲಿ ಯಾವುದೇ ಕಾಯಿಲೆ ಬಂದರೂ, ನಾವು ಮೊದಲು ಮುಂದುವರೆದ ಆಧುನಿಕ ವೈದ್ಯಕೀಯ ವಿಧಾನಕ್ಕೆ ಹಾಗೂ ಔಷಧೋಪಚಾರಗಳಿಗೆ ಮೊರೆ ಹೋಗುವುದು ಸಾಮಾನ್ಯವಾಗಿದೆ. ಹಾಗೂ ಇತ್ತೀಚಿಗೆ ಜನರು ಆಯುರ್ವೇದಿಕ ಹೋಮಿಯೋಪಥಿಕ್ ಮುಂತಾದ ಔಷಧಿಗಳ ಬಳಕೆಗೆ ಹೆಚ್ಚು ಮೊರೆ ಹೋಗುತ್ತಿರುವುದನ್ನು ಸೂಕ್ಷ್ಮವಾದ ಸ್ಥಿತ್ಯಂತರವೆಂದು ಗುರುತಿಸಬಹುದು.

ಹಳ್ಳಿಗಳಲ್ಲಿ ಅಥವಾ ಗ್ರಾಮೀಣ ಪ್ರದೇಶಗಳಲ್ಲಿ ಚಿಕ್ಕ ಪುಟ್ಟ ಕಾಯಿಲೆಗಳಿಗೆ ಆಸ್ಪತ್ರೆಗೆ ಹೋಗದೇ ಪ್ರಸ್ತುತ ದಿನಗಳಲ್ಲಿಯು ಸಹ ನಾಟಿ ಔಷಧಿ, ಮನೆಮದ್ದನ್ನೇ ಉಪಯೋಗಿಸುವುದನ್ನು ಕಾಣಬಹುದು. ಪ್ರಸ್ತುತ ದಿನಗಳಲ್ಲಿಯೂ ಕಾಯಿಲೆಗಳಿಗೆ ನಾಟಿ ವೈದ್ಯ ಪದ್ಧತಿಗೆ ಮೊರೆ ಹೋಗುವುದನ್ನು ಕಾಣಬಹುದು.

ಮಹಿಳೆ ತನ್ನ ಸ್ವಂತ ಆರೋಗ್ಯವನ್ನು ಕಾಪಾಡಿಕೊಳ್ಳಲು ಕೆಲವು ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾಳೆ. ಅವುಗಳಲ್ಲಿ ಈ ನಾಟಿವೈದ್ಯ ಪದ್ಧತಿಯೂ ಒಂದಾಗಿದೆ. ಇಲ್ಲಿ ಮುಖ್ಯವಾಗಿ

ಮಹಿಳೆ ಪುರುಷನಿಗೆ ತಿಳಿಯದಂತೆಯೆ ಕೆಲವು ವೈದ್ಯೋಪಚಾರಗಳನ್ನು ಮಾಡುತ್ತಿರುತ್ತಾಳೆ. ಮತ್ತು ಕುಟುಂಬದಲ್ಲಿ ಸದಸ್ಯರು ಏನಾದರೂ ಚಿಕ್ಕಪುಟ್ಟ ಕಾಯಿಲೆಗಳಿಗೆ ತುತ್ತಾದರೆ ಅವರನ್ನು ಕಾಪಾಡುವುದು ಕಂಡುಬರುತ್ತದೆ. ಕೆಲವು ಸಾಮಾನ್ಯ ಕಾಯಿಲೆಗಳಿಗೆ ತನ್ನಲ್ಲಿಯೇ ಚಿಕಿತ್ಸೆಯನ್ನು ಹೊಂದಿರುತ್ತಾಳೆ. ಕುಟುಂಬದಲ್ಲಿ ಈ ತರಹದಲ್ಲಿ ಚಿಕಿತ್ಸೆಯನ್ನು ಪಡೆಯುವವರು ತೀರಾ ಕಡಿಮೆ. ಏಕೆಂದರೆ ಕುಟುಂಬದಲ್ಲಿ ಏನೇ ಸಂಭವಿಸಿದರೂ ಸಹ ಕುಟುಂಬದ ಯಜಮಾನನಿಗೆ ತಿಳಿಯಲೇಬೇಕು. ಹಾಗಾಗಿ ವೈಯಕ್ತಿಕವಾಗಿ ಮಹಿಳೆ ಏನನ್ನೂ ಕಲಿಯುವುದಿಲ್ಲ ಹಾಗೂ ಕಲಿಯಲೂ ಸಹ ಪಿತೃಪ್ರಧಾನ ವ್ಯವಸ್ಥೆ ಬಿಡುವುದಿಲ್ಲ. ಶ್ರೇಣೀಕೃತವಾದ ನಮ್ಮ ಸಾಮಾಜಿಕ ಸಂರಚನೆಯಲ್ಲಿ ಸಮುದಾಯ, ವರ್ಗ, ಮತಗಳ ಆಧಾರದ ಮೇಲೆ ಒಡಕು ಉಂಟಾಗಿರುವಂತೆ ಲಿಂಗಾಧಾರಿತವಾಗಿ ಇನ್ನೂ ಹೆಚ್ಚೆಚ್ಚು ತಾರತಮ್ಯ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಲಿಂಗ ವ್ಯವಸ್ಥೆಯ ನಿರ್ಮಾಪಕನು ಆಗಿರುವ ಪುರುಷ ವರ್ಗವು ತನ್ನ ಆಶಯಕ್ಕೆ ತಕ್ಕಂತೆ ಮಹಿಳಾ ವರ್ಗವನ್ನು ನಿರ್ಮಿಸಿಕೊಂಡಿದೆ.

ಈ ನಾಟಿವೈದ್ಯ ಪದ್ಧತಿಯನ್ನೇ ತನ್ನ ವೈಯುಕ್ತಿಕ ನೆಲೆಯಲ್ಲಿ ಅಳವಡಿಸಿಕೊಂಡಿರುವ ಮಹಿಳೆಯರ ಪ್ರಮಾಣ ತೀರಾ ಕಡಿಮೆ ಇದೆ. ಏಕೆಂದರೆ ಕುಟುಂಬದಲ್ಲಿನ ಬಿಡುವಿಲ್ಲದ ಕೆಲಸಗಳಿಂದಾಗಿ ಮಹಿಳೆ ಅವುಗಳ ಮಧ್ಯೆಯೇ ಈ ವೈದ್ಯ ಪದ್ಧತಿಯನ್ನು ರೂಡಿಸಿಕೊಳ್ಳಬೇಕಾಗಿದೆ. ಇಲ್ಲಿ ಮುಖ್ಯವಾಗಿ ಇವಳ ಸೇವೆ ಏನಿದ್ದರೂ ಕುಟುಂಬಕ್ಕೆ ಮಾತ್ರ. ಆದರೆ ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯಿಂದ ಚಿಕಿತ್ಸೆಯನ್ನು ಪಡೆಯುವವರು ತೀರಾ ಕಡಿಮೆ. ಹಾಗಾಗಿ ವೈಯಕ್ತಿಕ ನೆಲೆಯಲ್ಲಿ ಈ ನಾಟಿವೈದ್ಯ ಪದ್ಧತಿಯನ್ನು ಅನುಸರಿಸುವಂತಹ ಮಹಿಳೆಯರು ಹೆಚ್ಚಾಗಿ ಕಂಡುಬರುವುದಿಲ್ಲ.

ನಾಟಿ ವೈದ್ಯ ಪದ್ಧತಿಯೇ ಒಂದು ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ನಮಗೆ ಕಂಡುಬರುವುದು ಸಹಜ. ಇವರು ಮುಖ್ಯವಾಗಿ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ವೈದ್ಯ ಚಿಕತ್ಸೆಯನ್ನು ನೀಡುವವರಾಗಿದ್ದಾರೆ. ಇವರು ಒಂದು ಹಳ್ಳಿಗೆ ಮಾತ್ರ ಸೀಮಿತರಾಗಿರದೇ ಹಲವಾರು ಗ್ರಾಮಗಳಲ್ಲಿ ಪ್ರಚಾರವನ್ನು ಪಡೆದಿರುತ್ತಾರೆ. ಮತ್ತು ಯಾವುದೇ ವಾಣಿಜ್ಯ ಉದ್ದೇಶದಿಂದ ಅಥವಾ ಲಾಭದ ಉದ್ದೇಶದಿಂದ ಇವರ ಚಿಕಿತ್ಸೆ ಕೂಡಿದವುಗಳಾಗಿರುವುದಿಲ್ಲ. ಕೇವಲ ಭಾವನಾತ್ಮಕ ಸಂದರ್ಭಗಳಿಗೆ ಅತೀ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ. ಹಾಗಾಗಿ ಊರಿನಲ್ಲಿ ಮತ್ತು ತಮ್ಮ ಸಂಬಂಧಿಕರಲ್ಲಿ ಯಾರಿಗಾದರೂ ಏನಾದರೂ ತೊಂದರೆಗಳು ಆದಲ್ಲಿ ಅವರಿಗೆ ಚಿಕಿತ್ಸೆಯನ್ನು ನೀಡುವವರಾಗಿರುತ್ತಾರೆ. ಇವರು ಅತೀ ಹೆಚ್ಚಿನ ದುಡಿಮೆ ಕಾರ್ಯದಲ್ಲಿ ತೊಡಗಿರುತ್ತಾರೆ. ಮುಖ್ಯವಾಗಿ ಹಳ್ಳಿಗಳಲ್ಲಿ ಸೂಲಗಿತ್ತಿಯರು ಎಂದು ಕರೆಯಲ್ಪಡುವ ಮಹಿಳೆಯರು ಗರ್ಭಿಣಿ ಮಹಿಳೆಯರ ಆರೈಕೆಯಲ್ಲಿ ತೊಡಗಿಕೊಂಡಿರುತ್ತಿದ್ದರು. ಆದರೆ ಆಧುನಿಕತೆ ಪ್ರಭಾವದಿಂದಾಗಿ ಆಸ್ಪತ್ರೆಗಳು ಬಂದಾಗಿನಿಂದ ಈ ಸೂಲಗಿತ್ತಿಯರು ಕಣ್ಮರೆಯಾಗಿ ಈಗಿನ ಹೆರಿಗೆಗಳೆಲ್ಲ ಆಸ್ಪತ್ರೆಯಲ್ಲಿ ನಡೆಯುತ್ತವೆ.

ಈ ನಾಟಿವೈದ್ಯ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿ ತೆಗೆದುಕೊಂಡ ಮಹಿಳೆಯರು ಕಂಡುಬರುತ್ತಾರೆ ನಿಜ. ಆದರೆ ಇವರು ಸಂಪೂರ್ಣವಾಗಿ ವೃತ್ತಿಯನ್ನಾಗಿಸಿಕೊಂಡಿರುವುದಿಲ್ಲ. ಬದಲಾಗಿ ಒಂದು ಉಪಕಸುಬಿನಂತೆ ಈ ವೃತ್ತಿಯನ್ನು ಅನುಸರಿಸಿರುತ್ತಾರೆ. ಏಕೆಂದರೆ ಇದರ ಹಿಂದೆ ಪುರುಷನ ಕೈವಾಡವಿರುತ್ತದೆ. ಅಂದರೆ ಈ ವೃತ್ತಿ ಒಂದು ಉಪಕಸುಬಾಗಿದ್ದರೂ ಸಹ ಅದನ್ನೇ ಸಂಪೂರ್ಣವಾಗಿ ಅವಲಂಬಿಸಿರುವುದಿಲ್ಲ. ಏಕೆಂದರೆ ಈ ವೃತ್ತಿಯನ್ನೇ ಸಂಪೂರ್ಣವಾಗಿ ಅವಲಂಬಿಸಿದರೆ ಅವರ ಜೀವನ ಸ್ಥಿತಿಗತಿಗಳು ಸುಧಾರಿಸುವುದು ಕಷ್ಟ. ಮುಖ್ಯವಾಗಿ ಈ ನಾಟಿವೈದ್ಯ ಪದ್ಧತಿಯನ್ನು ಅನುಸರಿಸುವವರು ನಿರ್ದಿಷ್ಟವಾಗಿ ಹಣದ ಆಮಿಷಕ್ಕೆ ಒಳಗಾಗಿರುವುದಿಲ್ಲ. ಬದಲಾಗಿ ರೋಗಿಯ ಕಡೆಯವರು ಏನು ಕೊಡುತ್ತಾರೋ ಅಥವಾ ಎಷ್ಟು ಕೊಡುತ್ತಾರೋ ಅದರಲ್ಲಿಯೇ ಸಂತೃಪ್ತಿಯನ್ನು ಪಡೆಯಬೇಕಾಗುತ್ತದೆ. ಇದು ಅವರು ಆರ್ಥಿಕವಾಗಿ ಬಲಿಷ್ಟರಾಗಲು ಸಹಕರಿಸುವುದಿಲ್ಲ. ಹಾಗಾಗಿ ಈ ನಾಟಿವೈದ್ಯ ವೃತ್ತಿಯನ್ನು ಒಂದು ಉಪಕಸುಬನ್ನಾಗಿ ಅಥವಾ ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ಹೆಚ್ಚಾಗಿ ಕಂಡುಬರುತ್ತಾರೆ. ಅದರಲ್ಲಿಯೂ ಮುಖ್ಯವಾಗಿ ಪುರುಷನ ಅಧೀನದಲ್ಲಿಯೇ ಮುಂದುವರೆಯುತ್ತಿರುವ ಮಹಿಳೆಯರು ಕಂಡುಬರುತ್ತಾರೆ.

ಹೀಗೆ ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು ಬೆರಳೆಣಿಕೆ ಸಂಖ್ಯೆಯಲ್ಲಿ ಕಂಡುಬಂದರೂ ಸಹ ಅವರು ಪುರುಷನ ಹಿಡಿತದಲ್ಲಿಯೇ ಇರುವುದನ್ನು ನಾವು ಕಾಣುತ್ತೇವೆ. ಹೆಚ್ಚಾಗಿ ಈ ವೃತ್ತಿಯನ್ನು ಅನುಸರಿಸುವವರು ಕೆಳವರ್ಗ ಮತ್ತು ಮಧ್ಯಮ ವರ್ಗದವರಾಗಿರುತ್ತಾರೆ.

ಈ ವೈದ್ಯ ವೃತ್ತಿಯನ್ನು ಅನುಸರಿಸುತ್ತಿರುವ ಮಹಿಳೆಯರು ಸಾಮಾಜಿಕವಾಗಿ ಗೌರವ ಸ್ಥಾನಗಳನ್ನು ಹೊಂದಿರುತ್ತಾರೆ ನಿಜ, ಆದರೆ ಈ ಗೌರವಾದರಗಳೂ ಶಾಶ್ವತವಾಗಿರುವುದಿಲ್ಲ. ಬದಲಾಗಿ ಸಮಯ ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿರುತ್ತವೆ. ಅಂದರೆ ಯಾವುದೇ ಒಂದು ರೋಗಕ್ಕೆ ಚಿಕಿತ್ಸೆಯನ್ನು ನೀಡಿದ ನಂತರ ಆ ಚಿಕಿತ್ಸೆ ಫಲಕಾರಿಯಾದರೆ ಆ ಸಂದರ್ಭದಲ್ಲಿ ಅವಳು ಉತ್ತಮ ಗೌರವಗಳಿಗೆ ಪಾತ್ರಳಾಗುತ್ತಾಳೆ. ಬದಲಾಗಿ ಚಿಕಿತ್ಸೆ ಫಲಕಾರಿಯಾಗದೆ ವಿಫಲವಾದರೆ ಸಮಾಜದಿಂದ, ಕುಟುಂಬದಿಂದ ದೂಷಿಲ್ಪಡುತ್ತಾಳೆ. ಹಾಗಾಗಿ ಮಹಿಳೆ ಇಂತಹ ಸಂದರ್ಭಗಳನ್ನು ಧೈರ್ಯದಿಂದ ಎದುರಿಸಬೇಕು. ಈ ಎಲ್ಲಾ ಸಾಮಾಜಿಕ ಸ್ಥಾನಮಾನಗಳು ಎಲ್ಲಾ ಮಹಿಳೆಯರಿಗೂ ಒಂದೇ ರೀತಿಯಲ್ಲಿ ಇರುವುದಿಲ್ಲ. ಏಕೆಂದರೆ ಕೆಲವರು ಪುರುಷರಿಂದ ಒಳ್ಳೆಯ ಸ್ಥಾನಮಾನಗಳನ್ನು ಪಡೆದುಕೊಂಡರೆ ಕೆಲವರು ತಮ್ಮ ಸ್ವಂತಿಕೆಯಿಂದ ಒಳ್ಳೆಯ ಸ್ಥಾನಮಾನಗಳನ್ನು ಪಡೆದುಕೊಂಡಿರುತ್ತಾರೆ. ಅಂದರೆ ಪುರುಷರಿಂದ ಅಥವಾ ಪುರುಷರ ಸಹಕಾರದಿಂದ ಗುರುತಿಸಿಕೊಂಡ ಮಹಿಳೆಯರು ಹಲವಾರು ಕಟ್ಟುಪಾಡುಗಳಿಗೆ ಒಳಗಾಗಿರುತ್ತಾರೆ. ಇವರಿಗೆ ಯಾವುದೇ ರೀತಿಯ ಸ್ವಾತಂತ್ರ್ಯ ಎಂಬುದು ಇರುವುದಿಲ್ಲ. ಈ ರೀತಿಯ ವಿಶಿಷ್ಟತೆ ಉನ್ನತ ವರ್ಗದ ಮಹಿಳೆಯರಲ್ಲಿ ಕಾಣಬಹುದಾಗಿದೆ. ಆದರೆ ತಮ್ಮ ಸ್ವಂತಿಕೆಯಿಂದ ಕಲಿತವರು ಯಾವುದೇ ನಿಯಮಗಳಿಗೆ ಬದ್ಧರಾಗದೆ ಸ್ವಲ್ಪಮಟ್ಟಿನ ಸ್ವಾತಂತ್ರ್ಯವನ್ನು ತಮ್ಮದಾಗಿಸಿಕೊಂಡಿರುತ್ತಾರೆ. ಮತ್ತು ಇವರು ತಮ್ಮ ಜೀವನಕ್ಕೆ ಈ ವೈದ್ಯ

ವೃತ್ತಿಯನ್ನು ಆಪ್ತವಾಗಿಸಿಕೊಂಡಿರುತ್ತಾರೆ. ಹೀಗಾಗಿ ಕೆಲವು ಮಹಿಳೆಯರು ಜನಜನಿತವಾಗಿರುತ್ತಾರೆ. ಆದರೆ ತಮಟಕಲ್ಲು ಗ್ರಾಮದಲ್ಲಿ ನಾಟಿ ವೈದ್ಯ ಪದ್ಧತಿಯನ್ನು ಕಲಿತಿರುವ ಯಾವ ಮಹಿಳೆಯು ಇಲ್ಲ. ಆದರೆ ಪ್ರತಿ ಮನೆ ಹೆಣ್ಣು ಮಕ್ಕಳು ಶೀತ, ಜ್ವರ, ನೆಗಡಿ, ಬಿಳಿಮುಟ್ಟು, ಹೊಟ್ಟೆನೋವು ಮೊದಲಾದ ಕಾಯಿಲೆಗಳಿಗೆ ಮನೆ ಮದ್ದನ್ನೆ ಬಳಸುತ್ತಾರೆ. ಈ ಊರಿನಲ್ಲಿ ಶಿವಣ್ಣ ಎನ್ನುವ ವ್ಯಕ್ತಿ ಮಾತ್ರ ನಾಟಿವೈದ್ಯ ಪದ್ಧತಿಯನ್ನು ಮಾಡುತ್ತಾರೆ.

೧. **ಕೈಮಸಕ** : ವ್ಯಕ್ತಿಯೊಬ್ಬನಿಗೆ ಬೇರೊಬ್ಬ ವ್ಯಕ್ತಿ ಹೊಟ್ಟೆಯಲ್ಲಿ ಹಾಕುವುದಕ್ಕೆ ಕೈಮಸಕ ಎನ್ನುತ್ತಾರೆ. ಈ ತರ ಹಾಕಿದಾಗ ವ್ಯಕ್ತಿಗೆ ಊಟ ಸೇರುವುದಿಲ್ಲ. ಇದಕ್ಕೆ ಇಲ್ಲಿ ಕೊಡುವ ಮದ್ದು ಅಥವಾ ಔಷಧಿ ಎಕ್ಕೆ ಹಾಲು ವೀಳ್ಯೆದೆಲೆ ತುಂಬನ್ನು ಚೆನ್ನಾಗಿ ಗುಂಡಿನಲ್ಲಿ ನುಣುಪಾಗಿ ರುಬ್ಬಿ ನಾಲಿಗೆಗೆ ತಿಕ್ಕಿದಾಗ ವಾಂತಿಯಾಗುತ್ತದೆ. ಆಗ ಈ ಕಾಯಿಲೆ ಗುಣವಾಗುತ್ತದೆ.

೨. **ಹೊಟ್ಟೆ ನೋವಿಗೆ** : ಹೊಟ್ಟೆ ನೋವು ಬಂದಾಗ ಜೇನುತುಪ್ಪ ಮತ್ತು ಸಂಜೀವಿನಿ ಗೂಡಿನ ಮಣ್ಣನ್ನು ಬೆರೆಸಿ ತಿನ್ನಲು ಕೊಡುತ್ತಾರೆ. ಇದರಿಂದ ಹೊಟ್ಟೆ ನೋವು ವಾಸಿಯಾಗುವುದು.

೩. **ಹೊಟ್ಟೆ ಊದಿಕೊಂಡಾಗ** : ಜೀರಿಗೆಯನ್ನು ನೀರಿನಲ್ಲಿ ಹಾಕಿ ಕುದಿಸಿ ನಂತರ ಕುಡಿದಾಗ ಅಥವಾ ಈರುಳ್ಳಿಯನ್ನು ತಿಂದಾಗ ಅಥವಾ ಒಂದು ಗ್ಲಾಸ್ ನೀರಿಗೆ ಅರ್ಧ ಹೋಳು ನಿಂಬೆ ಹಣ್ಣಿನ ರಸ, ಸೋಡಾಪುಡಿ, ಉಪ್ಪು, ಸಕ್ಕರೆ ಮಿಶ್ರಣ ಮಾಡಿ ಕುಡಿಯುವುದರಿಂದ ಹೊಟ್ಟೆ ಊತ ಕಡಿಮೆಯಾಗುತ್ತದೆ.

೪. **ಸರ್ಪಹುಣ್ಣು** : ಸರ್ಪಹುಣ್ಣು ಆದಾಗ ಉರುಮಂಜನ್ನು ಆಕಳದ ತುಪ್ಪದ ಜೊತೆ ಬೆರೆಸಿ ಸರ್ಪಹುಣ್ಣು ಆದ ಜಾಗಕ್ಕೆ ೫ ಅಥವಾ ೯ ದಿನ ಹಚ್ಚುವುದರಿಂದ ಸರ್ಪಹುಣ್ಣು ಹೋಗುತ್ತದೆ. ಮತ್ತೆ ಕೆಲವರು ಊದಿನ ಕಡ್ಡಿಯಿಂದ ಸರ್ಪಹುಣ್ಣು ಆದ ಜಾಗದಿಂದ ಕೊನೆಯಾದ ಜಾಗದವರೆಗೆ ಗರುಡ ರೇಖೆಯನ್ನು ಬರೆಯುವುದರಿಂದ ಸರ್ಪಹುಣ್ಣು ಹೋಗುತ್ತದೆ.

೫. **ತಲೆ ನೋವು** : ಸಾಮಾನ್ಯವಾಗಿ ತಲೆ ನೋವು ಬರುವುದು ಒತ್ತಡ ಹೆಚ್ಚಾದಾಗ, ಮಳೆಯಲ್ಲಿ ನೆನೆಯುವುದರಿಂದ, ಶೀತವಾದಾಗ, ಜ್ವರ ಬಂದಾಗ, ತಲೆ ನೋವು ಬರುತ್ತದೆ. ಈ ಸಂದರ್ಭದಲ್ಲಿ ಮನೆಯಲ್ಲಿಯೇ ದೊರೆಯುವ ಬೆಳ್ಳುಳ್ಳಿಯನ್ನು ಔಷಧವನ್ನಾಗಿ ಬಳಸಬಹುದು. ಬೆಳ್ಳುಳ್ಳಿ ರಸವನ್ನು ಹಣೆಯ ಎರಡು ಮಗ್ಗುಲುಗಳಿಗೆ ಹಚ್ಚುವುದರಿಂದ ತಲೆ ನೋವು ಕಡಿಮೆಯಾಗುತ್ತದೆ.

ಬೆಳ್ಳುಳ್ಳಿ ರಸ ಹೆಚ್ಚಿಗೆ ಹೊತ್ತು ಇಡದೇ ಎರಡು ಅಥವಾ ಮೂರು ನಿಮಿಷ ಇಡಬೇಕೆಂದು ಹೇಳುತ್ತಾರೆ. ಏಕೆಂದರೆ ಬೆಳ್ಳುಳ್ಳಿಯಲ್ಲಿ ಅತಿ ಉಷ್ಣ ಇರುವುದರಿಂದ ಸೂಕ್ಷ್ಮವಾದ ಚರ್ಮಕ್ಕೆ ಹಾನಿಯುಂಟಾಗುವ ಸಾಧ್ಯತೆ ಹೆಚ್ಚು.

೬. ಇಸಬು : ಮೊಣಕಾಲ ಕೆಳಭಾಗದಲ್ಲಿ ಈ ರೋಗ ಕಾಣಿಸಿಕೊಳ್ಳುತ್ತದೆ. ಈ ರೋಗಕ್ಕೆ ಮದ್ದು ನೀರಿನಲ್ಲಿ ಇರುವ ಜಿಗಳೆ ಮತ್ತು ಸುಣ್ಣ, ಕಲ್ಲತ್ತ, ತಜಿಸಿ ೭ ಎಲೆ, ಮೆಣಸು, ಲವಂಗ,

ಬೆಳ್ಳುಳ್ಳಿ ಇವೆಲ್ಲವನ್ನು ರುಬ್ಬಿ ಮಿಶ್ರಣ ಮಾಡಿಕೊಂಡು ೩, ೫ ಅಥವಾ ೭ ದಿನಗಳು ಹಚ್ಚಿದರೆ ಇಸಬು ಗುಣವಾಗುತ್ತದೆ.

**೭. ಕುರ** : ಇದು ದೇಹದಲ್ಲಿ ರಕ್ತ ಕೆಟ್ಟಾಗ ದೊಡ್ಡ ದೊಡ್ಡ ಗಡ್ಡೆಗಳು ಆಗುತ್ತವೆ. ಆಗ ಇದಕ್ಕೆ ಚಿಕಿತ್ಸೆಯಾಗಿ ಆಡುಮುಟ್ಟದ ಎಲೆ-೭, ಔಡಲ ಎಣ್ಣೆ ಬಿಸಿ ಮಾಡಿ ಎಲೆಯ ಮೇಲೆ ಹಾಕಿ ಎಲೆಯನ್ನು ಆ ಜಾಗದಲ್ಲಿ ಹಾಕಬೇಕು ಈ ರೀತಿ ಮೂರು ದಿನ ಹಾಕಬೇಕು.

**೮. ಗಾಯ :** ಮಚ್ಚು, ಕೊಡಲಿಗಳಿಂದ ಮಾಡಿಕೊಂಡ ಗಾಯಗಳಿಗೆ ರಕ್ತದ ಎಲೆ (ವಜ್ರನೀಲ)ಯನ್ನು ಚೆನ್ನಾಗಿ ನುಣುಪಾಗಿ ಗಾಯದ ಮೇಲೆ ಹಚ್ಚುವುದರಿಂದ ಗಾಯ ಗುಣವಾಗುವುದು.

**೯. ಕೈಕಾಲು ಮುರಿತಕ್ಕೆ** : ಔಡಲ ಎಣ್ಣೆ ಮತ್ತು ನಿಂಬೆರಸವನ್ನು ಮಿಶ್ರಣ ಮಾಡಿ ಬಿಸಿ ಮಾಡಿ ಕೈಕಾಲು ಮುರಿದ ಜಾಗಕ್ಕೆ ಹಚ್ಚಬೇಕು.

**೧೦. ಕಜ್ಜಿ** : ಇದಕ್ಕೆ ಅರಳಿ ಬೀಜವನ್ನು ರುಬ್ಬಿ (ಕಣ್ಣಿನ ಬೀಜ) ಇದನ್ನು ಮಿಶ್ರಣ ಮಾಡಿ ನುಣುಪಾಗಿ ರುಬ್ಬಿ ೩-೪ ದಿನಗಳ ಕಾಲ ಹಚ್ಚಬೇಕು.

**೧೧. ಜ್ವರ** : ಬೇವಿನ ತೊಗಟೆಯ ತಿರುಳನ್ನು ಬಿಸಿ ನೀರಿನಲ್ಲಿ ಬೇಯಿಸಿ ಅದಕ್ಕೆ ಸ್ವಲ್ಪ ಅರಿಶಿಣ, ಬೆಳ್ಳುಳ್ಳಿ, ಮೆಣಸು ಜಜ್ಜಿ ಕುದಿಸಿದರೆ, ಖಾಲಿ ಹೊಟ್ಟೆಗೆ ಕುಡಿದರೆ ಜ್ವರ ಗುಣವಾಗುತ್ತದೆ.

**೧೨. ಹುಳುಕಡ್ಡಿಗೆ** : ರಕ್ತದ ಎಲೆಯ ಕಾಯಿಯನ್ನು ಹುಳುಕಡ್ಡಿ ಸುತ್ತ ಗೆರೆ ಹಾಕಿದರೆ ಗುಣವಾಗುತ್ತದೆ. ಮತ್ತೊಂದು ಕಣಗಲೆ ಹೂವಿನ ಎಲೆಯಿಂದ ಬರುವ ರಸವನ್ನು ಹುಳುಕಡ್ಡಿ ಆದ ಜಾಗಕ್ಕೆ ಹಚ್ಚುವುದರಿಂದ ಕೆಲವು ದಿನಗಳ ನಂತರ ಇದು ಗುಣವಾಗುತ್ತದೆ.

**೧೩. ಮೈಕಾವು** : ರಾತ್ರಿ ಮಲಗುವ ಮುನ್ನ ಸೋರೆಯಲ್ಲಿ ನೀರು ಮತ್ತು ಬೆಲ್ಲವನ್ನು ಹಾಕಿ ಬಿಳಿಯ ಬಟ್ಟೆಯೊಂದಿಗೆ ಸೋರೆಯ ಬಾಯಿಯನ್ನು ಮುಚ್ಚಿ ಮಾಳಿಗೆಯ ಮೇಲೆ ಇಡುತ್ತಾರೆ. ಬೆಳಗ್ಗೆ ಎದ್ದು ಖಾಲಿ ಹೊಟ್ಟೆಗೆ ಕುಡಿಯುವುದರಿಂದ ಮೈಕಾವು ಗುಣವಾಗುತ್ತದೆ.

**೧೪. ಕಫ** : ಕಫ ಆದರೆ ರಾತ್ರಿ ಮಲಗುವ ಮುನ್ನ ಈರುಳ್ಳಿ, ಬೆಳ್ಳುಳ್ಳಿ ತಿಂದು ಮಲಗಬೇಕು. ಅಥವಾ ಮೆಣಸು ಬೆಳ್ಳುಳ್ಳಿ, ಉಪ್ಪು ಅಥವಾ ಕಡಲೆಯನ್ನು ತಿಂದು ನೀರು ಕುಡಿಯದ ಹಾಗೆ ಮಲಗಿದರೆ ಕಫ ವಾಸಿಯಾಗುತ್ತದೆ.

**೧೫. ಬಿಳಿಮುಟ್ಟು** : ಕಾಡು ಜೋಳದ ಎಲೆಯ ರಸವನ್ನು ಒಂದು ವಾರ ಜಗೆದು ನುಂಗಿದರೆ ಮುಟ್ಟು ನಿಲ್ಲುವುದು.

೧೬. ಸ್ತ್ರೀಯರು ಋತುಮತಿ, ಗರ್ಭಿಣಿ, ಬಾಣಂತಿ ಆದಂತಹ ಈ ಮೂರು ಸಂದರ್ಭಗಳಲ್ಲಿ ನಿಶ್ಶಕ್ತಿ ಉಂಟಾಗುವ ಸಾಧ್ಯತೆ ಇದೆ. ಈ ಸಂದರ್ಭದಲ್ಲಿ ಇವರಿಗೆ ಬಾದಾಮಿ, ಗೋಡಂಬಿ, ದ್ರಾಕ್ಷಿ, ಉತ್ತುತ್ತಿ ಕೊಡುತ್ತಾರೆ. ಇಲ್ಲವಾದರೆ ಕಲ್ಲುಸಕ್ಕರೆ, ಕೊಬ್ಬರಿ, ಉತ್ತುತ್ತಿ ಪುಡಿ ಮಾಡಿ ತುಪ್ಪದಲ್ಲಿ ಬೆರೆಸಿ ಖಾಲಿ ಹೊಟ್ಟೆಗೆ ಕೊಡುತ್ತಾರೆ.

೧೭. **ಮಕ್ಕಳ ರಕ್ತ ಹೀನತೆಗೆ ಔಷಧಿ :** ಬೆಳಗಿನ ಹೊತ್ತು ಮಕ್ಕಳಿಗೆ ಖಾಲಿ ಹೊಟ್ಟೆಯಲ್ಲಿ ನೆನೆಸಿದ ಉಪ್ಪುಕಡಲೆ, ಕಡ್ಲೆ ಬೇಳೆ, ಬೆಲ್ಲವನ್ನು ಸೇರಿಸಿ ತಿನ್ನಿಸಬೇಕು. ನೆನೆಸಿಟ್ಟು ಶೇಂಗಾ ಕಾಳುಗಳನ್ನು ತಿನ್ನಿಸಬೇಕು. ಕೊಬ್ಬರಿ, ಬೆಲ್ಲ ಸೇರಿಸಿ ಕುಟ್ಟಿ ಪುಡಿ ಮಾಡಿ ಅದಕ್ಕೆ ತುಪ್ಪ ಬೆರೆಸಿ ತಿನ್ನಲು ಕೊಡಬೇಕು. ಈ ಕ್ರಮದಿಂದ ಮಗುವಿನ ರಕ್ತಹೀನತೆ ಕೊರತೆ ತಪ್ಪಿಸಬಹುದಾಗಿದೆ.

೧೮. **ಮಕ್ಕಳಿಗೆ ಕೆಮ್ಮು ಶೀತವಾದಾಗ :** ಅರಿಶಿಣವನ್ನು ವೀಳ್ಯದೆಲೆಗೆ ಹಚ್ಚಿ ದೀಪದಲ್ಲಿ ಬಿಸಿ ಮಾಡಿ ಎರಡು ಮೂರು ದಿನ ತಲೆಯ ಮೇಲೆ ಹಾಕುವುದರಿಂದ ಶೀತ ಕೆಮ್ಮು ಕಡಿಮೆಯಾಗುತ್ತದೆ.

೧೯. ಮಕ್ಕಳಿಗೆ ಹೊಟ್ಟೆ ನೋವು ಬಂದರೆ ಅಜವಾನದ ಕಾಳುಗಳನ್ನು ತಿಂದು ಅದರ ಗಾಳಿಯನ್ನು ಮಕ್ಕಳ ಬಾಯಿಗೆ ಅಥವಾ ಕಿವಿಗೆ, ಹೊಕ್ಕಳಿಗೆ ೨ ರಿಂದ ೩ ಬಾರಿ ಊದಿದರೆ ಹೊಟ್ಟೆ ನೋವು ಕಡಿಮೆಯಾಗುವುದು. ಅಥವಾ ಅಜಿವಾನದ ಎಲೆಗಳನ್ನು ಎದೆ ಹಾಲಿನಲ್ಲಿ ಕಲಸಿ ಕುಡಿಸುವುದರ ಮೂಲಕ ಮಗುವಿನ ಹೊಟ್ಟೆ ನೋವಿಗೆ ಪರಿಹಾರ ಕಂಡುಕೊಳ್ಳಬಹುದು.

೨೦. **ಮಕ್ಕಳ ಹೊಟ್ಟೆ ಉಬ್ಬರ :** ಹೊಟ್ಟೆ ನೋವಿನಿಂದ ಬಳಲುವ ಮಕ್ಕಳಲ್ಲಿ ಕೆಲವೊಮ್ಮೆ ಹೊಟ್ಟೆ ಉಬ್ಬರಿಸಿಕೊಂಡು ಮೂತ್ರ ಕಟ್ಟುವ ಮತ್ತು ಜಂತು ಹುಳುಗಳಾಗುವ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಮಗುವಿಗೆ ಹೊಟ್ಟೆ ಉಬ್ಬರಿಸಿದರೆ ಹರಳೆಣ್ಣೆ ಸವರಿದ ವೀಳ್ಯದೆಲೆಯನ್ನು ದೀಪದ ಶಾಖಕ್ಕೆ ಹಿಡಿದು ಬಿಸಿ ಮಾಡಿ ಅದನ್ನು ಮಗುವಿನ ಹೊಟ್ಟೆಯ ಮೇಲೆ ಪದೆ ಪದೆ ಹಾಕಿ ತೆಗೆದು ಶಾಖ ಕೊಡುತ್ತಾ ಬಂದರೆ ಹೊಟ್ಟೆ ಉಬ್ಬರ ಇಳಿಯುತ್ತದೆ.

೨೧. ಮುಟ್ಟಿನ ಸಂದರ್ಭದಲ್ಲಿ ಬರುವಂತಹ ಹೊಟ್ಟೆನೋವಿಗೆ ಆಧುನಿಕ ವೈದ್ಯ ವಿಜ್ಞಾನದಲ್ಲಿ ನೋವು ನಿವಾರಕ ಮಾತ್ರೆಗಳನ್ನು ನೀಡುತ್ತಾರೆ. ಆದರೆ ನಿಗದಿತ ಅವಧಿಗೆ ಮಾತ್ರ ಕಾರ್ಯ ನಿರ್ವಹಿಸುವುದರಿಂದ ಮಾತ್ರ ಶಕ್ತಿಯು ಕುಂದಿದ ನಂತರ ಪುನಃ ನೋವು ಕಾಣಿಸಿಕೊಳ್ಳುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಹೆಚ್ಚಾಗಿ ಜೀವಂತವಿರುವ ದೇಶಿ ವೈದ್ಯರು ಮತ್ತು ದೇಶಿ ವೈದ್ಯಪದ್ಧತಿಯಲ್ಲಿ ನೀಡುವ ಔಷಧಿಗಳು ಶಾಶ್ವತ ಉಪಶಮನವನ್ನು ನೀಡುವಂತವಾಗಿವೆ. ಸೀಬೆಯ ತಿರುಳಿನ ಬೀಜ ತೆಗೆದು ಹಾಲು, ಜೇನಿನೊಂದಿಗೆ ಬೆರೆಸಿ ಸೇವಿಸುವುದರಿಂದ ನೋವು ನಿವಾರಣೆಯಾಗುತ್ತದೆ. ಅಥವಾ ಕಲ್ಲುಸಕ್ಕರೆಯನ್ನು ಮುಟ್ಟು ಆಗುವ ಎರಡು ದಿನಗಳ ಮೊದಲು ಸೇವಿಸಿದರೆ ಹೊಟ್ಟೆ ನೋವು ಕಡಿಮೆಯಾಗುತ್ತದೆ.

೨೨. ಅತಿಯಾದ ಋತುಸ್ರಾವವಾದರೆ ಎರಡು ಸಿಪ್ಪೆ ತೆಗೆದ ಬೆಳ್ಳುಳ್ಳಿಯನ್ನು ಸ್ವಲ್ಪ ಬೆಲ್ಲದೊಂದಿಗೆ ಮಿಶ್ರಣ ಮಾಡಿ ಗೋಲಿಗಳನ್ನು ತಯಾರಿಸಿ ಅದನ್ನು ನುಂಗುತ್ತ ಬಂದರೆ ನೋವು ಶಮನವಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಆಯುರ್ವೇದ ಔಷಧಿಗಳೆಂದು ಹಲವಾರು ಕಂಪನಿಗಳ ಮೂಲಕ ನಾಟಿ ಔಷಧಿ ಪದ್ಧತಿಯನ್ನು ನೀಡುತ್ತಿದ್ದಾರೆ. ಆದರೆ ಯಾವುದೇ ಔಷಧಿಯನ್ನು ನೇರವಾಗಿ

ಗಿಡಮೂಲಿಕೆಗಳನ್ನು ಬಳಸಿ ನೀಡದೆ ಅವುಗಳಿಗೆ ರಾಸಾಯನಿಕ ವಸ್ತುಗಳ ಮಿಶ್ರಣ ಮಾಡಿ ಮಾರಾಟ ಮಾಡುತ್ತಾರೆ. ಆದರೆ ಇದು ಆಯುರ್ವೇದದ ಔಷಧಿಯೆಂದು ನೆಪ ಮಾತ್ರಕ್ಕೆ ಹೇಳುತ್ತಾರೆ. ಇದು ಕೇವಲ ವ್ಯವಹಾರಕ್ಕಾಗಿ ಹಣ ಮಾಡುವುದಕ್ಕಾಗಿ ಈ ರೀತಿಯಾಗಿ ಮಾಡುತ್ತಾರೆ. ಆದರೆ ಹಳ್ಳಿಗಳಲ್ಲಿ ಈಗಲೂ ಸಹ ಚಿಕ್ಕಪುಟ್ಟ ಕಾಯಿಲೆಗಳಿಗೆ ಗಿಡಮೂಲಿಕೆಗಳನ್ನೇ ಬಳಸಿ ರೋಗವನ್ನು ಗುಣಪಡಿಸಿಕೊಳ್ಳುತ್ತಾರೆ. ಈ ರೀತಿಯಾಗಿ ಹಳ್ಳಿಗಳಲ್ಲಿ ಚಿಕ್ಕ ಪುಟ್ಟ ಕಾಯಿಲೆಗಳಿಗೆ ನಾಟಿ ಔಷಧಿಯನ್ನೆ ಬಳಸುವುದನ್ನು ಗುರುತಿಸಬಹುದು.

**೫.೩. ಕೃಷಿಯಲ್ಲಿ ಮಹಿಳೆಯ ಪಾತ್ರ :**

ಕೃಷಿಗೂ, ಮಹಿಳೆಗೂ ಅವಿನಾಭಾವ ಸಂಬಂಧವಿದೆ. ನೇರವಾಗಿ ಇಲ್ಲವೆ ಪರೋಕ್ಷವಾಗಿ ಮಹಿಳೆ ಕೃಷಿಯೊಂದಿಗೆ ಓಡನಾಟವನ್ನು ಹೊಂದಿದವಳಾಗಿದ್ದಾಳೆ. ಕೃಷಿ ಕೆಲಸ ಎಷ್ಟು ಜನ ಇದ್ದರೂ ಸಾಲದು. ನಮ್ಮ ಜನಪದರು ಹೇಳುವ ಹಾಗೆ 'ಬೇಸಾಯ ನಾ ಸಾಯ ನೀ ಸಾಯ ಮನೆಮಂದಿ ಎಲ್ಲ ಸಾಯ' ಎನ್ನುವ ಗಾದೆ ಮಾತೊಂದಿದೆ. ಇದು ಕೃಷಿಕರ ಶ್ರಮದ ಬಗೆಗೆ ಹೇಳುವಂತಹ ಮಾತಾದರೂ ಈ ಕೃಷಿ ಎನ್ನುವುದು ಕುಟುಂಬದೊಳಗಿನ ಪುರುಷ, ಮಹಿಳೆ, ಮಕ್ಕಳೆಲ್ಲರೂ ಒಂದಲ್ಲಾ ಒಂದು ರೀತಿಯಲ್ಲಿ ಕೃಷಿಯಲ್ಲಿ ಭಾಗಿಯಾಗುತ್ತಾರೆ ಎಂಬುದನ್ನು ಹೇಳಲಾಗಿದೆ. ಕೃಷಿಯಲ್ಲಿ ಮಹಿಳೆಯೂ ಭಾಗಿಯಾದ್ದಾಳೆ ಎಂಬುದಕ್ಕೆ ಈ ಮಾತೊಂದೇ ಸಾಕೆನಿಸುತ್ತದೆ.

ಕೃಷಿಯ ಆರಂಭದ ದಿನಗಳನ್ನು ಗಮನಿಸಿದರೆ ಕೃಷಿಗೆ ಸಂಬಂಧಪಟ್ಟಂತೆ ಮಹಿಳೆಯ ಪಾತ್ರ ಬಹಳ ಮಹತ್ವವಾದದ್ದು. ಏಕೆಂದರೆ ವ್ಯವಸಾಯಕ್ಕೆ ನಾಂದಿ ಹಾಡಿದವಳೇ ಹೆಣ್ಣು. ಹಾಗಾಗಿ ಮನುಷ್ಯನ ಅಲೆಮಾರಿತನದ ಬದುಕನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡಿದವಳೇ ಹೆಣ್ಣು ಎಂದು ಹೇಳಬಹುದು. ಗೆಡ್ಡೆ-ಗೆಣಸು ಸಂಗ್ರಹಣೆಯ ಸಂದರ್ಭದಲ್ಲಿಯೇ ಸ್ತ್ರೀಯರು ಆವಿಷ್ಕಾರ ಮಾಡಿದರು. ಕಾಡಿನಲ್ಲಿ ಹಣ್ಣು-ಹಂಪಲು ಸಂಗ್ರಹಣೆ ಮಾಡುವ ಸಂದರ್ಭದಲ್ಲಿ ಸ್ತ್ರೀಯರು ತಾವು ಅಲ್ಲಲ್ಲಿ ಎಸೆದಿದ್ದ ಬೀಜಗಳು ಮೊಳಕೆಯೊಡೆದು ಮೊಳಕೆಯಿಂದ ಸಸಿ ಬೆಳೆದುದ್ದನ್ನು ಕಂಡರು. ಈ ಜ್ಞಾನವೇ ಕೃಷಿಯ ಆವಿಷ್ಕಾರಕ್ಕೆ ಮೊದಲ ಹೆಜ್ಜೆಯಾಗಿರಬಹುದು. (ದೇವಿಪ್ರಸಾದ್ ಚಟ್ಟೋಪಾಧ್ಯಾಯ, ೧೯೯೭, ಪುಟ ೨೩). ಕೃಷಿ ಆವಿಷ್ಕಾರ ಹೀಗಾಗಿರಬಹುದು ಎಂದು ಊಹಿಸಿದಂತೆ, ಸ್ತ್ರೀ ಕೃಷಿಯನ್ನು ಆವಿಷ್ಕರಿಸಿದ ಕಾಲಘಟ್ಟವನ್ನು ನಾವು ಗುರುತಿಸಿಕೊಳ್ಳಬಹುದು. ಮಹಿಳೆಯರಿಂದಲೇ ಆರಂಭವಾಯಿತೆನ್ನಲಾದ ಕೃಷಿ ಇಂದು ತನ್ನ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆ ಹೊಂದಿದೆ. ಆರಂಭದಿಂದ ಇಂದಿನವರೆಗೆ ಕೃಷಿ ನಿರಂತರವಾಗಿ ಕಾಲದ ಜೊತೆ ಮುಖಾಮುಖಿಯಾಗುತ್ತಲೇ ತನ್ನ ಮೂಲ ಸ್ವರೂಪದಲ್ಲಿ ಆಯಾಕಾಲಕ್ಕೆ ಅಗತ್ಯವೆನಿಸಿದಂತೆ ಬದಲಾವಣೆಗಳನ್ನು ಅಭ್ಯಾಸಿಸಿಕೊಂಡು ಬದಲಾದ ಕಾಲದೊಂದಿಗೆ ಅನೇಕ ಸ್ಥಿತ್ಯಂತರಗಳಿಗೆ ಒಳಗಾಗಿದೆ.

ಕೃಷಿಯಲ್ಲಿ ಕೂಲಿಗಾಗಿ ದುಡಿಯುವ ಮಹಿಳೆಯರು ಬಹುತೇಕರು ಭೂ ರಹಿತ ಕೃಷಿ ಕಾರ್ಮಿಕರಾಗಿರುತ್ತಾರೆ. ಇವರು ಬಡಕುಟುಂಬದವರಾಗಿದ್ದು ಆರ್ಥಿಕವಾಗಿ ತುಂಬಾ ಕಷ್ಟದ ಪರಿಸ್ಥಿತಿಯಲ್ಲಿರುತ್ತಾರೆ. ತಮ್ಮ ಜೀವನ ನಿರ್ವಹಣೆಗಾಗಿ ಕೂಲಿನಾಲಿ ಮಾಡಿ ಜೀವನ ಸಾಗಿಸುತ್ತಿರುತ್ತಾರೆ. ಇವರಿಗೆ ಆರ್ಥಿಕವಾಗಿ ಯಾವ ಭದ್ರತೆಗಳಿರುವುದಿಲ್ಲ. ತಮ್ಮ ರಟ್ಟೆ(ಕೈ)ಯ ಬಲವನ್ನು ನಂಬಿ ಬದುಕುತ್ತಿರುತ್ತಾರೆ. ಕೂಲಿಗಾಗಿ ಬೇರೆಯವರ ಹೊಲಗಳಲ್ಲಿ ದುಡಿದು ತಮ್ಮ ದುಡಿಮೆಯಿಂದ ಬಂದ ಕೂಲಿಯಿಂದಲೇ ಬದುಕು ಸಾಗಿಸುತ್ತಾರೆ. ಒಂದು ಅಥವಾ ಎರಡು ಎಕರೆಯಷ್ಟು ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದ ರೈತ ಕುಟುಂಬದ ಮಹಿಳೆಯರು ಕೂಡಾ ತಮ್ಮ ಬಿಡುವಿನ ವೇಳೆಯಲ್ಲಿ ಬೇರೆಯವರ ಹೊಲದಲ್ಲಿ ದುಡಿಯುವುದು ಕಂಡು ಬರುತ್ತದೆ.

ಸಾಕಷ್ಟು ಭೂಮಿಯನ್ನು ಹೊಂದಿದ ರೈತ ಕುಟುಂಬಗಳಲ್ಲಿ ಮಹಿಳೆಯರು ನೇರವಾಗಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದಿಲ್ಲ. ಅವರು ಹೊಲಗದ್ದೆಗಳಿಗೆ ಹೋಗಿ ಮಣ್ಣಲ್ಲಿ ದುಡಿಯುವುದಿಲ್ಲ. ಏಕೆಂದರೆ ದೊಡ್ಡ ಹಿಡುವಳಿದಾರರು ಆಳುಕಾಳುಗಳಿಂದಲೂ ಹೆಚ್ಚು ದುಡಿಸಿಕೊಳ್ಳುತ್ತಾರೆ. ಇಲ್ಲಿ ಮಹಿಳೆಯ ಹೆಸರಿಗೂ ಭೂಮಿಯನ್ನು ಮಾಡಲಾಗಿರುತ್ತದೆ. ಆದರೆ ಭೂಮಿ ಅವರ ಹೆಸರಿನಲ್ಲಿದ್ದಾಗಲೂ ಅದರ ಮೇಲೆ ಸಂಪೂರ್ಣ ಒಡೆತನ ಅವಳಿಗಿರುವುದಿಲ್ಲ. ಇನ್ನು ನಿಜವಾಗಿ ಕೃಷಿಯಲ್ಲಿ ದುಡಿದು ಸಣ್ಣಗಾಗುವ ಮಹಿಳೆಯರೆಂದರೆ ಸಣ್ಣ ಮತ್ತು ಮಾಧ್ಯಮ ಭೂ ಹಿಡುವಳಿ ಹೊಂದಿದ ಕೃಷಿ ಕುಟುಂಬದ ಮಹಿಳೆಯರು. ಇವರು ಮನೆಯ ಒಳಗೆ ಮತ್ತು ಮನೆಯ ಹೊರಗೆ ಅಂದರೆ ಮನೆಯ ಕೆಲಸ ಮತ್ತು ಹೊಲಗದ್ದೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುತ್ತಾರೆ. ಆಳುಗಳ ಜೊತೆ ಹೊಲಕ್ಕೆ ಹೋಗಿ ದುಡಿಯುತ್ತಾರೆ. ಈ ವರ್ಗದ ಮಹಿಳೆ ದುಡಿದು ತನ್ನ ಕುಟುಂಬವನ್ನು ಮುಂದೆ ತರಬೇಕು ಎಂದು ಹೆಚ್ಚು ಹೆಚ್ಚು ಅಭಿಲಾಷೆಯನ್ನು ಇಟ್ಟುಕೊಂಡಿರುತ್ತಾರೆ.

ನಿತ್ಯ ಜೀವನವನ್ನು ನೋಡಿದರೆ ಮಹಿಳೆಯರು ಎಂದೂ ಮುಗಿಯದ ಮನೆ ಕೆಲಸದಲ್ಲಿ ತತ್ಪರರಾಗಿದ್ದಾರೆ. ನಿಜ ಮಹಿಳೆಯರಿಗೆ ಅದರಲ್ಲೂ ಕೃಷಿ ಮಹಿಳೆಯರಿಗೆ ದಿನದ ಕೆಲವು ಗಂಟೆಗಳನ್ನು ಬಿಟ್ಟರೆ ಉಳಿದ ಅವಧಿ ಎಲ್ಲಾ ದುಡಿಮೆಯ ಅವಧಿಯೇ ಆಗಿರುತ್ತದೆ. ಮನೆಯ ಒಳಗೆ ಕಸ, ಮುಸರಿ ಮಾಡುವುದು, ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು, ನೀರು ತುಂಬುವುದು, ಅಡುಗೆ ಮಾಡುವುದು, ಊಟ ಬಡಿಸುವುದು, ಗಂಡಮಕ್ಕಳು ಮತ್ತು ಮನೆಯ ಹಿರಿಯರ ಯೋಗಕ್ಷೇಮ ನೋಡಿಕೊಳ್ಳುವುದು, ಈ ಎಲ್ಲಾ ಜವಾಬ್ದಾರಿಯ ನಿರ್ವಹಣೆಯಲ್ಲಿ ಮಹಿಳೆ ಸಕ್ರಿಯವಾಗಿ ಪಾಲ್ಗೊಳ್ಳುತ್ತಾಳೆ. ಅಲ್ಲದೆ ಕೃಷಿಯ ಪೂರಕ ಕೆಲಸಗಳನ್ನು ಮನೆಯಲ್ಲಿ ಪುರುಷನ ಅನುಪಸ್ಥಿತಿಯಲ್ಲಿ ಮಹಿಳೆ ಮಾಡುತ್ತಾಳೆ. ದನಕರುಗಳಿಗೆ ನೀರು ಕುಡಿಸುವುದು, ಮೇವು ಹಾಕುವುದು, ದನಕರುಗಳ ಸಗಣಿಯನ್ನು ಬಳಿದು ತಿಪ್ಪಿಗೆ ಹೊತ್ತು ಹಾಕುವ ಕೆಲಸಗಳನ್ನು ಮಹಿಳೆ ಮಾಡುತ್ತಾಳೆ. ಅಷ್ಟೇ ಅಲ್ಲದೆ ಹಾಲನ್ನು ಕರೆಯುವ ಕೆಲಸ ಬಹುಪಾಲು ಮಹಿಳೆಯರಿಂದಲೇ ಆಗುತ್ತದೆ. ಧಾನ್ಯಗಳನ್ನು(ಕಾಳುಗಳನ್ನು) ಹಸನುಗೊಳಿಸುವ ಮತ್ತು ಹಿಂದೆ ಮನೆಯಲ್ಲಿ ಕುಟ್ಟುವ

ಮತ್ತು ಬೀಸಿ ಹಿಟ್ಟು ಮಾಡುವ ಕೆಲಸವನ್ನು ಮಹಿಳೆಯರೇ ಮಾಡುತ್ತಿದ್ದಾರೆ. ಆದರೆ ಈಗ ಹಿಟ್ಟಿನ ಗಿರಣಿಗಳು ಬಂದಿದ್ದರಿಂದ ಅವರಿಗೆ ಹಿಟ್ಟು ಮಾಡುವ ಕೆಲಸದ ಹೊರೆ ಕೊಂಚ ಕಡಿಮೆಯಾಗಿದೆ.

ಮಹಿಳೆಯರು ಹೊಲಕ್ಕೆ ಹೋಗುವ ಮೊದಲು ಮನೆಯ ಒಳಗಿನ ಬಹುಪಾಲು ಕೆಲಸಗಳನ್ನು ಮಾಡಿಕೊಂಡು ಹೋಗುತ್ತಾಳೆ. ಗಂಡ ಬೆಳಿಗ್ಗೆದ್ದು ಹೊಲಕ್ಕೆ ಹೋಗುತ್ತಾನೆಂದರೆ ತಾನು ಬೇಗ ಎದ್ದು ಅವನಿಗೆ ಊಟಕ್ಕೇನಾದರೂ ಮಾಡಿ ಆತನಿಗೆ ಉಣಿಸಿ ಹೊಲಕ್ಕೆ ಕಳುಹಿಸಿಕೊಟ್ಟು ಮನೆಯಲ್ಲಿ ಮಕ್ಕಳು ಮರಿಗಳನ್ನು ಸಂಬಾಳಿಸಿಕೊಂಡು ಮನೆಯ ಎಲ್ಲ ಕೆಲಸ ಕಾರ್ಯ ಮುಗಿಸಿ ಮತ್ತೆ ಗಂಡನಿಗೂ ತನಗೂ ಬುತ್ತಿ ಕಟ್ಟಿಕೊಂಡು ಹೊಲಕ್ಕೆ ಹೋಗಿ ಅಲ್ಲಿಯೂ ಕೆಲಸ ಮುಗಿಸುತ್ತಾಳೆ.

ಹಿಂದೆ ಬಿತ್ತನೆಯ ಬೀಜವನ್ನು ಸಂರಕ್ಷಿಸುವ ಕೆಲಸವೂ ಮಹಿಳೆಯದೇ ಆಗಿತ್ತು. ಇಂದು ಮಾರುಕಟ್ಟೆಯಲ್ಲಿ ಸಿದ್ಧ ಬೀಜ ತರುವುದರಿಂದ ಬೀಜ ಸಂರಕ್ಷಣೆ ಮಾಡುವ ಪ್ರವೃತ್ತಿ ಕಡಿಮೆಯಾಗಿದೆ. ಆದರೂ ಈಗಲೂ ಮನೆಯಲ್ಲಿ ಬಿತ್ತನೆಗೆ ಹೊರಟಿದ್ದಾರೆಂದರೆ ಬಿತ್ತನೆಗೆ ಸಜ್ಜು ಮಾಡಿಕೊಡುವಲ್ಲಿ ಮಹಿಳೆಯು ಪುರುಷನಿಗೆ ನೆರವಾಗುತ್ತಾಳೆ.

ಮಹಿಳೆ ದುಡಿದರೆ ಆರ್ಥಿಕವಾಗಿ ಸ್ವಾವಲಂಬಿಯಾಗುತ್ತಾಳೆ ಎನ್ನುವ ಮನೋಭಾವನೆ ಇದೆ. ಆದರೆ ದುಡಿಯುವ ಎಲ್ಲಾ ಮಹಿಳೆಯರಿಗೆ ಆರ್ಥಿಕವಾಗಿ ಸ್ವಾವಲಂಬಿಗಳಾಗುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ದುಡಿಯುವ ಎಷ್ಟೋ ಮಹಿಳೆಯರಿಗೆ ತಮ್ಮ ದುಡಿಮೆಯಿಂದ ಬಂದ ಹಣವನ್ನು ವ್ಯಯ ಮಾಡುವ ಸ್ವಾತಂತ್ರ್ಯ ಇರುವುದಿಲ್ಲ. ತನ್ನ ದುಡಿಮೆಯ ಹಣವನ್ನು ಮನೆಯಲ್ಲಿ ಗಂಡನ ಕೈಗೆ ತಂದು ಕೊಡುವ ನಿದರ್ಶನಗಳು ನಮ್ಮಲ್ಲಿ ಅನೇಕ ಇವೆ. ಅಂದರೆ ತನ್ನ ದುಡಿಮೆಯ ಹಣವನ್ನು ಖರ್ಚು ಮಾಡುವ ಅಧಿಕಾರ ಮಹಿಳೆಗೆ ಇರುವುದಿಲ್ಲ. ಹಾಗೊಂದು ವೇಳೆ ಅವಳಿಗೆ ಖರ್ಚು ಮಾಡುವ ಅವಕಾಶವಿದ್ದಾಗಲೂ ಅವಳು ತನ್ನ ದುಡಿಮೆಯ ಹಣವನ್ನು ಕುಟುಂಬದ ಹಿತಾಸಕ್ತಿಗಾಗಿ ಮನೆಯ ನಿರ್ವಹಣೆಗಾಗಿ ಬಳಸುತ್ತಾಳೆಯೇ ಹೊರತು ಸ್ವ-ಹಿತಕ್ಕಾಗಿ ಬಳಸಿಕೊಳ್ಳುವುದಿಲ್ಲ. ಹಾಗೊಂದು ವೇಳೆ ಬಳಸಿಕೊಂಡು ಅಲ್ಪಪ್ರಮಾಣದಲ್ಲಿ ಬಳಕೆ ಮಾಡಿಕೊಂಡಿರುತ್ತಾಳೆ.

ಹೀಗೆ ಬಹುಪಾಲು ಬಡ ಕೃಷಿ ಮಹಿಳೆಯರು ತಮ್ಮ ಕೂಲಿಯ ಹಣವನ್ನು ಗಂಡನ ಕುಡಿತದ ಚಟಕ್ಕೂ, ಮಕ್ಕಳ ಲಾಲನೆ-ಪಾಲನೆಗೂ, ಮನೆಯ ನಿರ್ವಹಣೆಗೆ ಖರ್ಚು ಮಾಡುವುದು ಕಂಡು ಬರುತ್ತದೆ.

ಬಹುಪಾಲು ಕೃಷಿ ಮಹಿಳೆಯರು ಪುರುಷನಿಗೆ ಅಧೀನವಾಗಿಯೇ ಜೀವನ ಸಾಗಿಸುತ್ತಿರುವುದು ತಿಳಿದು ಬರುತ್ತದೆ. ಕೆಲವು ಕೃಷಿ ಕುಟುಂಬದಲ್ಲಿ ಪುರುಷನಿದ್ದಾಗ್ಯೂ ಕುಟುಂಬದ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರ ವಹಿಸಿ ಗಂಡ ಹಿನ್ನೆಲೆಯಲ್ಲಿದ್ದರೆ ಅಥವಾ ಹೆಣ್ಣನ್ನು ಸಮಾನತೆಯಿಂದ

ಕಂಡು ಅವಳಿಗೆ ಕುಟುಂಬದಲ್ಲಿ ಮುಕ್ತ ಅವಕಾಶ ನೀಡಿದರೆ ಅದನ್ನು ನೆರೆ ಹೊರೆಯವರು ಸಹಿಸುವುದಿಲ್ಲ. ಅಂತಹ ಪುರುಷನನ್ನು ಹೆಂಡತಿಯ ಗುಲಾಮ ಎಂದು ಹೆಂಡ್ತಿ ಸೆರಗಿನ ಹಿಂದೆ ಅಡ್ಡಾಡುವವನೆಂದು ಕರೆದು ಆ ಪುರುಷನನ್ನು ಅವಮಾನಗೊಳಿಸಲಾಗುತ್ತದೆ. ಒಂದು ವೇಳೆ ಪುರುಷನಿಗೆ ಸಮಾನವಾಗಿ ಬದುಕುವುದನ್ನು, ನೆರೆಹೊರೆಯವರು ಸಹಿಸುವುದಿಲ್ಲ ಹೆಣ್ಣಿಗೆ ತೊಂದರೆ ಕೊಡುತ್ತಾರೆ. ಹಾಗೆ ಮಹಿಳೆ ಮುನ್ನಡೆಗೆ ಬಂದ ಸಂದರ್ಭಗಳಲ್ಲಿ ಮಹಿಳೆ ಗಂಡುಬೀರಿಯಾಗಿಯೋ, ಗಯ್ಯಾಳಿಯಾಗಿಯೋ ನೋಡುತ್ತಾರೆ.

ನಮ್ಮದು ಪುರುಷ ಪ್ರಧಾನ ಸಮಾಜವಾದ್ದರಿಂದ ಪುರುಷನಿಗಿದ್ದಂತೆ ಮಹಿಳೆಗೆ ಕುಟುಂಬದ ಒಳಗಾಗಲಿ, ಹೊರಗಾಗಲಿ, ನಿರ್ಣಯಾತ್ಮಕ ಹಕ್ಕುಗಳಿರುವುದು ಕಡಿಮೆ. ಹಾಗೊಂದು ವೇಳೆ ಇದ್ದರೂ ಕೆಲವು ಸಂದರ್ಭದಲ್ಲಿ ಕೃಷಿಯಲ್ಲಿ ಪಳಗಿದ ಅನುಭವಸ್ಥೆಯಾಗಿದ್ದರೆ ಮಹಿಳೆ ಆಕೆ ಹೇಳಿದಂತೆ ಬೀಜ ಬಿತ್ತುವ ಕ್ರಿಯೆಯೂ ನಡೆಯುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಕೃಷಿಕರು ಮಾರುಕಟ್ಟೆಯಲ್ಲಿ ಬರುವ ಸಿದ್ಧ ಬೀಜಗಳ ಮೇಲೆಯೇ ಸಂಪೂರ್ಣವಾಗಿ ಅವಲಂಬಿತವಾಗಿರುವುದರಿಂದ ಮುಂಚಿತವಾಗಿಯೇ ಯಾವ ಬೆಳೆ ಬೆಳೆಯಬೇಕೆಂದು ನಿರ್ಧರಿಸುವಲ್ಲಿ ಅಸಹಾಯಕರಾಗಿದ್ದಾರೆ.

ಹೊಲಕ್ಕೆ ಎಷ್ಟು ಆಳು ಬೇಕು ಅವರಿಂದ ಯಾವ ಕೆಲಸ ಹೇಗೆ ಮಾಡಿಸಬೇಕು ಎನ್ನುವುದರಲ್ಲಿ ಮಹಿಳೆ ಭಾಗಿಯಾಗಿರುತ್ತಾಳೆ. ಏಕೆಂದರೆ ಆಳುಗಳ ಹಿಂದೆ ಹೋಗಿ ಕೆಲಸ ಮಾಡಿಸುವವರು ಬಹುಪಾಲು ಮಹಿಳೆಯರೇ ಆಗಿರುತ್ತಾರೆ. ಆದರೆ ಕುಟುಂಬದ ಹಣಕಾಸಿನ ವ್ಯವಹಾರಗಳೆಲ್ಲವೂ ಗಂಡಸಿನ ಮೂಲಕವೇ ನಡೆಯಲ್ಪಡುತ್ತಿರುತ್ತವೆ. ಆದರೆ ಹೊಲದಲ್ಲಿ ದುಡಿಯುವ ವಿಷಯ ಬಂದಾಗ ಅಲ್ಲಿ ಮಹಿಳೆ ಪಾಲುದಾರಿಕೆ ಅಧಿಕವಾಗಿ ಕಂಡು ಬರುತ್ತದೆ.

ಕೃಷಿಯಲ್ಲಿ ಪುರುಷನಿಂದ ಮಾಡಲ್ಪಡುತ್ತಿರುವ ಅಥವಾ ಪುರುಷ ಮಾಡಬಹುದಾದ ಕೆಲಸಗಳನ್ನು ಮಹಿಳೆಯರಿಗೆ ನಿರ್ವಹಿಸುವುದಕ್ಕೆ ಆಗದು ಎಂದು ಹೇಳುವುದಷ್ಟೇ ಆಗುವುದಿಲ್ಲ. ಏಕೆಂದರೆ ನಮ್ಮ ನಡುವೆ ಕೃಷಿಯ ಎಲ್ಲ ಕೆಲಸಗಳನ್ನು ಪುರುಷರ ಸಹಾಯವಿಲ್ಲದೆ ನಿರ್ವಹಿಸಿಕೊಂಡು ಹೋಗುವ ಮಹಿಳೆಯರು ಇದ್ದಾರೆ. ಇಂತಹ ಮಹಿಳೆಯರ ಪ್ರಮಾಣ ಕಡಿಮೆ ಇರಬಹುದಾದರೂ ಒಟ್ಟಿನಲ್ಲಿ ಮಹಿಳೆ ಕೃಷಿಯ ಎಲ್ಲ ಕೆಲಸ ಕಾರ್ಯಗಳನ್ನು ನಿಭಾಯಿಸಬಲ್ಲಳು. ಆದರೆ ಮಹಿಳೆಯೇ ನಿರ್ವಹಿಸಿಕೊಂಡು ಹೋಗುವ ಕೃಷಿಯ ಸಂದರ್ಭಗಳು ವಿರಳ ಮತ್ತು ಕೆಲವು ಅನಿವಾರ್ಯ ಸ್ಥಿತಿಯಲ್ಲಿ ಮಾತ್ರ ಮಹಿಳೆಯರು ಕೃಷಿಯನ್ನು ತಾವೇ ನಡೆಸಿಕೊಂಡು ಹೋಗುವುದನ್ನು ನೋಡಬಹುದು. ಗಂಡ ಇಲ್ಲವೆ ವಯಸ್ಸಿಗೆ ಬಂದ ಮಕ್ಕಳು ಹೊಲದಲ್ಲಿ ಕೆಲಸ ಮಾಡದೇ ಊರಲ್ಲಿ ಪೋಲಿಗಳಂತೆ ಊರಿನ ರಾಜಕೀಯ ಮಾಡಿಕೊಂಡು ತಿರುಗುತ್ತಿದ್ದರೆ

* ಇಲ್ಲಿ ಗಂಡು ಮಕ್ಕಳು ಓದುತ್ತಿದ್ದರೆ ಅಥವಾ ಉದ್ಯೋಗಕ್ಕೆ ಹೋಗಿದ್ದಂತಹ ಸಂದರ್ಭದಲ್ಲಿ.
* ಕುಟುಂಬದೊಳಗಿನ ಗಂಡು ಮಕ್ಕಳು ಅನಾರೋಗ್ಯದಿಂದ ಬಳಲುತ್ತಿದ್ದರೆ.

* ಗಂಡು ಮಕ್ಕಳಿದ್ದರು. ಮದುವೆ ಆದ ಮೇಲೆ ವಯಸ್ಸಾದ ತಂದೆ–ತಾಯಿಗಳನ್ನು ನೋಡದೇ ಬೇರೆ ಕಡೆ ವಾಸವಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಹೆಣ್ಣಮಕ್ಕಳೇ ಕೃಷಿಯಲ್ಲಿ ಅನಿವಾರ್ಯವಾಗಿ ಕೆಲಸಗಳನ್ನು ಮಾಡುತ್ತಾರೆ ಮತ್ತು ಕೂಲಿ ಆಳುಗಳನ್ನು ಇಟ್ಟು ಮಾಡಿಸುತ್ತಾರೆ.

**೫.೪. ಮಹಿಳೆ ಮತ್ತು ಸ್ವ–ಸಹಾಯ ಸಂಘಗಳು :**

ಉಳಿತಾಯ ಎನ್ನುವುದು ಕೇವಲ ಸರ್ಕಾರಿ ನೌಕರರ, ಶ್ರೀಮಂತರ ಕೆಲವೇ ಬೆರಣಿಕೆಯಷ್ಟು ಜನರ ಸ್ವತ್ತು ಎನ್ನುವ ಮನೋಭಾವವಿತ್ತು. ಆದರೆ ಬದಲಾದ ದಿನಗಳಲ್ಲಿ ಉಳಿತಾಯ ಮತ್ತು ಗಳಿಕೆ ಎಂಬುದು ಸಮಾಜದ ಪ್ರತಿಯೊಬ್ಬರಲ್ಲಿ ಮೂಡಿಬಂದ ಆಶಾದಾಯಕ ಬೆಳವಣಿಗೆ. ಬ್ಯಾಂಕ್‌ಗಳು, ಹಲವು ಸೇವಾ ಸಂಸ್ಥೆಗಳು ಕೋಟಿಗಟ್ಟಲೆ ವ್ಯವಹಾರ ಮಾಡುತ್ತಿರಬಹುದು. ಅದು ಕೆಲವೇ ಕೆಲವು ಜನರ ಸ್ವತ್ತಾಗಿರುತ್ತದೆ. ಆದರೆ ಪ್ರಸ್ತುತ ತಮಟಕಲ್ಲು ಗ್ರಾಮ ಅತಿ ಚಿಕ್ಕ ಗ್ರಾಮವಾಗಿರುವುದರಿಂದ ಇಲ್ಲಿ ಯಾವುದೇ ಬ್ಯಾಂಕ್‌ಗಳು ಇಲ್ಲ. ಈ ಗ್ರಾಮದ ಜನರು ಆರ್ಥಿಕ ವಹಿವಾಟಿಗೆ ಸಮೀಪದ ತಾಲ್ಲೂಕು ಕೇಂದ್ರವಾದ ಚಿತ್ರದುರ್ಗಕ್ಕೆ ಹೋಗಬೇಕು. ಸ್ವ–ಸಹಾಯ ಸಂಘಗಳು ರಚನೆಗೊಂಡ ನಂತರ ಗ್ರಾಮದ ರೈತರ ಮತ್ತು ಮಹಿಳೆಯರಲ್ಲಿ ಉಳಿತಾಯ ಭಾವನೆ ಮೂಡಿಸಿ ವ್ಯವಹಾರ ಜ್ಞಾನ ಬೆಳೆಸಿ ಮಹಿಳೆಯರ ಆರ್ಥಿಕ ಬೆಳವಣಿಗೆಗೆ ಸ್ವಾವಲಂಬನೆಗೆ ಭದ್ರಬುನಾದಿ ಹಾಕಿದ್ದಾರೆ. ದೇಶದ ಒಟ್ಟು ಮಹಿಳಾ ಜನಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದ ಮಹಿಳೆಯರು ಅಸಂಘಟಿತರಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಕಳೆದ ೩೦ ವರ್ಷಗಳಿಂದ ಕರ್ನಾಟಕ ರಾಜ್ಯದ ವಿವಿದೆಡೆಗಳಲ್ಲಿ ಅದರಲ್ಲಿಯೂ ಹಿಂದುಳಿದ ಪ್ರದೇಶವೆನ್ನಲಾದ ಗ್ರಾಮೀಣ ಪ್ರದೇಶಗಳಲ್ಲಿ ಸ್ವ–ಸಹಾಯ ಸಂಘಗಳನ್ನು ರಚಿಸಿ ಮಹಿಳೆಯರಿಗೆ ಶಿಕ್ಷಣ, ಆರೋಗ್ಯ, ಆರ್ಥಿಕ ಅಭಿವೃದ್ಧಿ, ಬ್ಯಾಂಕ್ ವ್ಯವಹಾರ ಮುಂತಾದ ವಿಷಯಗಳನ್ನು ಕುರಿತು ತಿಳುವಳಿಕೆಯನ್ನು ನೀಡುವಲ್ಲಿ ಹಾಗೂ ಸರಕಾರಿ ಯೋಜನೆಗಳನ್ನು ಗ್ರಾಮೀಣ ಜನತೆಗೆ ತಲುಪಿಸುವಲ್ಲಿ ಸಹಕಾರಿಯಾಗಿವೆ.

**ಸ್ವ–ಸಹಾಯ ಸಂಘಗಳು** : ಸ್ವ–ಸಹಾಯ ಸಂಘದಲ್ಲಿ ೧೫ ರಿಂದ ೨೦ ಜನ ವಿವಿಧ ಸಮುದಾಯದ ೧೮ ರಿಂದ ೫೦ ವರ್ಷದೊಳಗಿನ ಮಹಿಳೆಯರು ಸದಸ್ಯರಾಗಿರುತ್ತಾರೆ. ಸಾಮಾನ್ಯವಾಗಿ ಪ್ರತಿಯೊಂದು ಸ್ವ–ಸಹಾಯ ಸಂಘಕ್ಕೆ ಒಂದು ಹೆಸರು ಇರುತ್ತದೆ. ಈ ಸಂಘ ನೋಂದಣಿ ಆಗಿರಬಹುದು ಅಥವಾ ನೋಂದಣಿ ಆಗಿರದೇ ಇರಬಹುದು. ತನ್ನದೇ ಆದ ನೀತಿ ನಿಯಮಗಳಿಂದ ಕೂಡಿರುತ್ತದೆ. ಸಂಘದಲ್ಲಿ ಪ್ರತಿ ವಾರ ಸಭೆ, ಉಳಿತಾಯ, ಸಾಲ ತೆಗೆದುಕೊಳ್ಳುವುದು, ಮರುಪಾವತಿ, ಬ್ಯಾಂಕ್ ಖಾತೆ, ಜಂಟಿ ಸಹಿದಾರರ ಬಗ್ಗೆ ಹಾಗೂ ಮಹಿಳೆಯರ ಸಮಸ್ಯೆಗಳ ಬಗ್ಗೆ, ಗ್ರಾಮದ ಸಮಸ್ಯೆಗಳ ಬಗ್ಗೆ ಹತ್ತು ಹಲವು ವಿಷಯಗಳ ಚರ್ಚೆ ಪರಿಹಾರ ಕ್ರಮಗಳು ಸಂಘಟನೆಯ ಮಹತ್ವ ಕುರಿತು ಚರ್ಚಿಸಲಾಗುತ್ತದೆ. ಹಾಗೆಯೇ ಇಂದು ಅನೇಕ ಸರ್ಕಾರಿ, ಅರೆಸರ್ಕಾರಿ, ವಿದೇಶಿ ಯೋಜನೆಗಳನ್ನು ಮಹಿಳೆಯರು ಗ್ರಾಮೀಣ ಭಾಗದಲ್ಲಿ ಪಡೆದುಕೊಂಡು ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವಲ್ಲಿ ಯಶಸ್ವಿ ಪಯತ್ನ ಸಾಗಿದೆ. ಮಹಿಳೆಯರು

ತಾವು ಶಿಕ್ಷಣ ಕಲಿಯದೇ ಇದ್ದರೂ ಶಿಕ್ಷಣದ ಮಹತ್ವವನ್ನು ಅರಿತ ಮೇಲೆ ತಮ್ಮ ಮಕ್ಕಳಿಗೆ ಅನೇಕ ತೊಂದರೆಗಳ ನಡುವೆಯೂ ಶಿಕ್ಷಣ ಕೊಡಿಸಲು ಮುಂದಾಗಿದ್ದಾರೆ. ಮನೆಯ ನಿರ್ಧಾರಗಳಲ್ಲಿ ಮಹಿಳೆಯರು ಭಾಗವಹಿಸುವುದು ಮೊದಲಿಗಿಂತ ಈಗ ಸ್ವಲ್ಪ ಹೆಚ್ಚಾಗಿರುವುದು ಕಂಡು ಬರುತ್ತದೆ.

ಒಟ್ಟಾರೆಯಾಗಿ ಸ್ವ-ಸಹಾಯ ಗುಂಪುಗಳು ಮಹಿಳೆಯನ್ನು ಸಬಲೀಕರಣಗೊಳಿಸುವಲ್ಲಿ ತನ್ನದೇ ಆದಂತಹ ಮಹತ್ವದ ಪಾತ್ರವನ್ನು ನಿರ್ವಹಣೆ ಮಾಡುತ್ತಿದೆ. ಅವಳ ಸಾಮಾಜಿಕ, ಆರ್ಥಿಕ, ಆರೋಗ್ಯಕ್ಕೆ ಸಂಬಂಧಿಸಿದಂತೆ ಸ್ಥಾನಮಾನಗಳು, ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಎತ್ತರಿಸಲು ಸಹಕರಿಸಿವೆ. ಸ್ವ-ಸಹಾಯ ಸಂಘಗಳು ಗ್ರಾಮೀಣ ಮಹಿಳೆಯರ ಬದುಕಿನಲ್ಲಿರುವ ತೊಡಕುಗಳ ವಿರುದ್ಧ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿ ಪರಿಹಾರಗಳು ಸಾಧ್ಯ ಎಂಬ ಆತ್ಮವಿಶ್ವಾಸವನ್ನು ಮೂಡಿಸಿ ಶಾಂತ ವಾತಾವರಣವನ್ನು ನಿರ್ಮಿಸಿ ಮಹಿಳೆಯರು ಸಂಘಟಿತರಾಗುವುದು ಅತೀ ಅವಶ್ಯಕವೆಂದು ತಿಳಿಸಿವೆ. ಮಹಿಳೆ ಮತ್ತು ಸ್ವ-ಸಹಾಯ ಸಂಘ ಒಂದು ಬಿಟ್ಟು ಇನ್ನೊಂದು ಇಲ್ಲವೆಂಬಂತೆ ಮಹಿಳೆಯನ್ನು ಪ್ರಗತಿಯ ಪ್ರಕ್ರಿಯೆಯಲ್ಲಿ ಇಟ್ಟಿವೆ. ಇವು ಎರಡು ಒಂದೇ ನಾಣ್ಯದ ಎರಡು ಮುಖದಂತೆ ಕಾರ್ಯನಿರ್ವಹಿಸುತ್ತಿವೆ. ಆದರೂ ಮಹಿಳೆ ಸ್ವ-ಸಹಾಯ ಗುಂಪಿನಲ್ಲಿ ಪೂರ್ಣಪ್ರಮಾಣದಲ್ಲಿ ಸಬಲತೆಯನ್ನು ಸಾಧಿಸಬೇಕಾಗಿದೆ.

ಭಾರತ ಹಲವು ಜಾತಿ, ಮತಗಳ ಒಂದು ಬಹು ವಿಶಾಲ ವೈವಿಧ್ಯಮಯ ದೇಶವಾಗಿದೆ. ಭಾರತದಲ್ಲಿ ಅನೇಕ ಜಾತೀಯತೆ ಮತ್ತು ತರ್ಕಾತೀತ ನಡವಳಿಕೆಗಳು ಅನೇಕ ಸಮಸ್ಯೆಗಳನ್ನು ಉಂಟು ಮಾಡುತ್ತವೆ. ಅಭಿವೃದ್ಧಿಗಾಗಿ ಒಗ್ಗೂಡಲಾಗದಿರುವುದು ಅವುಗಳಲ್ಲಿ ಬಹಳ ದೊಡ್ಡ ಸಮಸ್ಯೆ. ಗ್ರಾಮೀಣ ಪ್ರದೇಶದ ಜನರು ಸ್ಥಳೀಯ ವೈಯಕ್ತಿಕ ನಾಯಕತ್ವವನ್ನು ಬಹುತೇಕವಾಗಿ ನಿರಾಕರಿಸುತ್ತಾರೆ. ಆದುದರಿಂದ ಆರ್ಥಿಕ ಅಭಿವೃದ್ಧಿಗೆ ಸಾಂಸ್ಥಿಕ ಪ್ರಯತ್ನಗಳೇ ಬೇಕಾಗುತ್ತವೆ. ಈ ನಿಟ್ಟಿನಲ್ಲಿ ೨೦ನೇ ಶತಮಾನದ ಆದಿಯಿಂದ ಸಹಕಾರಿ ಸಂಘ-ಸಂಸ್ಥೆಗಳು ನಿರೀಕ್ಷಿತ ಮಟ್ಟದಲ್ಲಿ ಪ್ರಗತಿಯನ್ನು ಸಾಧಿಸಿಲ್ಲ. ಹಾಗಾಗಿ ಸರಕಾರೇತರ ಸಂಸ್ಥೆಗಳ ಮೂಲಕ ಅಭಿವೃದ್ಧಿಸುವ ಪ್ರಯತ್ನಗಳನ್ನು ಗ್ರಾಮೀಣ ಭಾರತದಲ್ಲಿ ಅಲ್ಲಲ್ಲಿ ಮಾಡಲಾಗುತ್ತಿದೆ. ಸರಕಾರವು ಕೂಡ ಇಂತಹ ಪ್ರಯತ್ನಗಳನ್ನು ಮಾಡುತ್ತಿದೆ. ಈ ಪ್ರಯತ್ನಗಳು ಸ್ವ-ಸಹಾಯ ಗುಂಪುಗಳ ಹುಟ್ಟಿಗೆ ಮತ್ತು ಬೆಳವಣಿಗೆಗೆ ಕಾರಣವಾಗಿವೆ. ಜನರು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಸುಧಾರಿಸಲು ಮಾಡಿಕೊಂಡ ಸಣ್ಣ ಸಂಘಟನೆಗಳನ್ನು ಸ್ವಸಹಾಯ ಗುಂಪುಗಳೆಂದು ಕರೆಯಲಾಗುತ್ತದೆ.

ಗ್ರಾಮೀಣ ಭಾರತವು ಹಲವು ಸಮಸ್ಯೆಗಳ ಆಗರವಾಗಿದೆ. ಬಡತನ, ನಿರುದ್ಯೋಗ, ಅನಾರೋಗ್ಯ, ಸಮುದಾಯತೆ, ವಸತಿರಾಹಿತ್ಯ, ಶೋಷಣೆ ಮತ್ತು ಮೂಲ ಅವಶ್ಯಕತೆಗಳ ಅಭಾವದಿಂದಾಗಿ ಗ್ರಾಮೀಣ ಭಾರತವು ನಗರ ಭಾರತಕ್ಕಿಂತ ತುಂಬಾ ಹಿಂದುಳಿದಿದೆ. ದೇಶದ ಬಹುತೇಕ ಸಂಪತ್ತು ಇರುವುದು ಗ್ರಾಮೀಣ ಪ್ರದೇಶಗಳಲ್ಲಿ. ಆದರೆ ಅದು ಬಳಕೆಯಾಗುತ್ತಿರುವುದು ಪಟ್ಟಣ ಪ್ರದೇಶಗಳ ಜನರ ಸೌಲಭ್ಯ ನಿರ್ಮಾಣಕ್ಕಾಗಿ. ಈ ವಿರೋಧಾಭಾಸಗಳ ನಿವಾರಣೆಗಾಗಿ ಭಾರತ ಸರ್ಕಾರವು ಗ್ರಾಮೀಣಾಭಿವೃದ್ಧಿಯ ಕಾರ್ಯ ಮಹಿಳಾ ಸ್ವಾವಲಂಬನೆಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

## ಪ್ರಸ್ತುತ ತಮಟಕಲ್ಲು ಗ್ರಾಮದಲ್ಲಿ ಕಂಡುಬರುವಂತಹ ಸ್ವ-ಸಹಾಯ ಸಂಘಗಳ ವಿವರ

| ಕ್ರ.ಸಂ | ಸ್ವಸಂ.ಹೆಸರು | ಸ್ಥಾಪನೆ ವರ್ಷ | ಸ.ಸೇ.ಸ್ಥಳ | ವಾರದ ಉಳಿತಾಯ | ಸಂ.ಒಟ್ಟು ಉಳಿತಾಯ | ಸ್ಥಾ ಕಳೆದ ವರ್ಷಗಳು |
|---|---|---|---|---|---|---|
| ೧ | ಶ್ರೀಮಯಮ್ಮದೇವಿ | ೫/೦೪/೨೦೧೪ | ಮನೆಯಲ್ಲಿ | ೫೦೦೦೦೦ | ೭೧೭೯೪೬ | ೫.೭ |
| ೨ | ಶ್ರೀಅಂಜನದೇವಿ | ೧೩/೮/೨೦೧೨ | ಮನೆಗಳಲ್ಲಿ | ೫೦೦೦೦ | ೭೦೬೪೩೧ | ೭.೩ |
| ೩ | ಶ್ರೀಭಾರತಿ | ೧೩/೮/೨೦೧೨ | ಮನೆಗಳಲ್ಲಿ | ೧೦೦ | ೬೯೧೫೪ | ೭.೩ |
| ೪ | ವೈಭವಲಕ್ಷ್ಮೀ | ೧೬/೧೧/೨೦೧೨ | ಮನೆಗಳಲ್ಲಿ | ೫೦ | ೫೫೬೦೦೬ | ೭ |
| ೫ | ಶ್ರೀಬಸವೇಶ್ವರ | ೧೪/೭/೨೦೧೫ | ಮನೆಗಳಲ್ಲಿ | ೫೦೦೦೦ | ೪೭೮೬೦೦ | ೪.೪ |
| ೬ | ಶ್ರೀಬರಗೇರಮ್ಮ | ೧೫/೮/೨೦೧೫ | ಮನೆಗಳಲ್ಲಿ | ೧೦೦ | ೪೬೧೫೪೨ | ೪.೩ |
| ೭ | ನೇತ್ರವತಿ | ೧೩/೮/೨೦೧೨ | ಮನೆಗಳಲ್ಲಿ | ೨೦ | ೪೫೨೭೭೬ | ೭.೩ |
| ೮ | ವಾಲ್ಮೀಕಿ | ೨೦/೭/೨೦೧೫ | ಮನೆಗಳಲ್ಲಿ | ೧೦೦ | ೪೪೮೨೦೨ | ೪.೪ |
| ೯ | ಶ್ರೀಹೇಮವಾತಿ | ೧೩/೮/೨೦೧೨ | ಮನೆಗಳಲ್ಲಿ | ೫೦ | ೩೮೮೯೭೧೭. | ೩ |
| ೧೦ | ಶ್ರೀಮಾರುತಿ | ೧೪/೧೦/೨೦೧೨ | ಮನೆಗಳಲ್ಲಿ | ೫೦ | ೩೭೦೬೯೪ | ೭.೧ |
| ೧೧ | ಶ್ರೀಶಾರದ | ೧೩/೮/೨೦೧೨ | ಮನೆಗಳಲ್ಲಿ | ೫೦ | ೩೭೦೬೩೬ | ೭.೩ |
| ೧೨ | ಶ್ರೀವರಲಕ್ಷ್ಮೀ | ೫/೪/೨೦೧೪ | ಮನೆಗಳಲ್ಲಿ | ೫೦ | ೩೫೫೮೧೭ | ೫.೩ |
| ೧೩ | ಶ್ರೀಈಶ್ವರಿ | ೧೩/೮/೨೦೧೨ | ಮನೆಗಳಲ್ಲಿ | ೫೦ | ೩೪೯೩೭೨ | ೭೩ |
| ೧೪ | ಶ್ರೀನಿಧಿ | ೧೨/೮/೨೦೧೪ | ಮನೆಗಳಲ್ಲಿ | ೫೦ | ೩೪೮೭೭೯ | ೫.೩ |
| ೧೫ | ಶ್ರೀಅಂಜನೇಯಸ್ವಾಮಿ | ೨೫/೭/೨೦೧೫ | ಮನೆಗಳಲ್ಲಿ | ೫೦ | ೩೩೪೮೧೯ | ೪೪ |
| ೧೬ | ಶ್ರೀಸಿದ್ದೆಸ್ವರ | ೨೦/೭/೨೦೧೫ | ಮನೆಗಳಲ್ಲಿ | ೫೦ | ೩೨೪೯೮೦ | ೪.೪ |
| ೧೭ | ಶ್ರೀಅಂಬೇಡ್ಕರ್ | ೨೭/೫/೨೦೧೬ | ಮನೆಗಳಲ್ಲಿ | ೨೦ | ೨೭೬೩೮೨ | ೪.೬ |
| ೧೭ | ಶ್ರೀಸಿದ್ದರೂಢ | ೨೫/೧೦/೨೦೧೭ | ಮನೆಗಳಲ್ಲಿ | ೨೦ | ೨೬೮೨೦೮ | ೨.೧ |
| ೧೮ | ಶ್ರೀರಂಗ | ೨೬/೪/೨೦೧೭ | ಮನೆಗಳಲ್ಲಿ | ೨೦ | ೨೬೧೪೨೫ | ೨.೭ |
| ೧೯ | ಶ್ರೀದುರ್ಗಾಂಬಿಕಾ | ೨೮/೧೦/೨೦೧೩ | ಮನೆಗಳಲ್ಲಿ | ೫೦ | ೨೩೮೩೩೨ | ೬.೧ |
| ೨೦ | ಶ್ರೀಉಡಸಲಮ್ಮ | ೧೪/೭/೨೦೧೫ | ಮನೆಗಳಲ್ಲಿ | ೨೦ | ೨೧೮೬೬೩ | ೪.೪ |
| ೨೧ | ಶ್ರೀಗಣೇಶ | ೧೯/೨/೨೦೧೮ | ಮನೆಗಳಲ್ಲಿ | ೫೦ | ೨೧೫೮೪೦ | ೧.೭ |

| | | | | | | |
|---|---|---|---|---|---|---|
| ೨೨ | ಶ್ರೀಮದಕರಿ | ೨೭/೫/೨೦೧೬ | ಮನೆಗಳಲ್ಲಿ | ೫೦ | ೨೦೫೫೮೬ | ೩.೬ |
| ೨೩ | ಶ್ರೀಮಂಜುನಾಥ | ೧೩/೮/೨೦೧೨ | ಮನೆಗಳಲ್ಲಿ | ೨೦ | ೧೯೬೦೩೧ | ೭೩ |
| ೨೪ | ಶ್ರೀವಿನಾಯಕ | ೧೫/೫/೨೦೧೬ | ಮನೆಗಳಲ್ಲಿ | ೨೦ | ೧೯೪೮೩೮ | ೩.೬ |
| ೨೫ | ಶ್ರೀಮೈಲಾರಲಿಂಗೇಶ್ವರ | ೧೫/೧೨/೨೦೧೫ | ಮನೆಗಳಲ್ಲಿ | ೨೦ | ೧೯೪೬೩೯ | ೪.೯ |
| ೨೬ | ಶ್ರೀಸಿದೇಶ್ವರಸ್ವಾಮೀ | ೧೯/೩/೨೦೧೮ | ಮನೆಗಳಲ್ಲಿ | ೨೦ | ೧೯೪೦೨೦ | ೧.೮ |
| ೨೭ | ಶ್ರೀಗೌರಿ | ೪/೯/೨೦೧೬ | ಮನೆಗಳಲ್ಲಿ | ೫೦ | ೧೮೪೭೫೮ | ೩.೨ |
| ೨೮ | ಪ್ರಕೃತಿ | ೨೫/೧೦/೨೦೧೭ | ಮನೆಗಳಲ್ಲಿ | ೨೦ | ೧೬೫೭೭೯ | ೨.೧ |
| ೨೯ | ಶ್ರೀಕಾವೇರಿ | ೧/೧/೨೦೧೬ | ಮನೆಗಳಲ್ಲಿ | ೨೦ | ೧೫೨೯೪೭ | ೩೧೦ |
| ೩೦ | ಶ್ರೀಲಕ್ಷೀಮಿ | ೨೯/೮/೨೦೧೨ | ಮನೆಗಳಲ್ಲಿ | ೨೦ | ೧೪೩೬೭೦ | ೭,೩ |
| ೩೧ | ಶ್ರೀರಾಮ | ೬/೧೧/೨೧೭ | ಮನೆಗಳಲ್ಲಿ | ೫೦ | ೧೨೪೭೨೧ | ೨ |
| ೩೨ | ಶ್ರೀಮಾರಮ್ಮ | ೧೩/೮/೨೦೧೨ | ಮನೆಗಳಲ್ಲಿ | ೨೦ | ೧೧೩೨೮೧ | ೭.೩ |
| ೨೪ | ಶ್ರೀದೇವಿ | ೧೩/೮/೨೦೧೨ | ಮನೆಗಳಲ್ಲಿ | ೫೦ | ೮೭೫೮೯೧ | ೭.೩ |
| ೩೫ | ಶ್ರೀಸರಸ್ವತಿ | ೧೯/೩/೨೦೧೮ | ಮನೆಗಳಲ್ಲಿ | ೫೦ | ೬೪೭೪೦೩ | ೧,೩ |
| ೩೬ | ಶ್ರೀಅನ್ನಪೂರ್ಣೇಶ್ವರಿ | ೧೬/೮/೨೦೧೭ | ಮನೆಗಳಲ್ಲಿ | ೫೦ | ೫೯೪೧೦ | ೨.೩ |
| ೩೭ | ತುಂಗ | ೧೯/೩/೨೦೧೮ | ಮನೆಗಳಲ್ಲಿ | ೫೦ | ೪೬೧೦೨ | ೧.೬ |
| ೩೮ | ಓಬಳೇಶ್ವರ | ೨೫/೩/೨೦೧೮ | ಮನೆಗಳಲ್ಲಿ | ೫೦ | ೩೧೩೫೩ | ೧,೬ |
| ೩೯ | ಶ್ರೀಕೆಂಚಮ್ಮದೇವಿ | ೩೧/೧೨/೨೦೧೮ | ಮನೆಗಳಲ್ಲಿ | ೫೦ | | ೧.೭ |
| ೪೦ | ಶ್ರೀವೀರಭದ್ರೇಶ್ವರ | ೩೧/೧೨/೨೦೧೮ | ಮನೆಗಳಲ್ಲಿ | ೫೦ | | ೧೭ |
| ೪೧ | ಸಿರಿ | ೨೦೧೯ | ಮನೆಗಳಲ್ಲಿ | ೨೦ | | |
| ೪೨ | ಯಶಸ್ವೀನಿ | ೨೦೧೯ | ಮನೆಗಳಲ್ಲಿ | ೨೦ | | |
| ೪೩ | ಸಂಪಿಗೆ | ೨೦೧೯ | ಮನೆಗಳಲ್ಲಿ | ೨೦ | | |

| ಕ್ರ.ಸಂ. | ಸ್ವ–ಸ.ಸಂ.ಹೆಸರು | ಸ್ಥಾಪನೆ ವರ್ಷ | ಸ.ಸೇ ಸ್ಥಳ | ವಾರ(ತಿಂಗಳ) ಉಳಿತಾಯ | ಒ.ಸಂಘದ ಉಳಿತಾಯ | ಸಾ.ವಹಿವಾಟ | ಪ್ರತಿನಿ. ಹೆಸರು |
|---|---|---|---|---|---|---|---|
| ೧. | ಕಾವೇರಿ (೭ಎಸ್‌ಟಿ) | ೨೦೦೦ | ಮನೆಗಳಲ್ಲಿ | ೧೦೦ | ೧೫೦೦ | ೫೦೦೦ | ಸುಲೋಚನ ಮತ್ತು ಸಾಕಮ್ಮ |
| ೨. | ದೇವಿಸಂಘ (೧೨ಎಸ್.ಟಿ.) | ೨೦೦೧ | ಮನೆಗಳಲ್ಲಿ | ೧೦೦ | ೧೨೦೦ | ೫೦೦೦ | ತಿಪ್ಪಮ್ಮ ಮತ್ತು ಓಬಳಮ್ಮ |
| ೩. | ಲಕ್ಷ್ಮೀ ಸಂಘ (೧೦ ಎಸ್.ಟಿ.) | ೨೦೦೧ | ಮನೆಗಳಲ್ಲಿ | ೧೦೦ | ೧೦೦೦ | ೫೦೦೦ | ತಿಪ್ಪಮ್ಮ ಮತ್ತು ಮಂಜಮ್ಮ |
| ೪. | ಶ್ರೀದೇವಿಸಂಘ (೧೦ ಎಸ್.ಟಿ. ೨೪ ಜಿ.ಎಂ.) | ೨೦೦೧ | ಮನೆಗಳಲ್ಲಿ | ೧೦೦ | ೧೨೦೦ | ೫೦೦೦ | ಲತಾ ಮತ್ತು ಅಂಜಿನಮ್ಮ |
| ೫. | ಅಂಜಿನಿ ಸಂಘ (೧೬ಜನ.ಇತರೆ) | ೨೦೦೧ | ಮನೆಗಳಲ್ಲಿ | ೧೦೦ | ೧೬೦೦ | ೫೦೦೦ | ಮೀನಾಕ್ಷಮ್ಮ ಮತ್ತು ಪುಟ್ಟಮ್ಮ |
| ೬. | ಭಾರತಿ (೧೯ಜನ.ಎಸ್.ಟಿ.) | ೨೦೦೧ | ಮನೆಗಳಲ್ಲಿ | ೧೦೦ | ೧೯೦೦ | ೫೦೦೦ | ಮಂಜುಳ ಮತ್ತು ಮಂಗಳ |
| ೭. | ಈಶ್ವರಿ (೧೮ ಇತರೆ) | ೨೦೦೧ | ಮನೆಗಳಲ್ಲಿ | ೧೦೦ | ೧೮೦೦ | ೫೦೦೦ | ರುಕ್ಮಿಣಿ ಮತ್ತು ಪುಟ್ಟಮ್ಮ |
| ೮. | ಅನ್ನಪೂರ್ಣೇಶ್ವರಿ (೧೯ ಇತರೆ) | ೨೦೦೫ | ಮನೆಗಳಲ್ಲಿ | ೧೦೦ | ೧೯೦೦ | ೫೦೦೦ | ರೂಪ ಮತ್ತು ವೆಂಕಟಲಕ್ಷ್ಮಿ |
| ೯. | ಶಾರದ (೧೦ ಎಸ್.ಸಿ.) | ೨೦೦೦ | ಮನೆಗಳಲ್ಲಿ | ೧೦೦ | ೧೦೦೦ | ೫೦೦೦ | ವಿಮಾಲಾಕ್ಷಿ ಮತ್ತು ರತ್ನಮ್ಮ |

ಈ ಸಂಘಗಳು ಗ್ರಾಮೀಣ ಪ್ರದೇಶದ ಮಹಿಳೆಯರಲ್ಲಿ ಹೊಸ ಚೈತನ್ಯ ತುಂಬಿವೆ. ಮಹಿಳೆಯರು ಇಂದು ಸ್ತ್ರೀ ಶಕ್ತಿ ಸಂಘಗಳ ಸದಸ್ಯತ್ವ ಪಡೆದು ಆರ್ಥಿಕವಾಗಿ ಸ್ವಾತಂತ್ರ್ಯ ಪಡೆದುಕೊಂಡಿದ್ದಾರೆ. ಈ ಮಹಿಳಾ ಸಂಘಗಳು ತುಂಬಾ ಹೆಸರು ಪಡೆದಿವೆ. ಇತ್ತೀಚಿಗೆ ಸು ೪-೫ ವರ್ಷದ ಹಿಂದೆ ಹುಟ್ಟಿಕೊಂಡ ಈ ಸಂಘಗಳು ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ತುಂಬಾ ಸಹಕಾರಿಯಾಗಿವೆ. ಅಕ್ಷರಸ್ಥ ಮತ್ತು ಅನಕ್ಷರಸ್ಥ ಎಂಬ ಭೇದವಿಲ್ಲದೆ ಎಲ್ಲಾ ಮಹಿಳೆಯರು ಸಂಘಗಳಿಗೆ ಸೇರಿದ್ದಾರೆ. ಪ್ರಾರಂಭದ ದಿನಗಳಲ್ಲಿ ಈ ಸಂಘದ ಬಗ್ಗೆ ತಿಳುವಳಿಕೆ ಇರಲಿಲ್ಲ. ಅಂದಿನ ದಿನಗಳಲ್ಲಿ ವಿದ್ಯಾವಂತ ಮಹಿಳೆಯರು ಸೇರಿಕೊಂಡು ಸಂಘದ ಬಗ್ಗೆ ಅರಿವು ಮೂಡಿಸಿದಾಗ ಎಲ್ಲರೂ ಜಾಗೃತರಾಗಿದ್ದಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಮಹಿಳಾ ಸಂಘಗಳು ತುಂಬಾ ಹೆಸರು ಪಡೆದಿವೆ. ಎಲ್ಲಾ ಗ್ರಾಮದ ಮಹಿಳೆಯರು ಸಂಘ ಕಟ್ಟಿಕೊಂಡು ಪ್ರತಿವಾರಕ್ಕೆ ಒಂದು ಸಾರಿ ಒಂದು ಕಡೆ ಸಭೆ ಸೇರುತ್ತಾರೆ. ಮಹಿಳೆಯರು ಊರಿನ ಬೇರೆ ಬೇರೆ ಸಮುದಾಯದ ಮಹಿಳೆಯರೊಂದಿಗೆ ಸಂಘ ಕಟ್ಟಿಕೊಂಡು ಚೀಟಿ ವ್ಯವಹಾರ ಮಾಡುತ್ತಿದ್ದಾರೆ. ಇವರೆಲ್ಲರೂ ಹಾಕಿದ ಹಣವನ್ನು ಯಾರಾದರೊಬ್ಬರು ಕಡಿಮೆ ಬಡ್ಡಿಗೆ ಸಾಲವಾಗಿ ಪಡೆಯುತ್ತಾರೆ. ಹೀಗೆ ಇಂದಿನ ಮಹಿಳೆ ತಮ್ಮ ಕಷ್ಟ-ಸುಖಗಳಿಗೆ ಇಂತಹ ಸಂಘಗಳಿಂದ ಹಣ ಪಡೆದುಕೊಳ್ಳುತ್ತಾರೆ. ಉದಾಹರಣೆ ಮೂಲಕ ಹೇಳುವುದಾದರೆ; ಶಿಲ್ಪರವರು ಹೇಳುವಂತೆ ನಾವು ಮಹಿಳಾ ಸಂಘಕ್ಕೆ ಸೇರಿಕೊಂಡಿರುವುದರಿಂದ ತುಂಬ ಉಪಯೋಗವಾಗಿದೆ. ಸಂಘಕ್ಕೆ ಸೇರಿ ಏಳು ವರ್ಷಗಳಾಗಿವೆ. ನಾವು ಸಂಘದಿಂದ ಕೊಡುವ ಹಣವನ್ನು ಹೇಗೆ ಉಪಯೋಗಿಸಿಕೊಳ್ಳುತ್ತೇವೆ. ಹಾಗೆ ಅನುಕೂಲವಿದೆ. ವಾರ ೨೦ ಅಥವಾ ೫೦ರೂ ಉಳಿತಾಯ ಮಾಡುತ್ತೇವೆ. ನಮಗೆ ಒಂದು ಲಕ್ಷದವರೆಗೆ ಸಾಲ ಕೊಡುತ್ತಾರೆ. ನಾನು ನಾಲ್ಕು ಬಾರಿ ಸಾಲ ತೆಗೆದುಕೊಂಡಿದ್ದು ಮನೆ ಕಟ್ಟಲು ಉಪಯೋಗಿಸಿಕೊಂಡಿದ್ದೇನೆ. ಸಂಘದಲ್ಲಿ ಮಹಿಳೆ ಕೇಳಿದ ತಕ್ಷಣ ಸಾಲ ಕೊಡುವುದಿಲ್ಲ. ಅವಳಿಗೆ ಜಾಮೀನು ಆಗಿ ಅವಳ ಗಂಡ ಸಹಿ ಹಾಕಿದಾಗ ಮಾತ್ರ ಅವಳಿಗೆ ಸಾಲ ಕೊಡುತ್ತಾರೆ. ಗಂಡ ಇಲ್ಲವಾದರೆ ಮಗ ಅಥವಾ ತುಂಬ ಹತ್ತಿರ ಸಂಬಂಧಿಗಳು ಅವಳಿಗೆ ಶ್ಯೂರಿಟಿ ಕೊಟ್ಟಾಗ ಮಾತ್ರ ಅವಳಿಗೆ ಸಾಲ ಕೊಡುತ್ತಾರೆ. ಇವರು ಸಾಲವನ್ನು ಎರಡು ವರ್ಷ ಅಥವಾ ಮೂರು ವರ್ಷಕ್ಕೆ ತೀರಿಸಲು ಸಮಯ ತೆಗೆದುಕೊಂಡಿದ್ದು ವಾರದ ಉಳಿತಾಯದ ಜೊತೆ ಸಾಲದ ಹಣವನ್ನು ಸ್ವಲ್ಪ ಭಾಗ ಮರುಪಾವತಿ ಮಾಡಬೇಕು. ಇಲ್ಲದಿದ್ದರೆ ಈ ಮಳೆ ಬೆಳೆಯಾಗೆ ಬದುಕುವುದಕ್ಕೆ ಆಗುವುದಿಲ್ಲ. ನನ್ನ ಗಂಡ ಕೂಲಿ ಹೋಗುವುದರಿಂದ ವಾರದ ಉಳಿತಾಯ ಮತ್ತು ಸಾಲ ಮರುಪಾವತಿಸಲು ಸಾಧ್ಯ. ಸಂಘಕ್ಕೆ ಸೇರಿರೋದರಿಂದ ಊರಿನ ಲೇವಾದೇವಿಗಾರರಿಂದ ಹೆಚ್ಚಿನ ಬಡ್ಡಿಗೆ ಸಾಲ ತರುವುದು ತಪ್ಪಿದೆ. ಇಲ್ಲವಾದರೆ ಎರಡು ಅಥವಾ ಮೂರು ರೂಪಾಯಿ ಬಡ್ಡಿಗೆ ಸಾಲ ತಂದು ಸಾಲಕ್ಕಿಂತ ಬಡ್ಡಿಯೇ ಜಾಸ್ತಿಯಾಗಿ ಅವರ ಹತ್ತಿರ ಬಾಯಿಗೆ ಬಂದ ಹಾಗೆ ಬೈಯಿಸಿಕೊಳ್ಳಬೇಕಿತ್ತು. ಇಂತಹ ಕಷ್ಟದಿಂದ ಪಾರಾಗಲು ಸ್ತ್ರೀ ಶಕ್ತಿ ಸಂಘಗಳು ತುಂಬ ಅನುಕೂಲಗಳನ್ನು ಒದಗಿಸಿಕೊಟ್ಟಿವೆ.

**ಜಯಮ್ಮ** : ಲೇವದೇವಿಗಾರರ ಬಳಿ ಹೆಚ್ಚಿನ ಬಡ್ಡಿಗೆ ಸಾಲ ತಂದು ಸಾಲ ಕಟ್ಟಲಾರದೆ ಸಾಯಬೇಕಿತ್ತು. ಇಂತಹ ಸಮಯದಲ್ಲಿ ಮಹಿಳಾ ಸಂಘಗಳು ಬಂದು ತುಂಬ ಮಹಿಳೆಯರಿಗೆ ಅನುಕೂಲವಾಗಿದೆ. ನಾನು ಸಂಘಕ್ಕೆ ಸೇರಿ ೧೦ ವರ್ಷಗಳಾಗಿವೆ. ನಾವು ಒಂದೇ ಬಾರಿ ದೊಡ್ಡ ಮೊತ್ತ ಹಣ ಕೂಡಿಡಲು ಸಾಧ್ಯವಿಲ್ಲ. ಸಂಘಕ್ಕಾದರೆ ವಾರಕ್ಕೆ ೨೦, ೫೦ ರೂ. ಕಟ್ಟಿ ಉಳಿತಾಯ ಮಾಡುವುದರಿಂದ ಹಣ ಉಳಿತಾಯವು ಆಗುತ್ತದೆ ಮತ್ತು ಸಂಘದಿಂದ ಸಾಕಷ್ಟು ಸೌಲಭ್ಯಗಳು ಲಭ್ಯವಾಗುತ್ತವೆ. ನಾನು ಸಂಘದಿಂದ ಸಾಲ ತೆಗೆದುಕೊಂಡು ಮನೆ ಕಟ್ಟಲು, ಮತ್ತೊಂದು ಸಲ ಸಲ ತೆಗೆದುಕೊಂಡು ಮಗಳ ಮದುವೆ ಮಾಡಿದ್ದೇನೆ. ಸಂಘದಿಂದ ಸಾಲವನ್ನು ತೆಗೆದುಕೊಳ್ಳುವುದರಿಂದ ಕಡಿಮೆ ಬಡ್ಡಿ ಬೀಳುತ್ತದೆ. ಕೆಲವೊಮ್ಮೆ ಸಬ್ಸಿಡಿ ಲೋನ್ ಅಂತ ಸಹ ಕೊಡುತ್ತಾರೆ.

ಈ ಸಂಘಕ್ಕೆ ಸೇರಿ ಸಾಲ ತೆಗೆದುಕೊಂಡವರು ವಾರ ಉಳಿತಾಯದ ಜೊತೆ ಸಾಲ ಮರು ಪಾವತಿಯನ್ನು ಸಹ ಮಾಡಬೇಕು. ಕೂಲಿ ಕೆಲಸ ಮಾಡುವವರಿಗೆ, ಹಾಲು ಮೊಸರು ಮಾರುವುದು, ಗಾರೆ ಕೆಲಸ, ಕಡ್ಲೆಬಟ್ಟಿಯ ಕೆಲಸ ಮಾಡುವವರಿಗೆ ವಾರಕ್ಕೊಮ್ಮೆ ಬಟವಾಡಿ ಆಗುವುದರಿಂದ ಸಾಲ ಕಟ್ಟಲು ಅನುಕೂಲವಾಗುತ್ತದೆ. ಮತ್ತೆ ಕೆಲವರು ನಾವು ಕೂಲಿ ಹೋಗಿ ಉಳಿದ ಹಣ ಉಳಿತಾಯ ಮಾಡಿ ಬಂಗಾರ ತೆಗೆದುಕೊಳ್ಳುವುದು ಕನಸಿನ ಮಾತು. ಆದ್ದರಿಂದ ಸಂಘದಲ್ಲಿ ದೊಡ್ಡ ಮೊತ್ತದ ಹಣ ತೆಗೆದುಕೊಂಡು ನಮಗೆ ಬೇಕಾದ ಒಡವೆ ಆಭರಣಗಳನ್ನು ಸಹ ಬಿಡಿಸಿಕೊಳ್ಳಲು ಸಂಘದಿಂದ ಸಾಲಗಳನ್ನು ತೆಗೆದುಕೊಳ್ಳುವುದಾಗಿ ಹೇಳಿದರು.

**ಅನ್ನಪೂರ್ಣಮ್ಮ** : ನಾನು ಅಂಗನವಾಡಿ ಸಹಾಯಕಿ. ಸಂಘಕ್ಕೆ ಸೇರಿ ಹತ್ತು ವರ್ಷಗಳಾಗಿವೆ. ನಾವು ವಾರ ೫೦ರೂ ಉಳಿತಾಯ ಮಾಡುತ್ತೇವೆ. ನಾನು ಸಂಘದಲ್ಲಿ ಸಾಲ ತೆಗೆದುಕೊಂಡು ಒಡವೆಗಳನ್ನು ತೆಗೆದುಕೊಡಿದ್ದೇನೆ. ಮಗನಿಗೆ ಬೈಕ್ ಕೊಡಿಸಿದ್ದೇನೆ. ಹೊಲದ ಕೆಲಸಗಳಿಗೆ ಬಳಸಿಕೊಂಡಿದ್ದೇನೆ. ಸಾಲ ತೆಗೆದುಕೊಂಡರೆ ಏನು ಖುಷಿ ಇರುತ್ತದೆ. ಸಾಲ ತೆಗೆದುಕೊಂಡ ಮೇಲೆ ಮನಸ್ಸಿಗೆ ನೆಮ್ಮದಿಯಿಲ್ಲ. ಹೇಗೆ ತೀರಿಸಬೇಕು ಎನ್ನಿಸುತ್ತದೆ. ವಾರ ಸಾಲ ಕಟ್ಟುವುದೆಂದರೆ ತುಂಬ ಕಷ್ಟ ಅನ್ನಿಸುತ್ತದೆ. ಕೂಲಿ ಮಾಡುವವರಿಗೆ, ಆದರೆ ಸಾಲ ತೀರಿಸಲು ಸುಲಭವಾಗುತ್ತದೆ. ಒಂದು ಲಕ್ಷ ಸಾಲ ತೆಗೆದುಕೊಂಡರೆ ವಾರ ೮೫೦ ಸಾಲ ಮರುಪಾವತಿ ಮಾಡಬೇಕು. ಏನೋ ನನ್ನ ಮಕ್ಕಳು ದುಡಿಯುವುದರಿಂದ ಅವರು ಸಾಲ ಕಟ್ಟುತ್ತಾರೆ ಎಂದು ತಿಳಿಸಿದರು.

**ಶಿವಮ್ಮ** : ಮನೆಯಲ್ಲಿ ನಾನು ಮತ್ತು ನನ್ನ ಮಗ ಇದ್ದೀವಿ. ನಾವಿಬ್ಬರೂ ಸಹ ಗಾರೆ ಕೆಲಸಕ್ಕೆ ಹೋಗುತ್ತೇವೆ. ಸ್ವಲ್ಪ ಹೊಲ ಇದೆ ಆದರೆ ಬೇಸಾಯ ಮಾಡಲು ಬೇಕಾದ ಅನುಕೂಲಗಳಾದ ಎತ್ತು, ಬೇಸಾಯದ ಸಾಮಾನುಗಳು ಇಲ್ಲದೆ ಇರುವುದರಿಂದ ಆಧುನಿಕ ಬೇಸಾಯದ ಯಂತ್ರಗಳಿಗೆ ಬಂಡವಾಳ ಹಾಕಲು ಸಾಧ್ಯವಾಗದೇ ಇರುವುದರಿಂದ ಗಾರೆ ಕೆಲಸಕ್ಕೆ ಹೋಗುತ್ತೇವೆ. ಸಂಘಕ್ಕೆ ಸಹ ಸೇರಿಕೊಂಡಿದ್ದೇನೆ. ಸಂಘದಿಂದ ಸಾಲವನ್ನು ತೆಗೆದುಕೊಂಡು ಮನೆಯನ್ನು ಕಟ್ಟಿಸಿಕೊಂಡಿದ್ದೇನೆ. ಸಂಘದಿಂದ ನನಗೆ ಅನುಕೂಲವಾಗಿದೆ ಎಂದು ತಿಳಿಸಿದರು.

**ಪ್ರಜ್ವಲ್** : ಇವರು ಪುರುಷ ಬಂಧು ಸಂಘದಲ್ಲಿದ್ದಾರೆ. ತಮ್ಮಟಕಲ್ಲು ಗ್ರಾಮದಲ್ಲಿರುವ ಏಕೈಕ ಪುರುಷರ ಸಂಘ. ಪುರುಷ ಬಂಧು ಸಂಘ[ಪಿಬಿಜಿ] ಇದರಲ್ಲಿ ೮ಜನ ಸದಸ್ಯರಿದ್ದಾರೆ. ಅವರುಗಳೆಂದರೆ;

೧. ಪ್ರಜ್ವಲ್

೨. ರಘು

೩. ಅಂಜನಮೂರ್ತಿ

೪. ರಾಮಚಾರಿ

೫. ಕುಬೇರ

೬. ಹೇಮಂತ್ ಕುಮಾರ್

೭. ಅಂಜನಮೂರ್ತಿ.ಟಿ

೮. ಓಬಳೇಶ

ಈ ಎಂಟು ಜನ ಸದಸ್ಯರು ವಾರಕ್ಕೆ ೫೦ರೂ ಉಳಿತಾಯ ಮಾಡುವುದಾಗಿ ಹೇಳಿದರು. ಇವರು ಸಂಘದಲ್ಲಿ ೫೦ ಸಾವಿರದವರೆಗೆ ಸಾಲವನ್ನು ನೀಡುತ್ತಾರೆ. ಸಾಲವನ್ನು ತೆಗೆದುಕೊಳ್ಳುವಾಗ ಯಾವ ಉದ್ದೇಶಕ್ಕೆ ತೆಗೆದುಕೊಳ್ಳುತ್ತೇವೆ ಎಂದು ಪುಸ್ತಕದಲ್ಲಿ ನಮೂದಿಸುತ್ತಾರೆ. ಸಂಘದಿಂದ ಸಾಲ ನೀಡಿ ಸುಮ್ಮನೆಯಾಗುವುದಿಲ್ಲ. ಸಾಲ ತೆಗೆದುಕೊಂಡವರಿಗೆ ತರಬೇತಿಯನ್ನು ಸಹ ಸಂಘದ ವತಿಯಿಂದ ನೀಡುತ್ತಾರೆ ಉದಾ:–ಹಸು ತೆಗೆದುಕೊಂಡರೆ ಹಸು ಹೇಗೆ ಸಾಕಬೇಕು ಎಂದು ೧೦ರಿಂದ ೧೩ದಿನಗಳ ಕಾಲ ರುಡ್‌ಸೆಟ್‌ನಲ್ಲಿ ತರಬೇತಿ ನೀಡುತ್ತಾರೆ. ಹೀಗೆ ಆಟೋ,ಅಂಗಡಿ ಇಟ್ಟರೆ ಎಲ್ಲದಕ್ಕೂ ತರಬೇತಿಯನ್ನು ನೀಡುತ್ತಾರೆ. ಉಚಿತವಾಗಿ ಊಟ ವಸತಿಯೊಂದಿಗೆ ತರಬೇತಿ ನೀಡುತ್ತಾರೆ. ರುಡೆಸೆಟ್‌ನಿಂದ ಕರೆದಾಗ ಎಲ್ಲ ಸಂಘದವರಿಗೂ ಮಾಹಿತಿಯನ್ನು ನೀಡುತ್ತೇವೆ. ಜೀವ ವಿಮೆಯನ್ನು ಸಹ ಸಂಘದಿಂದ ಮಾಡಿಸುತ್ತಾರೆ. ಸಂಘದಲ್ಲಿ ೧ಲಕ್ಷಕ್ಕಿಂತ ಹೆಚ್ಚು ಹಣ ಕೇಳಿದರೆ ಈ ವಿಮಾ ಬಾಂಡನ್ನು ಒತ್ತೆಯಾಗಿಟ್ಟುಕೊಂಡು ಸಾಲ ಕೊಡುತ್ತಾರೆ. ಸಂಘದಲ್ಲಿ ಎ ಪಿ ವೈ ಎಂದು ಮತ್ತೊಂದು ಯೋಜನೆ ತಂದಿದ್ದಾರೆ. ಈ ಯೋಜನೆ ಯಾವ ರೀತಿ ಇದೆ ಎಂದರೆ; ಸಂಘದ ಒಬ್ಬ ವ್ಯಕ್ತಿ ವರ್ಷ ಒಂದು ಸಾವಿರ ಹಣವನ್ನು ಸಂಘದವರಿಗೆ ೬೦ವರ್ಷ ಆಗುವವರೆಗೆ ಪಾವತಿಸಬೇಕು. ೬೦ ವರ್ಷದ ನಂತರ ಇವರಿಗೆ ಪಿಂಚಣಿ ಅಥವಾ ಮಾಶಾಸನ ಸೌಲಭ್ಯವನ್ನು ನೀಡುತ್ತಾರೆ. ಮತ್ತೊಂದು ಯೋಜನೆಯ ಬಗ್ಗೆ ಹೇಳುವುದಾದರೆ ನಿರ್ಗತಿಕರಿಗೆ ಅಂದರೆ ತಂದೆ ತಾಯಿಗೆ ಒಬ್ಬನೇ ಮಗ ಇದ್ದು ಅವನು ಕೆಲವು ಕಾರಣಾಂತರದಿಂದ ಮರಣ ಹೊಂದಿದರೆ ಅವರಿಗೆ ಮನೆಯೊಂದೆ ಆಸರೆಯಾಗಿದ್ದು ಹೊಲ ಇಲ್ಲದೆ ದುಡಿಯುವ ಶಕ್ತಿ ಇಲ್ಲದೆ ಇರುವವರಿಗೆ ಪಿ ಬಿ ಜಿ ಸಂಘದವತಿಯಿಂದ ೬೦೦ ರೂ ತಿಂಗಳಿಗೆ ಮಾಶಾಸನ ನೀಡಲಾಗುತ್ತದೆ.

ಆ ವ್ಯಕ್ತಿ ಸಂಘದಲ್ಲಿ ಇರಲಿ ಇಲ್ಲದೇ ಇರಲಿ ಅಂತಹವರಿಗೆ ಈ ಯೋಜನೆ ಲಭ್ಯವಾಗುತ್ತದೆ. ಸಂಘದ ಸೇವಾ ಪ್ರತಿನಿಧಿಗಳೇ ಹಣವನ್ನು ಬಿಡಿಸಿಕೊಡುತ್ತಾರೆ. ಈ ಸಂಘದ ಉದ್ದೇಶ ಬೇರೆಯ ಹಣಕಾಸಿನ ವ್ಯವಹಾರ ಮಾಡುವವರಿಗೆ ಅವಕಾಶ ನೀಡಬಾರದು ಎನ್ನುವುದೆ ಆಗಿದೆ.

ಮಹಿಳೆಯರು ಪ್ರತಿಯೊಂದು ಊರಿನಲ್ಲಿಯೂ ಈ ಸಂಘಗಳಿಗೆ ಸೇರಿಕೊಂಡಿದ್ದಾರೆ. ಈ ಎಲ್ಲಾ ಸಂಘದವರು ಸಂಘದ ಹೆಸರಿನಲ್ಲಿ ಗ್ರಾಮೀಣ ಬ್ಯಾಂಕುಗಳಲ್ಲಿ ಕಡಿಮೆ ಬಡ್ಡಿಯಲ್ಲಿ ಹಣಪಡೆದುಕೊಳ್ಳುತ್ತಾರೆ. ಪುನಃ ಎಲ್ಲರೂ ಒಟ್ಟಿಗೆ ಹಣ ಸೇರಿಸಿ ಬ್ಯಾಂಕಿನ ಸಾಲ ತೀರಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿನ ಮಹಿಳಾ ಸಂಘಗಳ ಕ್ರಿಯಾಶೀಲತೆ ಗಮನಿಸಿ ಸಾಲ ಕೊಡಲು ಬ್ಯಾಂಕುಗಳೇ ಮುಂದೆ ಬಂದಿವೆ. ಎಲ್ಲಾ ಜಿಲ್ಲಾ ಗ್ರಾಮೀಣ ಬ್ಯಾಂಕಿನ ಶಾಖೆಗಳಿಂದ ಹಲವಾರು ಸಂಘಗಳು ಲಕ್ಷಗಟ್ಟಲೇ ಹಣವನ್ನು ಸಾಲ ತೆಗೆದುಕೊಂಡಿವೆ. ಮಹಿಳೆಯರ ಸಂಘಗಳು ಪ್ರಾರಂಭಗೊಂಡ ಮೇಲೆ ಆರ್ಥಿಕವಾಗಿ ಸಬಲೀಕರಣಗೊಂಡಿದ್ದಾರೆ.

ಈ ಸಂಘಗಳು ಹುಟ್ಟಿಕೊಂಡ ಮೇಲೆ ಮಹಿಳೆಯರಲ್ಲಿ ಒಗ್ಗಟ್ಟು ಕಾಣುತ್ತೇವೆ. ಕೆಲವು ಹಳ್ಳಿಗಳಲ್ಲಿ ಸಂಘದ ಹೆಂಗಸರು ಒಟ್ಟಿಗೆ ಸೇರಿಕೊಂಡು ಸರಾಯಿ, ಬ್ರಾಂದಿ ಅಂಗಡಿ ವಿರುದ್ಧ ಹೋರಾಡಿ ಅವುಗಳು ಊರಲ್ಲಿ ಇರದಂತೆ ಮಾಡಿದ್ದಾರೆ.. ಈ ಸಂಘದ ಹೆಸರಿನಲ್ಲಿ ಎಲ್ಲಾ ಮಹಿಳೆಯರು ಸೇರಿಕೊಂಡು ವರ್ಷಕ್ಕೆ ಒಂದು ಸಾರಿ ಪ್ರವಾಸ, ತೀರ್ಥಯಾತ್ರೆಗಳನ್ನು ಕೈಗೊಳ್ಳುತ್ತಿದ್ದಾರೆ. ಹೀಗೆ ಮಹಿಳಾ ಸಂಘಗಳು ವ್ಯಾಪಕವಾದ ಕಾರ್ಯಗಳಲ್ಲಿ ತೊಡಗಿಸಿಕೊಂಡಿವೆ.

ಈ ಮಹಿಳಾ ಸಂಘಗಳು ಗ್ರಾಮೀಣ ಪ್ರದೇಶವನ್ನು ದಾಟಿ ನಗರ ಸಮಾಜದಲ್ಲಿಯೂ ಹುಟ್ಟಿಕೊಂಡಿವೆ. ನಗರ ಸಮಾಜದಲ್ಲಿನ ಮಹಿಳೆ ಅಲ್ಲಿನ ಸಂಘಗಳಲ್ಲಿಯೂ ಸೇರಿಕೊಂಡಿದ್ದಾಳೆ. ಅಲ್ಲಿಯೂ ದೊಡ್ಡ ದೊಡ್ಡ ಯೋಜನೆಗಳನ್ನು ಹಾಕಿಕೊಂಡು ಮಹಿಳೆಯರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಕುಟುಂಬಗಳಲ್ಲಿ ಹೆಚ್ಚಿನದಾಗಿ ವ್ಯವಹಾರ ಮಾಡುತ್ತಾ ಇರುವವರು ಅವರವರ ಯಜಮಾನರು. ಆದರೆ ಈ ಸಂಘಗಳು ಊರುಗಳಲ್ಲಿ ಪ್ರಾರಂಭಗೊಂಡ ಮೇಲೆ ಹೆಂಗಸರಿಗೂ ಸ್ವಲ್ಪ ಅವಕಾಶ ಬಂದಿದೆ. ಈ ಸಂಘಗಳು ಇವರಲ್ಲಿ ಜಾಗೃತಿ ಮೂಡಿಸಿವೆ. ಇಂದು ಮಹಿಳೆ ವ್ಯವಹಾರಿಕವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದಾಳೆ. ಮಹಿಳಾ ಸಂಘಗಳ ಪ್ರಭಾವ ಮತ್ತು ಪ್ರೇರಣೆ ಮಹಿಳೆಯರ ಮೇಲೆ ಸಾಕಷ್ಟು ಆಗಿದೆ. ಈ ಸಂಘಗಳ ಸದಸ್ಯತ್ವದಿಂದ ಹೊರಗಿನ ಪ್ರಪಂಚದ ಜ್ಞಾನವನ್ನು ಪಡೆಯುತ್ತಿದ್ದಾಳೆ.

**೫.೫. ಗ್ರಾಮೀಣ ಮಹಿಳೆ :**

ಗ್ರಾಮೀಣ ಮಹಿಳೆಯರ ಬಗ್ಗೆ ಹೇಳುವುದಾದರೆ ಅವರಿಗೆ ಪ್ರತ್ಯೇಕ ಅಸ್ತಿತ್ವವಿದೆ ಅನ್ನಿಸುವುದಿಲ್ಲ. ಅವರು ಪುರುಷರ ಜೀವನದ ಒಂದು ಭಾಗವಾಗಿಯೇ ಕೆಲಸ ಮಾಡುವರು. ಪುರುಷರಿಗೆ ಅಧೀನರಾಗಿ ವಿಧೇಯರಾಗಿ ಸಂಪೂರ್ಣವಾಗಿ ಶರಣಾಗತರಾಗಿ ಅವರು ನಡೆದುಕೊಳ್ಳುತ್ತಾರೆ.

ಭಾರತೀಯ ಪರಂಪರೆಯಲ್ಲಿ ವೈಭವೀಕರಿಸಲಾಗಿರುವ ಪಾತಿವ್ರತ್ಯದ ಕಲ್ಪನೆಯು ಅವರಿಗೆ ಅರ್ಥವಾಗಿದೆಯೆನ್ನುವುದಕ್ಕಿಂತ ಅದನ್ನು ಮೌನವಾಗಿ ಸ್ವೀಕರಿಸಿದವರಂತೆ ನಡೆದುಕೊಳ್ಳುವರು. ಮಹಿಳೆಯರು ಕುಟುಂಬದ ಬೆನ್ನೆಲುಬಿದ್ದಂತೆ. ಕುಟುಂಬದ ನಿತ್ಯ ವ್ಯವಹಾರಗಳಿಗಾಗಿ ತಮ್ಮ ಜೀವವನ್ನು ಬಿಡುವಿಲ್ಲದಂತೆ ತೇಯುವರು. ಗೃಹಕೃತ್ಯಗಳನ್ನು ಪುರುಷರು ಹಂಚಿಕೊಂಡು ಮಾಡುವ ಕ್ರಮವೇ ಭಾರತದ ಗ್ರಾಮಗಳಲ್ಲಿ ಇಲ್ಲವಾದ್ದರಿಂದ ಅದು ಸಂಪೂರ್ಣವಾಗಿ ಸ್ತ್ರೀಯರ ಕೆಲಸವೇ ಆಗಿದೆ. ಅಗತ್ಯ ಬಿದ್ದಾಗ ಮನೆ ಕೆಲಸದ ಜೊತೆಗೆ ಹೊಲ-ಗದ್ದೆಗಳಲ್ಲಿ ಪುರುಷರೊಂದಿಗೆ ಸೇರಿಕೊಂಡು ದುಡಿಯುವುದು. ಮನೆ, ಹೊಲ ಕೆಲಸದ ಜೊತೆಗೆ ಕೂಲಿ ಕೆಲಸ, ದನಕರುಗಳನ್ನು ಕಾಯುವುದು, ಹುಲ್ಲು ತರುವುದು ಮುಂತಾದ ಕೆಲಸಗಳನ್ನು ಮಾಡಬೇಕಾಗುತ್ತದೆ. "ಗ್ರಾಮೀಣ ಸ್ತ್ರೀಯರಿಗೆ ಕುಟುಂಬವು ತೀರಾ ಅಗತ್ಯವಾಗಿರುವ ಸಂಸ್ಥೆ. ಕುಟುಂಬದ ಹೊರತಾಗಿ ಅವರು ಜೀವಿಸುವುದು ಅಸಾಧ್ಯವಾಗಿದೆ. ಆದ್ದರಿಂದ ಗ್ರಾಮೀಣ ಮಹಿಳೆ ತನ್ನ ಕೌಟುಂಬಿಕ ಜೀವನ ಸುಗಮವಾಗಿ ಸಾಗಿಸಲು ಯಾವುದೇ ಬಗೆಯ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ. ಏಕೆಂದರೆ ಅವಳ ಮನಸ್ಸಿನ ಬಳ್ಳಿ ಬೆಳೆದು ಹೊರಹೋಗದಂತೆ ಹೊರಗಿನ ವಿಚಾರಗಳು ಒಳಗೆ ಬರದಂತೆ ಮಾನ, ಮರ್ಯಾದೆ, ಗೌರವಗಳು ಎಂಬ ಕಟ್ಟಿನಿಂದ ಕಟ್ಟಿ ಹಾಕಿದೆ. ಹಾಗೇ ಇದ್ದರೆ ಮಾತ್ರ ಅವಳಿಗೆ ಮಾರ್ಯದಸ್ಥಳು, ಉತ್ತಮ ಗೃಹಿಣಿ ಎಂಬ ಬಹುಮಾನ ನೀಡುತ್ತಾರೆ. ಮಹಿಳೆಯರಿಗೆ ಕುಟುಂಬದಲ್ಲಿ ಬೇರೆ ಬೇರೆ ರೀತಿಯ ಶೋಷಣೆಗಳಿದ್ದರು ಪುರುಷರಿಗೆ ಅಧೀನರಾಗಿ ನಡೆದುಕೊಳ್ಳಬೇಕಾದ ಅನಿವಾರ್ಯತೆ ಇದೆ. ಅದರಲ್ಲಿಯೇ ಒತ್ತಾಯದಿಂದ ತೃಪ್ತಿ ಕಾಣುವರು. ಭಾರತದ ಗ್ರಾಮೀಣ ಮಹಿಳೆ ತುಂಬಾ ಭಾವುಕ ಜೀವಿಯಾಗಿರುವುದರಿಂದ ತನ್ನ ಗಂಡ ಮಕ್ಕಳು, ಕುಟುಂಬದ ಸದಸ್ಯರ ಜೊತೆಗೆ ಭಾವನಾತ್ಮಕ ಸಂಬಂಧ ಹೊಂದಿರುವುದರಿಂದ ಅವರೆಲ್ಲರ ಸಲುವಾಗಿ ಏನು ಬೇಕಾದರು ತ್ಯಾಗ ಮಾಡಲು ಸಿದ್ಧಳಾಗಬೇಕಾದ ಪರಿಸ್ಥಿತಿ ನಮ್ಮಲ್ಲಿದೆ. ಪಾಶ್ಚಿಮಾತ್ಯರಲ್ಲಿ ಕಾಣುವ ವಿವಾಹ, ವಿಚ್ಛೇದನಾ, ಮರುಮದುವೆ, ವಿರಸ, ಪರಸ್ಪರ ಪರಿತ್ಯಜನೆ ಇವು ಭಾರತದ ಗ್ರಾಮೀಣ ಮಹಿಳೆಯರ ಕಲ್ಪನೆಗೂ ನಿಲುಕದ ಸಂಗತಿಗಳಾಗಿವೆ. (ಚ.ನ. ಶಂಕರರಾವ್, ೨೦೦೫,ಪುಟ ೨೬೦ ರಿಂದ ೨೬೫ರವರೆಗೆ).

ಭಾರತೀಯ ಸಾಂಪ್ರದಾಯಿಕ ಸಮಾಜದಲ್ಲಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ವೈಜ್ಞಾನಿಕವಾಗಿ ಅನೇಕ ಬದಲಾವಣೆಗಳಾಗುತ್ತಿವೆ. ಆದರೆ ನಮ್ಮ ಗ್ರಾಮೀಣ ಮಹಿಳೆಯರ ಸ್ಥಿತಿಗತಿಗಳು ಮಾತ್ರ ಇಂದಿಗೂ ದುಃಸ್ಥಿತಿಯಲ್ಲಿಯೇ ಇವೆ.

ದೇಶದ ಒಟ್ಟು ಮಹಿಳಾ ಸಂಖ್ಯೆಗೆ ಹೋಲಿಸಿದರೆ ಮುಕ್ಕಾಲು ಭಾಗ ಮಹಿಳೆಯರು ಗ್ರಾಮೀಣ ಪ್ರದೇಶದಲ್ಲಿಯೇ ವಾಸಿಸುತ್ತಿದ್ದಾರೆ. ಒಂದೆರೆಡು ವಿಷಯಗಳನ್ನು ಬಿಟ್ಟರೆ ಹಾಡು ಹೇಳುತ್ತಾ ರಾಗಿ, ಜೋಳ ಬೀಸುವುದು, ಕುಟ್ಟುವುದು ಇಂಥವುಗಳು ಇತ್ತೀಚೆಗೆ ಸ್ವಲ್ಪ ಕಡಿಮೆಯಾಗಿವೆ. ಉಳಿದೆಲ್ಲ ವಿಷಯಗಳಲ್ಲಿ ಇವಳು ಹಿಂದೆ ಹೇಗೆ ಸಂಕೋಲೆಗಳಿಂದ ಬಿಗಿಯಲ್ಪಟ್ಟಿದ್ದಳೋ ಇಂದಿಗೂ ಸಹ ಹಾಗೆಯೇ ಮುಂದುವರೆದಿರುವುದು ಶೋಚನೀಯ.

ಬೆಳಗಾಗುವ ಮುನ್ನ ಇವಳ ಕೆಲಸ ಪ್ರಾರಂಭವಾದರೆ ಇನ್ನು ಅದು ಮುಗಿಯುವುದು ರಾತ್ರಿ ಮನೆಯವರೆಲ್ಲ ನಿದ್ರಿಸಿದ ಮೇಲೆಯೇ. ನಸುಗತ್ತಲೆಯಲ್ಲಿ ಎದ್ದು ಕಸ ಗುಡಿಸುವುದರಿಂದ ಹಿಡಿದು ಪಾತ್ರೆ ತೊಳೆಯುವುದು, ಬಟ್ಟೆ ತೊಳೆಯುವುದು, ನೀರು ತುಂಬುವುದು, ಅಡಿಗೆಗೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಅಡುಗೆ ಮಾಡುವುದು, ದನಕರುಗಳನ್ನು ನೋಡಿಕೊಳ್ಳುವುದು, ಗಂಡ–ಮಕ್ಕಳಿಗೆ ಊಟ ಬಡಿಸುವುದು, ಇಷ್ಟಕ್ಕೆ ಇವಳ ಕೆಲಸ ಮುಗಿಯಲಿಲ್ಲ. ಮನೆಯ ಎಲ್ಲ ಕೆಲಸ ಮುಗಿಸಿದ ನಂತರ ತನ್ನ ಹೊಲದ ಕೆಲಸಕ್ಕೆ ಅಥವಾ ಬೇರೆಯವರ ಹೊಲದಲ್ಲಿ ಕೂಲಿ ಕೆಲಸ ಮಾಡುವುದಕ್ಕೆ ಹೋಗುವುದು. ಜೊತೆಯಲ್ಲಿಯೇ ಅಡುಗೆ ಮಾಡಲು ಬೇಕಾದ ಸೌದೆ–ಸೊಪ್ಪುಗಳನ್ನು ತರುವುದು, ದನ–ಕರುಗಳನ್ನು ಮೇಯಿಸುವುದು, ಮುಸ್ಸಂಜೆಯಲ್ಲಿ ಕಟ್ಟಿಗೆ ಮತ್ತು ಹುಲ್ಲಿನ ಹೊರೆಯೊಂದಿಗೆ ಮನೆಗೆ ಬಂದರೆ ಮತ್ತೆ ಕೆಲಸಗಳ ಸರಮಾಲೆ. ಕಸ ಗುಡಿಸುವುದು, ನೀರು, ಅಡಿಗೆ, ಊಟ ಹೀಗೆ ಆಕೆಯ ಕೆಲಸಗಳು ಒಂದೇ ಎರಡೇ. ರೈತನ ಕೆಲಸ ಹೊಲದಲ್ಲಿ ಪ್ರಾರಂಭವಾಗಿ ಹೊಲದಲ್ಲಿಯೇ ಮುಗಿಯುತ್ತವೆ. ಮಹಿಳೆಯ ಕೆಲಸ ಮನೆಯಲ್ಲಿ ಪ್ರಾರಂಭವಾಗಿ ಹೊಲದಲ್ಲಿ ಸಾಗಿ ಪುನಃ ಮನೆಯಲ್ಲಿ ಮುಕ್ತಾಯವಾಗುತ್ತದೆ.

ಇಷ್ಟೆಲ್ಲಾ ಮಾಡಿ ಇವಳಿಗೇನು ಸಿಕ್ಕಿದೆ? ಸಮಾಜದಲ್ಲಿ ಉತ್ತಮ ಸ್ಥಾನವೇ? ಉತ್ತಮ ಆರೋಗ್ಯವೆ? ಉತ್ತಮ ಶಿಕ್ಷಣ ವ್ಯವಸ್ಥೆಯೇ? ನಿರ್ಧಾರಗಳನ್ನು ತೆಗೆದುಕೊಳ್ಳಲು ಅವಕಾಶವೇ? ಸಮಾನ ವೇತನವೇ? ಶೋಷಣಾ ರಹಿತ ಬದುಕೆ? ಈ ಎಲ್ಲವುಗಳಿಂದಲೂ ಗ್ರಾಮೀಣ ಮಹಿಳೆ ವಂಚಿತಳಾಗಿದ್ದಾಳೆ.

ಸಮಾಜದಲ್ಲಿ ಈಕೆಗೆ ನಿಕೃಷ್ಟ ಸ್ಥಾನ. ಈಕೆ ಕೆಲಸಕ್ಕೆ ಬಾರದವಳು. ಈಕೆಯ ಕೆಲಸಕ್ಕೆ ಯಾವುದೇ ಆದಾಯವಿಲ್ಲ. ಅವಳು ಅಡಿಗೆ ಮನೆಯ ಎಲ್ಲ ಕೆಲಸಗಳನ್ನು ಮಾಡಿಕೊಂಡು ಮಕ್ಕಳನ್ನು ಹೆತ್ತು ಗಂಡ ಮತ್ತು ಮಕ್ಕಳ ಸೇವೆ ಮಾಡಬೇಕೆಂಬ ಮನೋಭಾವ ಹಿಂದಿನ ಕಾಲದಿಂದ ಇಂದಿನವರೆಗೆ ಬೆಳೆದುಬಂದಿದೆ. ಈಕೆ ಮಾಡುವ ಮನೆಯ ಎಲ್ಲಾ ಕೆಲಸಗಳನ್ನು ಕೆಲಸ ಎಂದು ಪರಿಗಣಿಸುವುದಿಲ್ಲ.

ಗ್ರಾಮೀಣ ಮಹಿಳೆ ಆರೋಗ್ಯದ ಕಡೆ ಗಮನಹರಿಸುವುದು. ಇವಳಿಗೆ ಪೋಷಣೆ ಮತ್ತು ಆರೈಕೆ ಸಿಗುವುದು ಜೀವನದಲ್ಲಿ ಎರಡು ಬಾರೀ ಮಾತ್ರ ಒಂದು ಋತುಮತಿಯಾದಾಗ, ಮತ್ತೊಂದು ಬಾಣಂತಿಯಾದಾಗ, ಈ ಸಮಯದಲ್ಲಿಯೂ ಅವಳಿಗೆ ಸರಿಯಾದ ಆರೈಕೆಗೆ ಸಿಗುತ್ತದೆ ಎಂದು ಹೇಳಲಾಗದು.

**೫.೬. ವರ್ತಮಾನದಲ್ಲಿ ಮಹಿಳೆ :**

ಮಾನವನ ಪ್ರಾರಂಭದ ಅವಧಿಯಿಂದಲೂ ಸ್ತ್ರೀ ಪುರುಷರಿಬ್ಬರು ಒಂದಿಲ್ಲೊಂದು ಕೆಲಸ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಂದಿರುವರು. ಆದರೆ ನಮ್ಮ ಸಾಮಾಜಿಕ

ವ್ಯವಸ್ಥೆಯೊಳಗಡೆ ಕೆಲಸದ ಪರಿಕಲ್ಪನೆ ಒಂದು ನಿರ್ದಿಷ್ಟ ಯೋಜನಾ ಕ್ರಮಕ್ಕೆ ಅನುಗುಣವಾಗಿದ್ದು ಅದರಲ್ಲಿ ಹೆಣ್ಣು ಮಾಡುವ ಕೆಲಸಗಳು ಗಂಡು ಮಾಡುವ ಕೆಲಸಗಳು ಎಂದು ವರ್ಗೀಕರಿಸಲ್ಪಟ್ಟಿದೆ. ಅಂತೆಯೇ ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದ ವೃತ್ತಿಗಳಲ್ಲಿ ಸ್ತ್ರೀ–ಪುರುಷರಿಬ್ಬರೂ ಭಾಗಿಯಾಗಿದ್ದಾರೆ ಎಂಬುದು ಸಾಮಾನ್ಯವಾದ ಸಂಗತಿಯಾಗಿದೆ. ಮತ್ತು ಮಹಿಳೆಯರಿಂದಲೇ ಆರಂಭವಾಯಿತೆನ್ನಲಾದ ಕೃಷಿ ಇಂದು ತನ್ನ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆ ಹೊಂದಿದೆ. ಆರಂಭದಿಂದ ಇಂದಿನವರೆಗೆ ಕೃಷಿ ನಿರಂತರವಾಗಿ ಕಾಲದ ಜೊತೆ ಎದುರುಗೊಳ್ಳುತ್ತಲೆ ತನ್ನ ಮೂಲ ಸ್ವರೂಪದಲ್ಲಿ ಆಯಾ ಕಾಲಕ್ಕೆ ಅನುಗುಣವಾಗಿ ಅಗತ್ಯವೆನಿಸಿದಂತೆ ಪರಿವರ್ತನೆಗಳನ್ನು ಮೈಗೂಡಿಸಿಕೊಂಡು ಹಲವು ರೀತಿಯ ಸ್ಥಿತ್ಯಂತರಗಳಿಗೆ ಒಳಗಾಗಿದೆ. ಈ ರೀತಿಯ ಕಾಲದೊಂದಿಗೆ ಅನುಸಂಧಾನ ಮತ್ತು ಮುಖಾಮುಖಿಯಿಂದ ಮೂಲ ವೃತ್ತಿ ಮತ್ತು ಪರಿಸರದಲ್ಲಿ ಸಾಕಷ್ಟು ಬದಲಾವಣೆಗಳಾಗಿರುವುದು ಕಂಡುಬರುತ್ತದೆ.

ಸಾಮಾಜಿಕ ವಲಯದಲ್ಲಿ ಮಹಿಳೆಯ ಪಾಲುದಾರಿಕೆಯ ಸ್ವರೂಪ ಯಾವ ರೀತಿಯದ್ದಾಗಿದೆ, ಯಾವ ತರಹದ ಸಮಸ್ಯೆಗಳು ಎದುರಾಗಿವೆ, ಅದರ ಹಿಂದಿರುವ ತಾತ್ವಿಕ ಹಿನ್ನಲೆ ಏನು ಎಂಬುದನ್ನು ಅರಿತುಕೊಳ್ಳುವ ಮತ್ತು ಮಹಿಳೆಯ ಅಭಿವೃದ್ಧಿಗಾಗಿ ಸರ್ಕಾರವು ಕೈಗೊಂಡ ಕಾರ್ಯಕ್ರಮಗಳನ್ನು ಕುರಿತು ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಆಧುನಿಕತೆ ಮಹಿಳೆಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ? ಸ್ತ್ರೀ ಜೀವನದ ಮೇಲಾಗಿರುವ ಪರಿಣಾಮ ಯಾವ ಬಗೆಯದು ಮತ್ತು ಆಧುನಿಕತೆಯಿಂದ ಮಹಿಳಾ ಸಾಂಸ್ಕೃತಿಕ ಪರಿಸರದಲ್ಲಾದ ಪಲ್ಲಟಗಳೇನು ಎಂಬ ವಿಷಯದ ವಿಸ್ತಾರವನ್ನು ಇದು ಒಳಗೊಂಡಿದೆ. ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆಯಿಂದ ಮಹಿಳೆ ಕೃಷಿ ವಲಯದಿಂದ ದೂರ ಸರಿಯುತ್ತಿದ್ದಾಳೆ ಎನ್ನುವ ಕೂಗು ಕೇಳಿ ಬರುತ್ತದೆ ಇದು ನಿಜವೇ? ನಿಜವಾಗಿದ್ದರೆ ಏಕೆ ಕೃಷಿ ವಲಯದಿಂದ ಮಹಿಳೆಯನ್ನು ದೂರ ಇರಿಸಲಾಗುತ್ತಿದೆ ಎನ್ನುವುದನ್ನು ಪ್ರಮುಖವಾಗಿ ಚರ್ಚಿಸಲಾಗಿದೆ.

ಮಹಿಳೆಯ ಬೆನ್ನೆರಳಂತೆ ಬಹು ದೀರ್ಘ ಕಾಲದಿಂದಲೂ ಮುಂದುವರಿದುಕೊಂಡು ಬಂದಿರುವ ಲಿಂಗ ತಾರತಮ್ಯವೊಂದು ಮನುಷ್ಯ ಉಳಿದೆಲ್ಲ ಪ್ರಾಣಿಗಳಿಗಿಂತ ಭಿನ್ನ ಹಾಗೂ ಶ್ರೇಷ್ಠ ಪ್ರಾಣಿ ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಿರುವನು. ಉಳಿದೆಲ್ಲಾ ಪ್ರಾಣಿ ಪಕ್ಷಿಗಳಿಗಿಂತ ಅವನು ಭಿನ್ನವಾಗಲು ಕಾರಣ ಹಲವಾರು ಭಾಷೆ ಸಂಸ್ಕೃತಿ ಇತ್ಯಾದಿಗಳಿಂದಾಗಿ. ತಾನು ಶ್ರೇಷ್ಠ ಎಂದುಕೊಂಡಿರುವ ಮಾನವ ಮತ್ತು ವಿಶ್ವದಲ್ಲಿರುವ ಎಲ್ಲವು ತನಗಾಗಿಯೆ ಸೃಷ್ಟಿಯಾಗಿದೆ ಇದೆಲ್ಲಕ್ಕೂ ತಾನೇ ಒಡೆಯನೆನ್ನುವಂತಹ ಭಾವನೆಯನ್ನು ಬೆಳೆಸಿಕೊಂಡಿರುವುದು ಕಂಡುಬರುತ್ತದೆ. (ಸುಮಂಗಲ ಅತ್ತಿಗೇರಿ, ೨೦೦೭ ಪುಟ ೧೫೬).

ಭಾರತೀಯ ಸಮಾಜದಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತಿರುವ ಧರ್ಮವು ಸಹ ಮಹಿಳೆಯನ್ನು ದ್ವಿತೀಯ ದರ್ಜೆಯ ಅಂತಸ್ತನ್ನು ದಯಪಾಲಿಸಿದೆ. ಧರ್ಮವು ಮಾನವೀಯತೆಯನ್ನು

ಬೋಧಿಸುವಂತಹುದೆಂದೇ ನಂಬಿಸಲಾಗುತ್ತಿದೆ. ಆದರೆ ಇಲ್ಲಿನ ಮಾನವೀಯತೆಯನ್ನುವುದು ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿರುವುದು ಕಂಡುಬರುತ್ತದೆ. ಈ ಧರ್ಮವೆಂಬ ಸಂಸ್ಥೆಯು ಕೂಡ ಪುರುಷ ಪ್ರಧಾನ ವ್ಯವಸ್ಥೆಯ ಕುತಂತ್ರ, ಹುನ್ನಾರದಿಂದಲೇ ಉಗಮವಾಗಿದ್ದು ಅದರಲ್ಲಿ ಪುರುಷರು ತಮ್ಮ ಹಿತವನ್ನು ಪ್ರಮುಖ ದೃಷ್ಟಿಯಲ್ಲಿಟ್ಟುಕೊಂಡೇ ಧಾರ್ಮಿಕ ಆಚರಣೆ ಆರಾಧನೆ, ಸೇವೆ ಹಾಗೂ ಕಟ್ಟುಕಟ್ಟಳೆಗಳನ್ನು ನೀತಿ ನಿರ್ಬಂಧಗಳನ್ನು ರೂಢಿಸಿದ್ದಾರೆ. ಹೀಗಾಗಿ ಧರ್ಮವು ಕೂಡ ಇಬ್ಬಗೆಯ ನೀತಿಯ ನಿಲುವುಗಳನ್ನು ಮೈಗೂಡಿಸಿಕೊಂಡಿರುವುದನ್ನು ನೋಡಬಹುದಾಗಿದೆ.

**೫.೭. ಜನಪದ ಸಾಹಿತ್ಯದಲ್ಲಿ ಮಹಿಳೆ :**

ಜಾನಪದ ಮೂಲತಃವಾಗಿ ಮಹಿಳೆಯರಿಂದ ರೂಪುಗೊಂಡ ಪ್ರಕಾರವೇ ಆಗಿದೆ. ಭಾರತಕ್ಕೆ ವೈದಿಕತೆಯು ಆಕ್ರಮಣ ಮಾಡುವ ಪೂರ್ವದಲ್ಲಿ ಇಲ್ಲಿ ಮಾತೃ ಸಂಸ್ಕೃತಿಯು ಪ್ರಧಾನ ನೆಲೆಯಿಂದ ಕೂಡಿತ್ತು. ಇಲ್ಲಿ ಮಹಿಳೆಯೂ ಕೂಡ ಪುರುಷನಂತೆ ತನ್ನ ಅಭಿವ್ಯಕ್ತಿ ಸ್ವತಂತ್ರ್ಯವನ್ನು ಹೊಂದಿದ್ದಳು. ಇಂತಹ ಸಂದರ್ಭದಲ್ಲಿ ಜಾನಪದಕ್ಕೆ ಬುನಾದಿಯನ್ನು ರೂಪಿಸಿದವಳು ಮಹಿಳೆಯೇ ಆಗಿರುತ್ತಾಳೆ. ಜಾನಪದದ ಗರ್ಭದಲ್ಲಿ ಅನೇಕ ಸಂಸ್ಕೃತಿಗಳು ಅಡಗಿವೆ. ಮಾನವನ ಜನಾಂಗಕ್ಕೆ ಸಂಬಂಧಿಸಿ ಹಲವಾರು ಮೂಲ ಆಧಾರಗಳ ಗಣಿ ಇದು( ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ-೨(೭), ಪುಟ ೭೮).

ಪ್ರಪಂಚದ ಎಲ್ಲ ಸಾಹಿತ್ಯಕ್ಕೂ ಆಯಾ ಭಾಷೆಯ ಜನಪದ ಸಾಹಿತ್ಯವೇ ಮೂಲ ಎಂಬ ಅಭಿಪ್ರಾಯವಿದೆ. ಜನಪದ ಸಾಹಿತ್ಯ ಜನ ಜೀವನದಿಂದಲೇ ಹುಟ್ಟಿರುವುದರಿಂದ ಅದನ್ನು ಜೀವನ ಕಾವ್ಯವೆಂದು ಕರೆಯಬಹುದು. ಅದು ಜೀವನದಿಂದ ಮೂಡಿದ್ದು ಜೀವನಕ್ಕೆ ಸೇರಿದ್ದು ಜೀವನಕ್ಕಾಗಿಯೇ ಬದುಕಿರುವಂಥದ್ದು. ಅಲ್ಲಿಯ ಬದುಕು ಬೇರೆಯಲ್ಲ, ಕಾವ್ಯ ಬೇರೆಯಲ್ಲ ಈ ಸಾಹಿತ್ಯವನ್ನು ಸೃಷ್ಟಿಸಿದವರು ಕಾವ್ಯ ಗ್ರಂಥಗಳನ್ನು ಓದಿದವರಲ್ಲ. ಜೀವನದ ಅನುಭವವನ್ನು ತೋಡಿಕೊಳ್ಳುವುದಕ್ಕೆ ಅದರ ಒತ್ತಡವನ್ನು ಕಡಿಮೆ ಮಾಡುವುದಕ್ಕೆ ಕಥೆ ಕಟ್ಟಿದವರು ಹಾಡಿದವರು. ಈ ಹಾಡು, ಕಥೆಗಳು ಬಾಯಿಂದ ಬಾಯಿಗೆ ತಲೆಮಾರಿನಿಂದ ತಲೆಮಾರಿಗೆ ಹರಿಯಬಂದವು.

ಜಾನಪದದಲ್ಲಿ ಬಹುಮುಖ್ಯವಾದ ಪ್ರಕಾರ ಜನಪದ ಸಾಹಿತ್ಯ. ಜಾನಪದ ಪ್ರಕಾರಗಳ ಅಧ್ಯಯನ ಪ್ರಾರಂಭವಾಗುವ ಮೊದಲೇ ಜನಪದ ಸಾಹಿತ್ಯ ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿ ಮನುಷ್ಯನ ಅಂತರಂಗದ ಅಭಿವ್ಯಕ್ತಿಯ ರೂಪವಾಗಿ ಜನಪದರ ಬದುಕಿನಲ್ಲಿ ಬೆಸೆದು ಬೆಳೆದುಕೊಂಡು ಬಂದಿದೆ.

ನಮ್ಮ ಹಳ್ಳಿಗಳ ಸಂಸ್ಕೃತಿಯು ಒಡಮೂಡಿದ್ದು. ಪಂಡಿತ ಕಾವ್ಯಗಳಿಂದಲ್ಲ. ಶಿಲಾಶಾಸನ ಶಿಲ್ಪಕಲೆಗಳಿಂದಲ್ಲ. ನಿಜವಾದ ಸಂಸ್ಕೃತಿ ಹಳ್ಳಿಗಳ ಹಾಡಲ್ಲಿ. ಜನಪದ ಸಾಹಿತ್ಯ ಒಡಮೂಡಿದ್ದು

"ಜನಪದ ಸಾಹಿತ್ಯ ನಿರಾಡಂಬರ ಸುಂದರಿ" ಎಂಬ ಗದ್ದಗಿಮಠ ಅವರ ಮಾತು ಅರ್ಥ ಸಮಂಜಸವಾಗಿದೆ.

ಮನುಷ್ಯನ ಹುಟ್ಟಿನಿಂದ ಅವನ ಜೊತೆಗೆ ತಾನು ಹುಟ್ಟಿ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿರುವಂಥದ್ದು ಜನಪದ ಸಾಹಿತ್ಯ. ಜನಪದ ಸಾಹಿತ್ಯಕ್ಕೆ ಈಗಿನ ಕನ್ನಡ ಸಾಹಿತ್ಯಕ್ಕೆ ಇರುವ ಹಾಗೇ ಬರವಣಿಗೆ ರೂಪ ಇರಲಿಲ್ಲ. ಅದು ಉಳಿದುಕೊಂಡು ಬಂದಿರುವುದು ಅನಕ್ಷರಸ್ಥನ ಪರಧಿಯಲ್ಲೇ ಉಳಿದು ರಕ್ಷಣೆಗಾಗಿ ಪರಂಪರೆಯಿಂದ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಪರಾಕಾಷ್ಟತೆಯನ್ನು ಏರುವಂಥದ್ದು. ಜಾನಪದದ ಒಂದು ಪ್ರಕಾರವಾದ ಜನಪದ ಸಾಹಿತ್ಯದ ಪ್ರಾಚೀನತೆ ಮಾನವನಷ್ಟೇ ಪ್ರಾಚೀನವಾಗಿದೆ. ಜನಪದ ಸಾಹಿತ್ಯಕ್ಕಿಂತ ಭಿನ್ನವಾಗಿ ಬೆಳೆದುಬಂದ ನಂತರದ ಸಾಹಿತ್ಯ ಆದರೆ ಶಿಷ್ಟ ಸಾಹಿತ್ಯ ಏಕಮಾತ್ರ ಸಾಹಿತ್ಯವಾಗಿ ಸಾಹಿತ್ಯ ಚರಿತ್ರೆಯನ್ನು ರೂಪಿಸಿಕೊಂಡು ಅಕ್ಷರ ಲೋಕವನ್ನು ವ್ಯಾಪಿಸಿದ ಅನೇಕ ವರ್ಷಗಳ ಬಳಿಕ ಜನಪದ ಸಾಹಿತ್ಯದ ಕಡೆಗೆ ಗಮನಹರಿಸಿ ಪಾಶ್ಚಾತ್ಯರ ಪ್ರೇರಣೆಯನ್ನು ಪಡೆದ ಭಾರತೀಯರು ಜನಪದ ಸಾಹಿತ್ಯದ ವಿಶ್ಲೇಷಣೆಗಳು ಮತ್ತು ಸಿದ್ಧಾಂತಗಳು, ವ್ಯಾಖ್ಯಾನಗಳು ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೊರಬಂದಿವೆ. ಜನಪದ ಸಾಹಿತ್ಯ ಕೇವಲ ಪ್ರಾದೇಶಿಕ ವೈವಿಧ್ಯವಾಗಿ ಬೆಳೆದುಬಂದಿಲ್ಲ. ಅಲ್ಲಿನ ಪರಿಸರ ಬದುಕು, ವೃತ್ತಿ, ಭಾಷೆ, ಸಂಸ್ಕೃತಿ ಮುಂತಾದವುಗಳ ಕಾರಣವಾಗಿ ವಿಶಿಷ್ಟತೆಯಿಂದ ಮೂಡಿಬಂದಿದೆ.

ಸೋಬಾನೆ ಪದಗಳು ಸಾಮಾನ್ಯವಾಗಿ ಮದುವೆ, ಮೈನೆರೆದ ಹಾಗೂ ಹೂ ಮುಡಿಸುವ ಸಂದರ್ಭಗಳಲ್ಲಿ ಹೇಳುವ ಹಾಡುಗಳಾಗಿವೆ. ಸೋಬಾನೆ ಶುಭಕೋರುವ ಸಂದರ್ಭದಲ್ಲಿ ಮದುವೆ ಆರಂಭದಿಂದ ಅಂತ್ಯದವರೆಗೆ ಆವರಿಸಿಕೊಂಡಿರುವ ಸೋಬಾನೆ ಪದಗಳು ಪ್ರತಿಯೊಂದು ಸಂದರ್ಭದಲ್ಲಿ ಅಂದರೆ ಒಳ್ಳುಕಲ್ಲು ಕುಟ್ಟುವ, ಅರಿಶಿಣ ಹಚ್ಚುವ, ಸುರುಗಿ ನೀರು ಎರೆಯುವಾಗ, ವೀಳ್ಯೆ ಶಾಸ್ತ್ರ ಮಾಡುವಾಗ, ಧಾರೆ ಎರೆಯುವಾಗ, ಜರಿಯುವ ಸಂದರ್ಭಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಹಾಡುತ್ತಾರೆ. ಈ ಹಾಡುಗಳನ್ನು ಸಾಮಾನ್ಯವಾಗಿ ಎಲ್ಲ ಹೆಣ್ಣು ಮಕ್ಕಳು ಹೇಳಲು ಸಾಧ್ಯವಿಲ್ಲ. ಪರಿಣಿತಿ ಪಡೆದವರು ಮುಮ್ಮೇಳ-ಹಿಮ್ಮೇಳಗಳಲ್ಲಿ ಹಾಡುತ್ತಾರೆ. ಮುಮ್ಮೇಳ ಹೇಳಿದ ಹಾಡಿನ ಚರಣವನ್ನೆ ಪುನರಾವರ್ತನೆಗೊಳಿಸುವ ಇಲ್ಲವೆ ಸೋ ಎನ್ನುವ ಸೊಲ್ಲು ಹೊರಡಿಸುವುದು ಹಿಮ್ಮೇಳದ ಕೆಲಸವಾಗಿರುತ್ತದೆ.

ಜನಪದ ಸಾಹಿತ್ಯ ಹುಟ್ಟಿರುವುದೇ ಗ್ರಾಮೀಣ ಪ್ರದೇಶದ ಕೆಳವರ್ಗದ ಸಂಸ್ಕೃತಿಯಲ್ಲಿ. ಹಾಗಾಗಿ ಜನಪದ ಅಂದರೆ ಅದು ಕ್ರಿಯಾಶೀಲವಾದ ಸಂಪತ್ತು ಇದ್ದ ಹಾಗೆ. ಹಾಗಾಗಿ ಇಂದಿಗೂ ಅದು ಚಲನಶೀಲವಾದ ಕ್ರಿಯೆ ಹೊಂದಿದೆ.

ಮಹಿಳೆ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಗುರುತಿಸಿಕೊಂಡರು. ಅದು ಜನಪ್ರಿಯತೆ ಆಗಲು ಸಾಧ್ಯವಾಗಿಲ್ಲ. ಪ್ರತಿಯೊಂದು ಊರುಗಳಲ್ಲಿ ಜನಪದ, ಕಥೆ, ಒಗಟು, ಗಾದೆ,

ಹೇಳುವವರು ಸಿಗುತ್ತಾರೆ. ಅದರಲ್ಲೂ ಮುಖ್ಯವಾಗಿ ಮದುವೆ ಹಬ್ಬ-ಹರಿದಿನಗಳಲ್ಲಿ ಸೋಬಾನೆ ಹೇಳುವ ಹೆಂಗಸರು, ಜನಪದ ಸಾಹಿತ್ಯದಲ್ಲಿ ಸಹಜವಾಗಿಯೇ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರಲ್ಲಿನ ವಯಸ್ಸಾದ, ಮಧ್ಯವಯಸ್ಸಿನ ಮಹಿಳೆಯರಲ್ಲಿ ಜನಪದ ಸಾಹಿತ್ಯ ಶ್ರೀಮಂತವಾಗಿದೆ.

ಗ್ರಾಮೀಣ ಪ್ರದೇಶದ ಮಹಿಳೆಯರು ಹೆಚ್ಚಿನ ಸಮಯ ಹೊಲಗಳಲ್ಲಿ ಕಳೆಯುತ್ತಾರೆ. ನಿರಂತರವಾಗಿ ಅವರು ಕೆಲಸದಲ್ಲಿ ನಿರತಳಾಗಬೇಕಾಗಿರುವುದರಿಂದ ಆ ಸಮಯದಲ್ಲಿ ಮನಸ್ಸಿನ ದುಗುಡವನ್ನು, ಬೇಜಾರನ್ನು ನೀಗಿಸಿಕೊಳ್ಳಲು ಕೆಲವು ಮಹಿಳೆಯರು ಕತೆ ಕಟ್ಟಿ ಹೇಳುತ್ತಾ ಹೋಗುತ್ತಾರೆ.

ನನ್ನ ಅಧ್ಯಯನಕ್ಕೆ ತೆಗೆದುಕೊಂಡಿರುವ ತಮಟಕಲ್ಲು ಗ್ರಾಮದಲ್ಲಿ ಸೋಬಾನೆ ಹಾಡುಗಳನ್ನು ಹೆಣ್ಣು ಮಕ್ಕಳು ಅದರಲ್ಲೂ ಮಾದಿಗ ಸಮುದಾಯದವರು ಮಾತ್ರ. ತಮ್ಮ ಮದುವೆಯು ಆರಂಭವಾದಾಗಿನಿಂದ ಒಳ್ಳುಕಲ್ಲು ಪೂಜೆ ಮಾಡುವಾಗ, ವಾದ್ಯ ವೈಭವದೊಂದಿಗೆ ಹೆಣ್ಣಿನ ಕಡೆಯವರು ಮದುವೆ ಹಂದರಕ್ಕೆ ತಲುಪಿದಾಗ, ಮದುವೆಯ ಗಂಡು-ಹೆಣ್ಣಿಗೆ ಅರಿಶಿಣ ಹಚ್ಚುವ ಸಂದರ್ಭದಲ್ಲಿ, ನಂತರ ಸುರುಗಿ ನೀರು ಎರೆಯುವಾಗ ನಂತರ ವೀಳ್ಯೆಶಾಸ್ತ್ರ ಮಾಡುವಾಗ ಗಂಡಿನವರಿಗೆ ಹೆಣ್ಣು ಒಪ್ಪಿಗೆಯಾದಲ್ಲಿ ಹೆಣ್ಣಿನವರು ಗಂಡಿನ ಮನೆ ನೋಡುವುದಕ್ಕೆ ಹೋಗುತ್ತಾರೆ. ಗುರು-ಹಿರಿಯರ ಸಮ್ಮುಖದಲ್ಲಿ ಕೊಡು-ತೆಗೆದುಕೊಳ್ಳುವ ಮಾತುಗಳು ನಿಷ್ಕರ್ಷೆಯಾಗಿ ವೀಳ್ಯೆ ವಿನಿಮಯವಾಗುತ್ತದೆ ಇದಕ್ಕೆ ವೀಳ್ಯಶಾಸ್ತ್ರ. ಈ ಸಂದರ್ಭಗಳಲ್ಲಿ ಸೋಬಾನೆ ಹಾಡುಗಳನ್ನು ಹೇಳುತ್ತಾರೆ. ಇಲ್ಲಿ ನಾನು ಸಂಗ್ರಹಿಸಿರುವ ಹಾಡುಗಳು ಎಲ್ಲವನ್ನು ಪೂರ್ಣವಾಗಿ ಇನ್ನು ಸಂಗ್ರಹಿಸಿಲ್ಲ. ಕೆಲವೊಂದನ್ನು ಮಾತ್ರ ಹೇಳಿರುವುದರಿಂದ ಅಷ್ಟನ್ನು ಸಂಗ್ರಹಿಸಿದ್ದೇನೆ.

ಇನ್ನು ತಮಟಕಲ್ಲು ಗ್ರಾಮದಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಪ್ರತಿ ಶನಿವಾರ ಭಜನೆಯನ್ನು ಎರಡು ಗಂಟೆಗಳ ಕಾಲ ಮಾಡುತ್ತಾರೆ. ಅಲ್ಲಿ ಹೇಳಲಾದ ಕೆಲವು ಭಜನೆ ಹಾಡುಗಳನ್ನು ಸಹ ಇಲ್ಲಿ ಸಂಗ್ರಹಿಸಲಾಗಿದೆ.

## ೫.೭.೧. ಸೋಬಾನೆ ಹಾಡುಗಳು

**ವೀಳ್ಯಶಾಸ್ತ್ರ ಮಾಡುವಾಗ ಹೇಳುವ ಹಾಡು**

೧

ನೂರು ವರ್ಷ ಮುದುಕರು ಎಂಬತ್ತು ವರ್ಷ ಯಜಮಾನರು
ಬಂದೆ ಕುಂತಾರೆ ನಡ ಮನೆಗೆ
ಬಂದೆ ಕುಂತಾರೆ ನಡ ಮನೆಗೆ
ಬಂದೆ ಕುಂತಾರೆ ನಡ ಮನೆಯಾಗ ಮಾತನಾಡಿ

ಸಣ್ಣರೊಳ ರೇಷ್ಮಕ್ಕನ ಕೊಡುತ್ತಾರೆ.
ದೊಡ್ಡಪ್ಪ ದೊಡ್ಡಮ್ಮ ದೊಡ್ಡ ಸೋದರ ಮಾವ
ದೊಡ್ಡ ಮನೆಯಾಗಿ ಒಳು ಮಾತೇ ಸೋ ಎನ್ನಿ ಸೋಬಾನ ಬನ್ನಿ ॥
ದೊಡ್ಡನೇ ಮನೆಯಾಗ ಒಳು ಮಾತು ಮಾತಾಡಿಕೊಂಡು
ದೊಡ್ಡ ರೇಷ್ಮಕ್ಕನ ಕೊಡುತ್ತಾರೆ ಸೋ ಎನ್ನಿ ಸೋಬಾನ ಬನ್ನಿ ॥

ಚಿಕಪ್ಪ ಚಿಕ್ಕಮ್ಮ ಚಿಕ್ಕ ಸೋದರ ಮಾವ
ಚಿಕ್ಕ ಮನೆಯಾಗೆ ಒಳು ಮಾತೇ ಸೋ ಎನ್ನಿ ಸೋಬಾನ ಬನ್ನಿ ॥
ಚಿಕ್ಕನೇ ಮನೆಯಾಗ ಒಳು ಮಾತು ಮಾತಾಡಿಕೊಂಡು
ಚಿಕ್ಕ ರೇಷ್ಮಕ್ಕನ ಕೊಡುತ್ತಾರೆ ಸೋ ಎನ್ನಿ ಸೋಬಾನ ಬನ್ನಿ ॥

ಪಟ್ಟೆನ್ನೆ ಸಾಲಾಗೆ ಪಟ್ಟು ಗಣ್ಣಿಯಾಂಗೆ
ಕೊಟ್ಟವರೇ ಮಾತು ಯರವರಿಗೆ ಸೋ ಎನ್ನಿ ಸೋಬಾನ ಬನ್ನಿ ॥
ಕೊಟ್ಟವರೇ ಮಾತು ಯರವರಿಗೆ ಒಳ್ಳೆರಿಗೆ
ಪಟ್ಟೆ ಮಂಚದ ದೊರೆಗಳಿಗೆ ಸೋ ಎನ್ನಿ ಸೋಬಾನ ಬನ್ನಿ ॥
ಶಾಮಿಯಾನ ಸಾಲಾಗಿ ಸಾಲು ಗಣ್ಣಿಯಾಂಗೇ
ಮುಗಿದು ಹೋಯಿತು ಮಾತು ಯರವರಿಗೆ ಸೋ ಎನ್ನಿ ಸೋಬಾನ ಬನ್ನಿ ॥

ಮುಗಿದು ಹೋಯಿತು ಈ ಮಾತು
ಯರವರಿಗೆ ಒಳ್ಳೆಯರಿಗೆ
ಪಟ್ಟೆ ಪಂಚದ ದೊರೆಗಳಿಗೆ ಸೋ ಎನ್ನಿ ಸೋಬಾನ ಬನ್ನಿ ॥
೨
ಹಡಿಬಾರದು ಹೆಣ್ಣು ಮಕ್ಕಳನ್ನ
ಇಡುವಬಾರದು ದೇವರ ಹೆಸರು
ಹಡಿಬಾರದು ಏಳೇಳು ಜನ್ಮಕ್ಕೆ
ಸೋ ಎನ್ನಿ ಸೋಬಾನ ಬನ್ನಿ ॥

ಹಡಿಬಾರದು ಏಳು ಜನ್ಮಕ್ಕೆ ಅಂದೇಳೆ
ಹಡಿದೊಟ್ಟೆ ಬರೀದು ಮನೆ ಬರೀದೆ
ಸೋ ಎನ್ನಿ ಸೋಬಾನ ಬನ್ನಿ ॥
ಹಡಿದೊಟ್ಟೆ ಬರೀದೆ ಮನೆ ಬರೀದೆ ಅಂದೇಳೆ
ಅವರ ಹಡದಮ್ಮ ಅಪ್ಪ ಆಳುತ್ತಾಳೆ
ಸೋ ಎನ್ನಿ ಸೋಬಾನ ಬನ್ನಿ ॥
ಹೆತ್ತು ಬಾರದು ಹೆಣ್ಣು ಮಕ್ಕಳನ್ನ
ಕಟ್ಟುಬಾರದು ದೇವರ ಹೆಸರ್‍ನು
ಹೆತ್ತು ಬಾರದು ಏಳೇಳು ಜನ್ಮಕ್ಕೆ
ಸೋ ಎನ್ನಿ ಸೋಬಾನ ಬನ್ನಿ ॥
ಹೆತ್ತು ಬಾರದ ಏಳೇಳು ಜನ್ಮಕ್ಕೆ ಅಂದೇಳೆ
ಅವರ ಹೆತ್ತಮ್ಮ ಅಪ್ಪ ಅಳುತ್ತಾರೆ
ಸೋ ಎನ್ನಿ ಸೋಬಾನ ಬನ್ನಿ ॥

ಓಣಿಯೊಳಗೆ ನೀರು ಓಣೆಗೆ ಇದ್ದಾಗೆ
ಓಣಿಯೊಳಗೆ ನನ್ನ ಮಗಳ ಸುಳಿವಿಲ್ಲ
ಸೋ ಎನ್ನಿ ಸೋಬಾನ ಬನ್ನಿ ॥

ಓಣಿಯೊಳಗೆ ನನ್ನ ಮಗಳ ಸುಳಿವಿಲ್ಲ ಅಂದೇಳೆ
ಅವರ ಹಡದಮ್ಮ ಅಪ್ಪ ಅಳುತ್ತಾನೆ
ಸೋ ಎನ್ನಿ ಸೋಬಾನ ಬನ್ನಿ ॥
ಹಟ್ಟಿಯೊಳಗಿನ ನೀರು ಹಟ್ಟ್ಯಾಗೆ ಇದ್ದಾಗೇ
ಹಟ್ಟ್ಯಾಗೆ ನನ್ನ ಮಗಳ ಸುಳಿವಿಲ್ಲ
ಸೋ ಎನ್ನಿ ಸೋಬಾನ ಬನ್ನಿ ॥
ಹಟ್ಟ್ಯಾಗೆ ನನ್ನ ಮಗಳ ಸುಳಿವಿಲ್ಲ ಅಂದೇಳೆ
ಅವರ ಹಡದಮ್ಮ ಅಪ್ಪ ಅಳುತ್ತಾರೆ
ಸೋ ಎನ್ನಿ ಸೋಬಾನ ಬನ್ನಿ ॥

ಕೂಸಿಗೆ ತಕ್ಕಂತೆ ರೇಷ್ಮೆಯ ನಾವು ತಂದೆವು
ಕೂಸಿನ ತಾಯಿ ಇದ ನೋಡೆ
ಸೋ ಎನ್ನಿ ಸೋಬಾನ ಬನ್ನಿ ॥
ಕೂಸಿನ ತಾಯಿ ಇವ ನೋಡಿ ಏನೆಂದಳೆ
ಕೂಸಿನ ರೇಷ್ಮೆ ತರವಲ್ಲ
ಸೋ ಎನ್ನಿ ಸೋಬಾನ ಬನ್ನಿ ॥

ತರವಲ್ಲದ ರೇಷ್ಮ ತರುವವರು ನವಲ್ಲ
ರಾಯದುರ್ಗದ ಘನ ಶೆಟ್ಟಿ
ಸೋ ಎನ್ನಿ ಸೋಬಾನ ಬನ್ನಿ ॥
ರಾಯದುರ್ಗದ ಘನಶೆಟ್ಟಿ ಮಳಿಗ್ಯಾಗೆ
ಬೆಲೆ ಹೇಳಿ ರೇಷ್ಮ ಕಳುಹಿದಿವಿ
ಸೋ ಎನ್ನಿ ಸೋಬಾನ ಬನ್ನಿ ॥
ಬೆಲೆ ಹೇಳಿ ರೇಷ್ಮೆ ಕಳುಹಿದಿವಿ ಮದ್ಲುಗಿತ್ತಿಯ
ಮುಸಿಕಿನಲ್ಲಿ ಐತ್ಯೆ ನೋಡಿ ಜರುತಾರ
ಸೋ ಎನ್ನಿ ಸೋಬಾನ ಬನ್ನಿ ॥

ಹಣ್ಣಿಗೆ ತಕ್ಕಂತೆ ಬಣ್ಣ ನಾವು ತಂದೇವೊ
ಹೆಣ್ಣಿನ ತಂದೆ ಇದ ನೋಡು
ಸೋ ಎನ್ನಿ ಸೋಬಾನ ಬನ್ನಿ ॥

ಹೆಣ್ಣಿನ ತಂದೆ ಇವ ನೋಡಿ ಏನೆಂದನೋ
ಹೆಣ್ಣಿಗೆ ಬಣ್ಣ ಸರಿಯಿಲ್ಲ
ಸೋ ಎನ್ನಿ ಸೋಬಾನ ಬನ್ನಿ ॥
ಸರಿಯಿಲ್ಲದ ಬಣ್ಣ ತರುವವರು ನಾವಲ್ಲ
ಚಿತ್ರದುರ್ಗ ಘನ ಶೆಟ್ಟಿ
ಸೋ ಎನ್ನಿ ಸೋಬಾನ ಬನ್ನಿ ॥

ಚಿತ್ರದುರ್ಗದ ಘನ ಶೆಟ್ಟಿ ಮಳಿಗ್ಯಾಗೆ
ದುಡ್ಡುಕೊಟ್ಟು ಬಣ್ಣ ಕಳುಹಿದಿವೆ
ಸೋ ಎನ್ನಿ ಸೋಬಾನ ಬನ್ನಿ ॥
ದುಡ್ಡು ಕೊಟ್ಟು ಬಣ್ಣ ಕಳುಹಿದಿವಿ ಮದ್ಲುಗಿತ್ತಿಗೆ
ಮುಸುಗಿನಲ್ಲಿ ಐತ್ಯೆ ನೋಡು ಜರುತಾರ
ಸೋ ಎನ್ನಿ ಸೋಬಾನ ಬನ್ನಿ ॥

**ಸುರಗಿಯ ನೀರು ಹಾಕುವಾಗ ಹಾಡುವ ಹಾಡು**

**೩**

ಚಪ್ಪರದಡಿಯಾಗೆ ಇಪ್ಪತ್ತೆ ಕೈಯರಾಟೆ
ಅವರ ಅಕ್ಕಯ್ಯ ನೂತ ಕೈಯನೂಲೇ
ಸುರಗಿಯ ವನವೇ ॥
ಅವರ ಅಕ್ಕಯ್ಯ ನೂತ ಕೈಯನೂಲ ತಕ್ಕೊಂಡು
ಒಕ್ಕ ಸುತ್ತಣ್ಣ ಸುರಗಿಯ
ಸುರುಗಿಯ ವನವೇ ॥

ಅಂದರ (ಚಪ್ಪರ) ದಡಿಯಾಗೆ ಅಮ್ಮನದೇ ಕೈಯರಾಟೆ
ತಂಗ್ಯಮ್ಮ ನೂತ ಕೈಯನೂಲ
ಸುರುಗಿಯ ವನವೇ ॥
ಅವರ ತಂಗ್ಯೆಮ್ಮ ನೂತ ಕೈಯನೂಲ ತಕ್ಕೊಂಡು
ಒಂದೇ ಸುತ್ತಣ್ಣ ಸುರುಗಿಯ
ಸುರುಗಿಯ ವನವೇ॥
ಸುರುಗ್ಯಾಗೆ ಕುಂತಾನೆ ತಿರುಗ್ಯಾಕೇ ನೋಡೆನೆ
ಯಾಕೆ ಹಿರಿಯಕ್ಕ ಬರಲಿಲ್ಲ ರೇಷ್ಮಕ್ಕನ ಸುರುಗಿಗೆ
ಸುರುಗಿಯ ವನವೇ॥
ಯಾಕೆನೇ ಹಿರಿಯಕ್ಕ ಬರಲಿಲ್ಲ ರೇಷ್ಮಕ್ಕನ ಸುರುಗಿಗೆ
ಪಟ್ಯಾದ ವಸ್ತ್ರವೇ ತರಬೇಕು ಸುರುಗಿಯ ವನವೇ ॥
ಕರಿಯನೆ ಕಂಬಳಿ ಅರಿಹಾಲು ತಕ್ಕೊಂಡು
ಹಿರಿಯಕ್ಕನ ಬೆರಳು ಹಿಡುಕೊಂಡು
ಸುರುಗಿಯ ವನವೇ ॥
ಅವರ ಹಿರಿಯಕ್ಕನ ಬೆರಳು ಹಿಡುಕೊಂಡು ಗೌರವಣ್ಣ
ಮುತ್ತಿನ ಸುರುಗಿಯ ಒಳಹೊಕ್ಕು ಸುರುಗಿಯ ವನವೇ ॥
ಮುತ್ತಿನ ಸುರುಗಿ ಒಳ ಹೊಕ್ಕ ಗೌರವಣ್ಣ
ಚಂದ್ರ ಕುಂತಾನೆ ಸುರುಗ್ಯಾಗೆ ಸುರುಗಿಯ ವನವೇ ॥
ಮಂಬಿನ ಕಂಬಳಿ ಜಗ್ಗನ್ನು ತಗೊಂಡು
ಕಿರು ತಂಗಿಯ ಬೆರಳು ಹಿಡುಕೊಂಡು ಶಿವಣ್ಣ
ಮುತ್ತಿನ ಸುರುಗಿ ಒಳ ಹೊಕ್ಕು
ಸುರುಗಿಯ ವನವೇ ॥
ಬಣ್ಣದ ಸುರುಗಿ ಒಳ ಹೊಕ್ಕ
ಸುರುಗಿಯ ವನವೇ ॥
ಬಣ್ಣದ ಸುರಗಿ ಒಳ ಹೊಕ್ಕ ಶಿವಣ್ಣ
ಸೂರ್ಯ ಕುಂತಾಗ್ಯಾ ಸುರುಗ್ಯಾಗೇ

ಸುರುಗಿಯ ವನವೇ ॥

೪

ಎಲ್ಲಿಂದ ಬಂದರೀ ಅಲ್ಲಿಗೆ ಟ್ಯಾಲಿ ಇಲ್ಲ

ವಲ್ಲಿ ಮುಂಡಾಸ ಒಗದಿಲ್ಲ ॥

ವಲ್ಲಿ ಮುಂಡಾಸ ಒಗದಿಲ್ಲ ನಮ್ಮ ಬೀಗರು

ಅಲ್ಲೆ ಕಲ್ಲು ಬಾವಿಯಾಗೆ ಸೆಳೆಕೊಳ್ಳಿರೋ ॥

ಜಾಡಿ ತರುತ್ತಾರೆಂದು ಜಾಡಿಸಿ ಕುಳಿತರೋ ಇವರು

ಜಾಡಿ ನಮ್ಮಲ್ಲಿ ನಡೆದಿಲ್ಲ

ಜಾಡಿ ನಮ್ಮಲ್ಲಿ ನಡೆದಿಲ್ಲ ಬೀಗರು

ಸ್ಯಾವೆ ಹುಲ್ಲಕೆ ಸರಕೊಳ್ಳಿ

ಚಾಪೆ ತರುತ್ತಾರೆಂದು ಜಗ್ಗಿಸಿ ಕುಂತಾರೆ ಇವರು

ಚಾಪೆ ನಮ್ಮಲ್ಲಿ ಲ್ವಟಪಿಟಿ

ಚಾಪೆ ನಮ್ಮಲ್ಲಿ ಲ್ವಟಪಿಟಿ ನಮ್ಮ ಬೀಗರು

ನೆಗ್ಲಿ ಮುಳ್ಳಿನಲ್ಲಿ ಕುಂತುಕೊಳ್ಳರೋ

ಗೋಟು ಅಡಿಕೆ ಚೀಲ ಗೂಟಕೆ ಸಿಗಿಹಾಕಿ

ಊಟಕ್ಕೆ ಮನೆ ಮನೆಯ ತಿರುಗ್ಯಾರೊ ॥

ಊಟಕ್ಕೆ ಮನೆ ಮನೆಯ ತಿರುಗ್ಯಾರೋ ನಮ್ಮ ಬೀಗರು

ಗೂಟುಕೋ ನಿಂದರೋ ಬೀಗುದವರು

ದುಂಡು ಅಡಿಕೆ ಚೀಲ ಕಂಬಕ್ಕೆ ಸಿಗಿಹಾಕಿ

ಉಂಬೊಕ್ಕೆ ಮನೆ ಮನೆಯ ತಿರುಗಾವರೆ ॥

ಉಂಬೊಕ್ಕೆ ಮನೆ ಮನೆಯ ತಿರುಗುವ ನಮ್ಮ ಬೀಗರು

ಕಂಬಕ್ಕೆ ನಿಂದರೋ ಬೀಗುದವರು

ಬೀಗುತಿ ಒಳ್ಳೆಳೆಂದು ಬಾಚಣಿಕೆ ನಾ ಕೊಟ್ಟೆ

ಕಾರೆ ಕುಟುರಂತ ತಲೆಯವಳೆ

ಕಾರೆ ಕುಟುರಂತ ತಲೆಯವಳೆ ನಮ್ಮ ಬೀಗುತಿ

ಬಾಚಣುಕೆ ಹಲ್ಲು ಮುರಿದಲ್ಲೆ ॥

ಬೀಗುತಿ ಒಳ್ಳೆಳೆಂದು ಸೀರುಣಿಕೆ ನಾ ಕೊಟ್ಟೆ
ಇಸಲು ಮಟ್ಟೆಯಂತಹ ತಲೆಯವಳೆ
ಇಸಲ ಮಟ್ಟೆಯಂತಹ ತಲೆಯವಳೆ ಸಣ್ಣಕ್ಕ
ಸೀರುಣಿಕೆಯೆಲ್ಲ ಮುರಿದಲ್ಲೆ ॥
ಅಲ್ಲೆ ಯಾಕೆ ನಿಂತಿದಿಯೇ ಹಲ್ಲುಯಾಕೆ ತೆರೆದಿದಿಯೇ
ಹಲ್ಲಿನ ಮೇಲೆ ಎರಡು ನೋಣಕುಂತೆ
ಹಲ್ಲಿನ ಮೇಲೆರೆಡೆ ನೋಣ ಕುಂತೆ ಅಂಜಿನಮ್ಮ
ಕಡಲೆ ಕಾಳೆಂದು ಕಡುದಾಳೆ.
೫
ಹರನೇ ಹರನೇ ಅಂದು ನಾಮವ ನೆನೆದೆವು
ಹರನೇ ಕುಂತಾಗೇ ಹಸಿಯ ಮೇಲೆ ಸೋಬಾನೆ ॥
ಶಿವನೇ ಶಿವನೇ ಅಂದು ಶಿವನಾಮ ನೆನೆದೆವು
ಶಿವನೇ ಕುಂತಾಗೆ ಹಸಿಯ ಮೇಲೆ ಸೋಬಾನೆ ॥

ಅಂಡಕ್ಕಿ ದುಂಡಕ್ಕಿ ದುಂಡಾರಾಜೋಣ್ಣದಕ್ಕಿ
ಕೊಂಡರ ಗದ್ದೆಗೆ ಗೂನೆ ಬಾಗಿ ಸೋಬಾನೆ ॥
ಕೊಂಡರ ಗದ್ದೆಗೆ ಗೊನೆಬಾಗಿ ನೆಲ್ಲಕ್ಕಿ ಒಣಗಿ
ರಾಯಚೂರ ನಡ ಮನೆಯಾಗೆ ಸೋಬಾನಾ ॥
ಅವಕ್ಕಿ ಇವಕ್ಕಿ ರಾಗರಾಜೊಣ್ಣದಕ್ಕಿ
ಆರಾಯಚೂರು ಗದ್ದೆಗೆ ಗೊನೆ ಬಾಗಿ ನೆಲ್ಲಕ್ಕಿ
ಸುರಿವಳೆ ನಡು ಮನೆಗೆ ಸೋಬಾನೆ ॥

ರುಕ್ಕು ಹೊರೆಯ ಸುರುವಿ ಸುರುವಿ ಏನೆಂದಳೆ
ಬೇಂಗಟೆ ಇದಿ ಮಾಡಿ ಕರೀರಣ್ಣ ಸೋಬಾನೆ
ಶಂಭೋ ಶಂಕರ ನಿಮ್ಮರೆಂಬರೆ ಕರುಣಿಸಯ್ಯ ಸೋಬಾನೆ
ನಮ್ಮ ಮನೆಯಾಗೆ ಸೋಬಾನೆ ॥

ಸೋಬಾನೆ ನಮ್ಮ ಮನೆಯಾಗೆ ಶಿವನೇ
ನಿಮ್ಮ ಹೆಂಡಿರಿಬ್ಬರು ಕರುಣಿಸಯ್ಯ ಸೋಬಾನೆ
ಹೆಂಡಿರ್ರಿಬ್ಬರನ್ನು ಕರುಣಿಸಯ್ಯ ಸೋಬಾನೆ
ಕಲ್ಯಾಣದ ಮನೆಗೆ ಎಲ್ಲರು ಹೋಗೋಣ ಬನ್ನಿ
ನಲ್ಲೆ ಗೌರಮ್ಮ ಗಂಗಮ್ಮ ಸೋಬಾನೆ ॥

ನಲ್ಲೆನೇ ಗೌರಮ್ಮ ಗಂಗಮ್ಮರೆಲ್ಲರು
ಕಲ್ಯಾಣ ಮನೆಗೆ ನಡೆದಾರೆ ಸೋಬಾನೆ ॥
ಕಲ್ಯಾಣ ಮನೆಗೆ ನಾವೆಲ್ಲರೂ ಹೋಗೋಣ
ಮಧು ಮಗನ ಮಾಡಿ ಬರೋಣ ಸೋಬಾನೆ ॥

ರೋಡಿಗೆ ಸುರ ನಿಮ್ಮನ್ಯಾರ್ಯಾರು ಕಳುಹೈ
ಕಲ್ಯಾಣ ನಮ್ಮ ಮನೆಯಾಗೆ ಸೋಬಾನೆ
ಕಲ್ಯಾಣ ನಮ್ಮ ಮನೆಯಾಗೆ ಶಿವನೇ
ನಿಮ್ಮ ನ್ಯಾರ್ಯಾರಿಬ್ಬರ ಕಳುಹೈ ಸೋಬಾನೆ

ಕಲ್ಯಾಣದ ಮನೆಗೆ ಎಲ್ಲರೂ ಹೋಗೋಣ ಬನ್ನಿ
ಸೂರ್ಯನೊಬ್ಬ ಶಿವನೊಬ್ಬ ಸೋಬಾನೆ ॥
ಸೂರ್ಯನೊಬ್ಬ ಶಿವನೊಬ್ಬ ನಾವೆಲ್ಲರೂ
ಕಲ್ಯಾಣದ ಮನೆಗೆ ನಡೆದೆವು ಸೋಬಾನೆ ॥
ಕಲ್ಯಾಣದ ಮನೆಗೆ ನಾವೆಲ್ಲರೂ ಹೋಗೋಣ
ಗಟ್ಟಿ ಕಂಕಣ ಕಟ್ಟಿ ಬರುತ್ತವೆ ಸೋಬಾನೆ ॥

೬

ಮಾಮನ ಮನೆಯಾಗೆ ತೂಗು ಮಂಚದ ಮೇಲೆ
ಶೆಟ್ಟಿ ಬೊಮ್ಮಣ್ಣ ಸುಖನಿದ್ರೆ ಸೋಬಾನೆ ॥
ಶೆಟ್ಟಿ ಬೊಮ್ಮಣ್ಣ ಸುಖನಿದ್ರೆ ಮಾಡುವಾಗ

ಪತ್ರ ಬಂದವೆ ನಿಮ್ಮತಕ ಸೋಬಾನೆ ॥
ಪತ್ರ ಬಂದರೆ ಬರಲಿ ನಾಳೆ ಓದಿಕೋ
ಮತ್ತೆ ಕಾಲೆದ್ದಿ ಬರಲಾರೆ ಸೋಬಾನೆ ॥
ಅಕ್ಕರ ಮನೆಯಾಗೆ ತೂಗು ಮಂಚದ ಮೇಲೆ
ಶೆಟ್ಟಿ ನನ್ನ ತಮ್ಮ ಸುಖನಿದ್ರೆ ಸೋಬಾನೆ ॥
ಶೆಟ್ಟಿ ನನ್ನ ತಮ್ಮ ಸುಖನಿದ್ರೆ ಮಾಡುವಾಗ
ಕಾಗದ ಬಂದವೆ ನಿಮ್ಮತಕ ಸೋಬಾನೆ ॥
ಕಾಗದ ಬಂದರೆ ಬರಲಿ ನಾಳೆ ಓದಿಕೋ
ಅಕ್ಕರ ಮಗಳ ಲಗ್ನವೇ ಸೋಬಾನೆ ॥
ಅಕ್ಕರ ಈ ಮಗಳ ಲಗ್ನ ಕೈಗೂಡವೆ
ಮತ್ತೆ ಕಾಲೆದ್ದೆ ಬರಲಾರೆ ಸೋಬಾನೆ ॥
ಗೋಡೆಗೆ ಇದಿರಾಗಿ ಹೂಡಮ್ಮ ಕಳಸವ
ಗೋಡೆಯ ಮೇಲೆ ಎರಡು ಅರಗಿಣಿ ಸೋಬಾನ ॥
ಗೋಡೆಯ ಮೇಲೆರೆಡು ಅರಗಿಣಿ ಕುಲಗೆಜ್ಜಿ
ಶುಭ ನುಡಿಯ ನುಡಿದವೇ ಸೋಬಾನ ॥
ಶುಭ ನುಡಿಯ ಏನೆಂದು ನುಡಿದವೆ
ಅಕ್ಕ ಮಾವರಿಗೆ  ವರ ಒಂದೇ ಸೋಬಾನೆ ॥
ಕಂಬಕ್ಕೆ ಇದಿರಾಗಿ ಹೂಡಮ್ಮ ಕಳಸವ
ಕಂಬದ ಮೇಲೆರೆಡೆ ಅರಗಿಣಿ ಸೋಬಾನೆ ॥
ಕಂಬದ ಮೇಲೆರೆಡ ಅರಗಿಣಿ ಕುಲಗೆಜ್ಜೆ
ಶುಭ ನುಡಿದವೇ ಸೋಬಾನೆ ॥
ಶುಭ ನುಡಿಯ ಏನೆಂದು ನುಡಿದವೆ
ಅಕ್ಕ ಮಾವರಿಗೆ ವರ ಒಂದೆ ಸೋಬಾನೆ ॥

೭

ನೀರಾಗೆ ಹುಟ್ಟೋಳೆ ನೀರಾಗಿ ಬೆಳೆಯದೋ
ನೇರನ ಮರಕ್ಕೆ ನೆರಳಾದೆ ಸೋಬಾನೆ ॥

ನೀರನ ಮರಕ್ಕೆ ನೆರಳಾದೆ ನಾಗವಣಿ
ನಾರಿ ಬಾ ಕಳಸಕ್ಕೆ ಸೋಬಾನೆ ॥
ಕೆಸರಾಗೆ ಹುಟ್ಟುದೆ ಕೆಸರಾಗೆ ಬೆಳೆಯೋದೆ
ನೇಸರನ ಮರಕ್ಕೆ ನೆರಳಾದೆ ಸೋಬಾನೆ ॥
ನೇಸರನ ಮರಕ್ಕೆ ನೆರಳಾದೆ ನಾಗವಣಿ
ನಾರಿ ಬಾ ಜಳಪಕ್ಕೆ ಸೋಬಾನೆ ॥
ಬಂಧು ಬಂದವರೆಲ್ಲ ಗೋಡೆಗೆ ನಿಲ್ಲ ಬೇಡಿರಿ
ಗೋಡೆ ಚಿತ್ತಾರ ಕೆಡುತ್ತವೆ ಸೋಬಾನೆ ॥
ಗೋಡೆಯಲ್ಲಿ ಚಿತ್ತಾರ ಕೆಡುತ್ತವೆ ನನ್ನ ತಮ್ಮ
ಗೋಡೆನಾ ಕಂಬಳ ಹಾಸೋ ಜನರಿಗೆಲ್ಲ ಸೋಬಾನೆ ॥
ಬಂಧು ಬಂದವರೆಲ್ಲ ಕಂಬಕ್ಕೆ ನಿಲ್ಲ ಬೀಡಿರಿ
ಕಂಬ ಚಿತ್ತಾರ ಕೆಡುತ್ತದೆ ಸೋಬಾನೆ ॥
ಕಂಬದ ಚಿತ್ತಾರ ಕೆಡುತ್ತವೆ ನನ್ನ ಅಣ್ಣ
ಕಂಬಳಿ ಹಾಸೋ ಜನರಿಗೆ ಸೋಬಾನೆ ॥

**ವಧು-ವರರಿಗೆ ಬಾಸಿಂಗ ಕಟ್ಟುವಾಗ**

**೮**

ನಡಿ ನಡಿ ತಂಗೆಮ್ಮ ನಡಿಗೆಯ ನಾನೇ ನೋಡಿ
ನಡಿಗೆಯಲ್ಲಿ ಸುಂದರಿ ಗುಣಬಾರಿಸು
ನಡಿಗೆಯಲ್ಲಿ ಸುಂದರಿ ಗುಣ ಬಾರಿಸು
ನಡಿಗೆಯಲ್ಲಿ ಸುಂದರಿ ಗುಣಬಾರಿಪದಾದ ಮೇಲೆ
ಚಣಗಿದೊಳೊಟ್ಟಲಿ ಪದ ಬಾರಿಸು
ಚಣಗಿದೊಳೊಟ್ಟಲಿ ಪದ ಬಾರಿಸು
ಚಣಗಿದೊಳೊಟ್ಟಲಿ ಪದವಿದ್ದ ಮಗಳಿಗೆ
ಬಡವರಿಗ್ಯಾಕೆ ಕೊಡಬೇಕಿತ್ತು ॥ನಡಿ ನಡಿ॥
ನಡಿಗೆಯಲಿ ಸುಂದರಿ ಗುಣಬಾರಿಪದಾರ ಮೇಲೆ

ಕಡಲೆ ಬೆಳೆರೊಟ್ಟಿ ಹದ ಮಾಡಿಸು
ಕಡಲೆ ಬೆಳೆರೊಟ್ಟಿ ಹದ ಮಾಡಿಸು
ಕಡಲೆ ಬೆಳೆರೊಟ್ಟಿ ಹದವಿದ್ದ ಮಗಳಿಗೆ
ಬಡವರಿಗ್ಯಾಕೆ ಕೊಡಬೇಕಿತ್ತು ॥
ಅಣ್ಣ ಅಕ್ಕರ ಹಾಗೇ ದುಂಡಂದೆ ಪಾಲಿಸಿ
ಹಡದಮ್ಮನ ಮನೆಗೊಂದುಡಗಿಸಬೇಕಿತ್ತು ॥
ಹಡದಮ್ಮನ ಹಡಗಿಯ ಚಂದ್ರಮ್ಮ
ಮಗಳ ಮೈನೆರದ ಸವಭಾಗ್ಯಸು ॥
ಸುರಿದ ನೆತ್ತಪ್ಪು ನಾನೀರಿಗೆ ಹೋಗಿದ್ದೆ
ಸುರಿದೊಡದಪ್ಪ ಒಳಗಾರಿಸು
ಸುರಿದೊಡದಪ್ಪ ಒಳಗಾರೆ ಅಹಂಕಾರ
ಸಿರಿಧಾನ್ಯಗಳ ಹರಸಿ ಕಳನಂದಾಸು ॥ನಡಿ ನಡಿ॥

೯

ಕಲ್ಯಾಣವೇ ಗೌರಿ ಕಲ್ಯಾಣವೇ
ಅವಳತ್ರ ಹ್ಯಾಂಗಾ ಗುಡಿಯ ಬಸವಣ್ಣನ ಮುಂದೆ
ಅವಳ ಸಾಲಿಕೆ ಬರುತ್ತಾಳೆ
ಕಲ್ಯಾಣವೇ ಗೌರಿ ಕಲ್ಯಾಣವೇ
ಕಲ್ಯಾಣವೇ ಗೌರಿ ಕಲ್ಯಾಣವೇ
ಕಲ್ಯಾಣವೇರಿ ಕಾರು ಹುಣ್ಣಿಮೆ ಪೂರ್ಣಿಮೆ
ಕಲ್ಯಾಣವಂತೆ ಶಿವನಿಗೆ
ಕಲ್ಯಾಣವೇ ಗೌರಿ ಕಲ್ಯಾಣವೇ
ಮುತ್ತು ಹರಿದಾಗೇ ಮುತ್ತು ಸಲುಹಿದಾಗೆ
ಮುತ್ತು ತ್ರಾಯಾಣ ಗುಡಿಯ ಮುಂದೆ ॥
ಕಲ್ಯಾಣವೇ ಗೌರಿ ಕಲ್ಯಾಣವೇ
ಮುತ್ತು ತ್ರಾಯಾಣ ಗುಡಿಯ ಬಸವಣ್ಣನ ಮುಂದೆ

ಮುತ್ತು ಸಾಲಿತ್ತು ಬರುತ್ತಾರೆ ॥
ಕಲ್ಯಾಣವೇ ಗೌರಿ ಕಲ್ಯಾಣವೇ
ಅಶೋಕನವ್ವ ನನ್ನ ಮಗ ನಿನ್ನ ಅಳಿಯ
ಷರತ್ತಿಂದ ಏನಾ ಗೆಲ್ಲುತ್ತಾನಾ
ಕಲ್ಯಾಣವೇ ಗೌರಿ ಕಲ್ಯಾಣವೇ ॥
ಕುದುರೆ ಮೇಲೆ ಬರುವ ಚದುರನ ನೋಡಿರಾ
ಚಲುವ ಕಾಣಾವ್ವ ನನ್ನ ಮಗ
ಕಲ್ಯಾಣವೇ ಗೌರಿ ಕಲ್ಯಾಣವೇ॥

೧೦

**ಕುಟ್ಟುವ ಹಾಡು**

ಭಜನೆಯ ಮಾಡುತಾ ದೇವರಿಗೆ ಹೂವು ಏರುತಾ
ತಾಳ ತಂಬಾವಾಡಿ ನುಡಿಯುತ ಭಜನೆಯ ಮಾಡುತಾ ॥
ನಮ್ಮೂರ ಹೆಸರನೇ ತನ್ನಾಡಿ ಉಣಬಡಿ
ದೇವರ ಹೆಸರನೇ ಗುರುಸ್ವಾಮಿ ಭಜನೆ ಮಾಡುತ ॥
ದೇವರ ಹೆಸರನೇ ಗುರುಸ್ವಾಮಿ ಗುಡಿದಾಗ
ಬೆಳಗಾನೆ ಭಜನೆ ಮಾಡಿರಿ ಭಜನೆ ಮಾಡುತ ॥
ಕರಿಯಜ್ಜಿ ರವೆ ಹುಟ್ಟು ಕೆರೆಯ ನೀರಿಗೆ ಹೋಗಿ
ತವರೂರ ಗೌಡ ಎದುರಾಗೆ ಭಜನೆ ಮಾಡುತಾ ॥
ತವರೂರ ಎನ್ನಗೌಡ ಬೇಲುರಾಗಿ ಕೇಳುವ
ಸೀರೆಯ ಬೆಲೆಯ ನನಗೆಳೆ ಭಜನೆ ಮಾಡುತಾ ॥
ಸೀರಿಗೆ ೩೦, ಸೆರೆಗಿಗೆ ೪೦, ನೇಯ್ದಬ್ಯಾಡಗೆ
ಐವತ್ತೆ ಭಜನೆ ಮಾಡುತ್ತಾ ॥
ಭಜನೆಯ ಮಾಡುತ್ತಾ ದೇವರಿಗೆ ಹೂವು ಏರುತಾ
ತಾಳ ತಂಬಾವಾಡಿ ನುಡಿಯುತ ಭಜನೆ ಮಾಡುತಾ

೧೧

ಇನ್ನೇನು ಆನಂದ ನಮಗೇತಕೆ

ನಗೆ ಗೌಡರ ಪೂಜಿಸುವ ॥

ಆತನಿಗೆ ಶರಣನೇನುವೆ ಶಂಕರ

ಇನ್ನೇನು ಆನಂದ ನಮಗೇತಕೆ

ನಗೆ ಗೌಡರ ಪೂಜಿಸುವೆ ॥

ಇನ್ನೇನು ಆನಂದ ನಮಗೇತಕೆ

ನಗೆ ಗೌಡರ ಪೂಜಿಸುವ ॥

ಆತನಿಗೆ ಶರಣನೇನುವೆ ಶಂಕರ

ಇನ್ನೇನು ಆನಂದ ನಮಗೇತಕೆ

ನಗೆ ಗೌಡರ ಪೂಜಿಸುವೆ ॥

ಬಿತ್ತಾನೆ ಬಿತ್ತು ಸುತ್ತ ಬೇಲಿಯ ನೆಟ್ಟು

ಎತ್ತ ಹೋಗಿದ್ದೋ ಮಳೆರಾಯ

ಎತ್ತ ಹೋಗಿದ್ದೋ ಮಳೆರಾಯ

ಎತ್ತ ಹೋಗಿದ್ದೋ ಮಳೆರಾಯ ನಿನೀಗ ॥

ಬಿತ್ತಾನೆ ಬಾಯಿ ಬಿಡುತ್ತಾವೆ ॥ಇನ್ನೇನು॥

ಮೂಡಲಗಿರಿಯ ಮಹಾದೇವನ

ನಂಜನಗೂಡ ನಂಜುಂಡನ

ಎಡೆಯೂರಿನ ಸಿದ್ದಲಿಂಗನ ॥

ಕಾಣ್ಣಾರೆ ನಾವು ಕಂಡೆವು ॥ಇನ್ನೇನು॥

ತೊಡೆಯ ಮೇಲೆ ಗೌರವ್ವನ

ಮುಡಿಯ ಒಳಗೆ ಗಂಗವ್ವನ

ಮುಡಿಯ ಮೇಲೆ ಗಂಗವ್ವನ

ಕಾಣ್ಣಾರೆ ನಾವು ಕಂಡೆವು ॥ಇನ್ನೇನು॥

ಏಳೋತ್ತನ್ನಲಿ ಎದ್ದು ಯಾರ್ಯಾರ ನೆನೆಯಲಿ

ಎಳ್ಳು ಜೀರಿಗೆ ಬೆಳೆಯುವ ಭೂಮತಾಯಿಯ

ಎದ್ದೊಂದು ಗಳಿಗೆ ನೆನೆದೆವು
ಇನ್ನೇನು ಆನಂದ ನಮಗೇತಕೆ ॥
ಸಂಜೆಯಾತು ಶಿವನೇ ಸಂಥೆಯ ಮನೆಯ ಕುಲುಸ್ವಾಮಿ
ಸಂಥೆಯಮನೆಯ ಕುಲುಸ್ವಾಮಿ ನಾಗೇಗೌಡ
ಸಂಥೆಯಮನೆಯ ಕುಲುಸ್ವಾಮಿ ನಾಗೇಗೌಡ
ಸಂಜೆಯಲ್ಲಾಡಿ ಬಾರೋ ಮಗನೆ ॥ಇನ್ನೇನು॥

**೧೨. ಋತುಮತಿಯಾದಾಗ ಹಾಡುವ ಹಾಡು**

ಏರಿರಣ್ಣದೇರಿ ಏರಿ ಚಿನ್ನದ ಏರಿ
ಏರಿಯಿಂದ ಕೆಳಗೆ ಎಲೆದೋಟಾ॥
ಏರಿಯಿಂದ ಕೆಳಗೆ ಎಲೆದೋಟಾದೊಳಗಿರುವ
ಅವರಪ್ಪ ಕೇಳಾನೇ ಹೊಸ ಸುದ್ದಿ
ಹೊಸ ಸುದ್ದಿ ಕೇಳಾನೇ ಕಣ್ಣೀರು ತಂದಾನೇ
ಎಸುಳಾ ಮಲ್ಲಿಗೆಯ ಕೊಯಿಸಾನೇ॥
ಎಸುಳಾನೇ ಮಲ್ಲಿಗೆ ಕೊಯಿಸಿ ಮಾಲೆಯ ಹೆಣಿಸಿದ್ದ
ಮಗಳೆ ದರುಮನೆಗೆ ಕಳುಹನೇ॥

ಕಟ್ಟೆ ರನ್ನದ ಕಟ್ಟೆ, ಕಟ್ಟೆಚಿನ್ನದ ಕಟ್ಟೆ
ಕಟ್ಟೆ ಹಿಂದಾ ಕೆಳಗೆ ಎಲೆದೋಟ॥
ಕಟ್ಟೆ ಹಿಂದಾ ಕೆಳಗೆ ಎಲೆದೋಟದೊಳಗಿರುವ
ಅವರ ಮಾವಯ್ಯ ಕೇಳಾನೇ ಹೊಸಸುದ್ದಿ ॥
ಹೊಸ ಸುದ್ದಿ ಕೇಳಾನೇ ಹುಸಿ ನಗುವ ನಕ್ಕನೇ
ಎಸುಳಾ ಸಂಪಿಗೆ ಕೊಯಿಸನೇ॥
ಎಸುಳಾ ಸಂಪಿಗೆ ಕೊಯಿಸಿ ಮಾಲೆ ಹೆಣಿಸಿ
ಸೊಸಿಯಿದ್ದ ದರುಮನೆಗೆ ಕಳುಹನೆ
ಬಾಲಮ್ಮ ಮೈನೆರೆತು ಬಾಗಲಾಗೆ ನಿಂತಾಳೆ
ದೊರಲೊಡ್ಡ್ಯವೇ ಮಳೆ ಮೋಡ॥

ದೊರಲೊಡ್ಡ್ಯವೇ ಮಳೆ ಮೋಡ ಅವರಣ್ಣ
ಮುತ್ತಿನ ಗುಡಾರ ಹೊಡ್ಯಾಸರಾ॥

**೧೩. ಒಳ್ಳಕ್ಕಿ ಕುಟ್ಟುವಾಗ ಹೇಳುವ ಹಾಡು**

ಗುತ್ತಿನಾಡಲ ಸುಣ್ಣ ಗುಲಗಂಜಿ ಕೆಮ್ಮಣ್ಣು
ಸುತ್ತ ಸವಗಟ್ಟಿ ಬಳಿಯಮ್ಮ
ಸುವ್ವಿ ಬಾ ಸುವ್ವಿ ಬಾ॥
ಸುತ್ತ ಸವಗಟ್ಟಿ ಬಳಿಯಮ್ಮ
ಸುವ್ವಿ ಬಾ ಸುವ್ವಿ ಬಾ
ಸುತ್ತೇನೇ ಸವಗಡ್ಡಿ ಬಳಿಯಮ್ಮ ಮಾವಿನ ತೋಳ
ಸುರುಗಿ ದಾರಾಗಿ ದರುಸಮ್ಮ
ಸುವ್ವಿ ಬಾ ಸುವ್ವಿ ಬಾ
ಸುರುಗಿ ದಾರಾಗಿ ದರುಸಮ್ಮ
ಸುವ್ವಿ ಬಾ ಸುವ್ವಿ ಬಾ

ಹಾದಿ ಕಲ್ಲರಳಿಗೆ ಗೀರು ಗಂಧನಿಟ್ಟು
ಬೂದು ಬಾಳೆ ಹಣ್ಣು ಸುಲಿದಿಟ್ಟೆ
ಸುವ್ವಿ ಬಾ ಸುವ್ವಿ ಬಾ
ಬೂದು ಬಾಳೆ ಹಣ್ಣು ಸುಲಿದಿಟ್ಟೆ
ಸುವ್ವಿ ಬಾ ಸುವ್ವಿ ಬಾ
ಬೂದೇನೆ ಬಾಳೆ ಹಣ್ಣು ಸುಲದಿಟ್ಟೆ ಶಂಕ್ರಮ್ಮ
ಮೂವರು ಮುತ್ತೈದೆರನ್ನು ಕರುಸಮ್ಮ
ಸುವ್ವಿ ಬಾ ಸುವ್ವಿ ಬಾ
ಮೂವರು ಮುತ್ತೈದರನ್ನು ಕರುಸಮ್ಮ
ಸುವ್ವಿ ಬಾ ಸುವ್ವಿ ಬಾ

ಅಟ್ಟಿ ಕಲ್ಲರಳಿಗೆ ಬುಟ್ಟ ಗಂಧವನಿಟ್ಟು
ಬುಟ್ಟೆ ಬಾಳೆ ಹಣ್ಣು ಸುಲದಿಟ್ಟೆ
ಸುವ್ವಿ ಬಾ ಸುವ್ವಿ ಬಾ
ಬುಟ್ಟೆ ಬಾಳೆ ಹಣ್ಣು ಸುಲದಿಟ್ಟೆ
ಸುವ್ವಿ ಬಾ ಸುವ್ವಿ ಬಾ
ಬುಟ್ಟೇನೇ ಬಾಳೆ ಹಣ್ಣು ಸುಲದಿಟ್ಟ ಶಂಕ್ರಮ್ಮ
ಐವರು ಮುತ್ತೈದೆಯರನ್ನುಕರುಸಮ್ಮ
ಸುವ್ವಿ ಬಾ ಸುವ್ವಿ ಬಾ
ಐವರು ಮುತ್ತೈದರನ್ನು ಕರುಸಮ್ಮ
ಸುವ್ವಿ ಬಾ ಸುವ್ವಿ ಬಾ

ಅಟ್ಟ ಕೆಡುವಕೆ ರೊಕ್ಕೆನ್ನು ತೆಗೆದವಳೇ
ಬುಟ್ಟು ರಾಜೋಣದಾಗೇ ನೀರ ಬಾಳೆ
ಸುವ್ವಿ ಬಾ ಸುವ್ವಿ ಬಾ
ಬುಟ್ಟ ರಾಜೋಣದಾಗೇ ನೀ ಬಾಳೆ
ಸುವ್ವಿ ಬಾ ಸುವ್ವಿ ಬಾ
ಬುಟ್ಟೇನೇ ರಾಜೋಣದಾಗೇ ಗೊನೆ ಬಾಗಿ
ನೆಲ್ಲಕ್ಕಿ ಅವರಕ್ಕ ತಂದಿಟ್ಟ ಕಲ್ಲರಳಿಗೆ
ಸುವ್ವಿ ಬಾ ಸುವ್ವಿ ಬಾ

ವಾರ್ವಿಗೇಣಿಯಾಗ ಅವರವ್ವವೇನು ತೆಗೆದಳೆ
ರಾಗ ರಾಜೋಣದಾಗ ನೀ ಬಾಳೇ
ಸುವ್ವಿ ಬಾ ಸುವ್ವಿ ಬಾ
ರಾಗ ರಾಜೋಣದಾಗ ನೀ ಬಾಳೇ
ಸುವ್ವಿ ಬಾ ಸುವ್ವಿ ಬಾ
ರಾಗನೇ ರಾಜೋಣದಾಗೇ ಗೊನೆ ಬಾಗಿದ ನೆಲ್ಲಕ್ಕಿ

ಅವರವ್ವಯ್ಯ ತಂದಿಟ್ಟ ಕಲ್ಲೊರಳಿಗೆ
ಸುವ್ವಿ ಬಾ ಸುವ್ವಿ ಬಾ
ಅವರವ್ವಯ್ಯ ತಂದಿಟ್ಟ ಕಲ್ಲೊರಳಿಗೆ
ಸುವ್ವಿ ಬಾ ಸುವ್ವಿ ಬಾ

ಎಡಗೈಯಲ್ಲಿ ಹಾಕುತ್ತಾ ಬಲಗೈಯಲ್ಲಿ ನುಕುತ್ತಾ
ಆಕಾಶ ಕುಣಿಕೆ ಹಿಡಾಡುತ್ತಾ
ಸುವ್ವಿ ಬಾ ಸುವ್ವಿ ಬಾ
ಆಕಾಶ ಕುಣಿಕೆ ಹಿಡಾಡುತ್ತಾ
ಸುವ್ವಿ ಬಾ ಸುವ್ವಿ ಬಾ
ಆಕಾಶ ಕುಣಿಕೆ ಹಿಡಾಡುತ್ತಾ ಅಂಜಿನಪ್ಪ
ತೂಗಿ ಬಿಟ್ಟ ಜನತದ ಓನಕೆಯ
ಸುವ್ವಿ ಬಾ ಸುವ್ವಿ ಬಾ
ತೂಗಿ ಬಿಟ್ಟ ಜನತದ ಓನಕೆಯ
ಸುವ್ವಿ ಬಾ ಸುವ್ವಿ ಬಾ

ಆ ಕೈಯಲ್ಲಿ ಹಾಕುತ್ತಾ ಈ ಕೈಯಲ್ಲಿ ನೂಕುತ್ತಾ
ಆಕಾಶ ಕುಣಿಕೆ ಹಿಡಾಡುತ್ತಾ
ಸುವ್ವಿ ಬಾ ಸುವ್ವಿ ಬಾ
ಆಕಾಶ ಕುಣಿಕೆ ಹಿಡಾಡುತ್ತಾ
ಸುವ್ವಿ ಬಾ ಸುವ್ವಿ ಬಾ
ಆಕಾಶ ಕುಣಿಕೆ ಹಿಡಾಡುತ್ತಾ ಅಂಜಿನಪ್ಪ
ಸೋತು ಬಿಟ್ಟನು ಜನತದ ಓನಕೆಯ
ಸುವ್ವಿ ಬಾ ಸುವ್ವಿ ಬಾ
ಸೋತು ಬಿಟ್ಟನು ಜನತದ ಓನಕೆಯ
ಸುವ್ವಿ ಬಾ ಸುವ್ವಿ ಬಾ

ಅಕ್ಕಕ್ಕಿ ಕುಟ್ಟಾಕ್ಕೆ ಕಲ್ಲರಳು ಕೊಡಿರಮ್ಮ
ಕಲ್ಯಾಣ ನಮ್ಮ ಮನೆಯಾಗೆ
ಸುವ್ವಿ ಬಾ ಸುವ್ವಿ ಬಾ
ಕಲ್ಯಾಣ ನಮ್ಮ ಮನೆಯಾಗೆ
ಸುವ್ವಿ ಬಾಸುವ್ವಿ ಬಾ
ಕಲ್ಯಾಣ ನಮ್ಮ ಮನೆಯಾಗೆ ಅಂಜಿನಪ್ಪ
ಬೆಳ್ಳಿ ಮಾಡುತಿ ಮಧುಮಗ
ಸುವ್ವಿ ಬಾ ಸುವ್ವಿ ಬಾ
ಬೆಳ್ಳಿ ಮಾಡುತಿ ಮಧುಮಗ
ಸುವ್ವಿ ಬಾ ಸುವ್ವಿ ಬಾ

ಅಚ್ಚು ಅಕ್ಕ್ಯಾಗೆ ನುಚ್ಚು ಅಕ್ಕಿ ಅದರೆ
ತಪ್ಪು ತೆಗೆಸೆನು ನಿಮ್ಮ ಮ್ಯಾಲೆ
ಸುವ್ವಿ ಬಾ ಸುವ್ವಿ ಬಾ
ತಪ್ಪು ತೆಗೆಸೆನು ನಿಮ್ಮ ಮ್ಯಾಲೆ
ಸುವ್ವಿ ಬಾ ಸುವ್ವಿ ಬಾ
ತಪ್ಪೇನೆ ತೆಗೆಸೆನು ನಿಮ್ಮ ಮೇಲೆ
ಮುತ್ತೈದೆರು ಚಂದವಾಗಿ ಅಕ್ಕಿ ತೋಳೆಸಿರೆ
ಸುವ್ವಿ ಬಾ ಸುವ್ವಿ ಬಾ

ಅಂಡು ಅಕ್ಕ್ಯಾಗೆ ದುಂಡುಕ್ಕಿ ಮುರುದರೆ
ದಂಡ ತೆಗೆಸೆನು ನಿಮ್ಮ ಮ್ಯಾಲೆ
ಸುವ್ವಿ ಬಾ ಸುವ್ವಿ ಬಾ
ದಂಡ ತೆಗೆಸೆನು ನಿಮ್ಮ ಮ್ಯಾಲೆ
ಸುವ್ವಿ ಬಾ ಸುವ್ವಿ ಬಾ
ದಂಡೇನು ತೆಗೆಸೆನು ನಿಮ್ಮ ಮೇಲೆ

ಮುತ್ತೈದೆರ ಚಂದವಾಗಿ ಅಕ್ಕಿ ತೊಳಸಿರೆ
ಸುವ್ವಿ ಬಾ ಸುವ್ವಿ ಬಾ

ಹತ್ತು ಖಂಡಗದಕ್ಕಿ ಎತ್ತಿನ ಮೇಲೆ ಏರಿಕೊಂಡು
ಪಟ್ಟೆ ಸಾಲಾಗೆ ತಮ್ಮ ಕೆಡುವ್ಯನೆ
ಸುವ್ವಿ ಬಾ ಸುವ್ವಿ ಬಾ
ಪಟ್ಟೆ ಸಾಲಾಗೆ ತಮ್ಮ ಕೆಡುವ್ಯನೆ
ಸುವ್ವಿ ಬಾ ಸುವ್ವಿ ಬಾ
ಪಟ್ಟೆ ಸಾಲಾಗೆ ತಮ್ಮ ಕೆಡುವಿಯೇ ಆ ನೆಲ್ಲು
ಅಕ್ಕಯ್ಯ ಅಕ್ಕಿ ನೂಕೊಳೆ
ಸುವ್ವಿ ಬಾ ಸುವ್ವಿ ಬಾ

ಹತು ಖಂಡುಗದ ಅಕ್ಕಿ ಎತ್ತಲಾದವು ತಮ್ಮ
ಸುತ್ತಲ ಬಳಗ ಬರುತ್ತಾರೆ
ಸುವ್ವಿ ಬಾ ಸುವಿ ಬಾ
ಸುತ್ತಲ ಬಳಗ ಬರುತ್ತಾರೆ
ಸುವ್ವಿ ಬಾ ಸುವ್ವಿ ಬಾ

ಆರು ಖಂಡಗದ ಗೋಧಿ ಹೋರಿ ಮೇಲೆ ಏರಿಕೊಂಡು
ಸಾಮ ಸಾಲಾಗಣ್ಣ ಕೆಡುವ್ಯನೆ
ಸುವ್ವಿ ಬಾ ಸುವ್ವಿ ಬಾ
ಸಾಮ ಸಾಲಾಗಣ್ಣ ಕೆಡುವ್ಯನೆ
ಸುವ್ವಿ ಬಾ ಸುವ್ವಿ ಬಾ
ಸಾಮ ಸಾಲಾಗಣ್ಣ ಕೆಡುವಿಯೇ ನೆಲ್ಲ
ತಂಗಿಯಮ್ಮ ಗೋಧಿ ನೂಕೊಳೆ
ಸುವ್ವಿ ಬಾ ಸುವ್ವಿ ಬಾ

ಆರು ಖಂಡಗದ ಗೋಧಿ ಎಲ್ಲಾದವು ಅಣ್ಣ
ದೂರದ ಬಳಗ ಬರುತ್ತಾರೆ
ಸುವ್ವಿ ಬಾ ಸುವ್ವಿ ಬಾ
ದೂರದ ಬಳಗ ಬರುತ್ತಾರೆ
ಸುವ್ವಿ ಬಾ ಸುವ್ವಿ ಬಾ.

**೧೪. ಋತುಮತಿಯಾದಾಗ ಹೇಳುವ ಹಾಡು**

ಪಟ್ಟೆದಮ್ಮ ಸೀರೆ ತೆಕ್ಕೆಗೆ ಹಿಡಕೊಂಡು
ಸುತ್ತಲ ಗೆಳತಿಯರನ್ನ ಕರಕೊಂಡು ಸೋಬಾನ॥
ಸುತ್ತಲ ಗೆಳತಿಯರನ್ನ ಕರಕೊಂಡೆ ಬಸಕ್ಕ
ಕಂದಾಗ ನೀರ್ಯೊಯಕ್ಕೆ ಕರಕೋಳೆ ಸೋಬಾನ॥

ಸಾದಿ ನನ್ನ ಸೀರೆ ತೊಳು ಹೊಲಿಸಿಕೊಂಡು
ದೂರಲ ಗೆಳತಿಯರನ್ನ ಕರಕೊಂಡೆ ಸೋಬಾನ॥
ದೂರಲ ಗೆಳತಿಯರನ್ನ ಕರಕೊಂಡೆ ಬಸಕ್ಕ
ಮಗಳಿಗೆ ನೀರ್ಯೊಕ್ಕೆ ಕರಕೋಳೆ ಸೋಬಾನ॥

ಮೈನೆರೆತ ಮಗಳಿಗೆ ಮ್ಯುಯರೇ ತಂದರೋ
ಐನ್ನೋರು, ಪಟ್ಟಣದ ದೊರೆಗಳೇ ಸೋಬಾನ॥
ಐನ್ನೋರು, ಪಟ್ಟಣದ ದೊರೆಗಳು ಸೋದರು ಮಾವ
ಮೈತದ ಹಸ್ತವ ಕಡಗ ಸೋಬಾನ॥

ಹಸ್ತಕ್ಕೆ ಕಡುಗಕ್ಕೆ ಕಸ್ತೂರಿ ಹೆಣ್ಣಿಗೊಪ್ಪಿ
ನಪ್ಪು ಅಂಗದೋಲೆ ಕಿಪಿಗೊಪ್ಪಿ ಸೋಬಾನ॥
ನಪ್ಪುಅಂಗದೋಲೆ ಕಿಪಿಗೊಪ್ಪಿ ಸಂಭ್ರಮ
ಬಣ್ಣ ಸರ ಒಪ್ಪಿ ಬಳುಲ್ಯಾಳೆ ಸೋಬಾನ॥

## ೧೫. ಒಸುಗೆ ತರುವಾಗ ಹೇಳು ಹಾಡು

ಒಂದಂಗಡಿ ಮಲ್ಲಿಗೆ ಒಂದಂಗಡಿ ಕ್ಯಾದಿಗೆ
ಮುಂದೊಂದಂಗಡಿ ಬಿಡಿ ಹೂವೇ ಸೋಬಾನ॥
ಮುಂದೊಂದಂಗಡಿ ಬಿಡಿ ಹೂವು ಕೇಳುತ್ತಾ ಬಂದ
ರಂಭೆ ಸಂಭ್ರಮನ ಹಿರಿಯಣ್ಣ ಸೋಬಾನ॥

ಎರಡಂಗಡಿ ಮಲ್ಲಿಗೆ ಎರಡಂಗಡಿ ಕ್ಯಾದಿಗೆ
ಮತ್ತೊಂದಂಗಡಿ ಬಿಡಿ ಹೂವೇ ಸೋಬಾನ॥
ಮತ್ತೊಂದಂಗಡಿ ಬಿಡಿ ಹೂವು ಕೇಳುತ್ತಾ ಬಂದ
ಮಿಸ್ತ್ರೀ ಸಂಭ್ರಮನ ಕಿರಿ ತಮ್ಮ ಸೋಬಾನ॥

ಎದ್ದು ಬಾರಮ್ಮ ನಿನ್ನ ಹೆಜ್ಜೆನ ನೋಡೆನು
ಬುದ್ಧಿವಂತ ಅವರ ಹಡದಪ್ಪ ಸೋಬಾನ॥
ಬುದ್ಧಿವಂತ ಅವರ ಹಡದಪ್ಪ ಹನುಮಣ್ಣ
ಮೊಗ್ಗೆ ಹರುಡಾನೇ ನಡು ಮನೆಗೆ ಸೋಬಾನ॥

ನಡೆದು ಬಾರಮ್ಮ ನಿನ್ನ ನಡಿಗೆಯ ನೋಡೆನು
ಕಡು ಜಾಣೆ ಅವರ ಹಡದಮ್ಮ ಸೋಬಾನ॥
ಕಡು ಜಾಣೆ ಅವರ ಹಡದಮ್ಮ ಮಹಾಲಕ್ಷ್ಮೀ
ಹೂವೇ ಹರುಡಾಳೇ ನಡುಮನೆಗೆ ಸೋಬಾನ॥

ಚಿತ್ರಕಲ್ ದುರ್ಗಕ್ಕೆ ಉತ್ತರವು ಬರೆಯಣ್ಣ
ರಾಯ ನಿನ್ನ ಮಗಳು ಮೈಯನೆರೆತ ಸೋಬಾನ॥
ರಾಯ ನಿನ್ನ ಮಗಳು ಮೈಯನೆರೆತೆಂಬುದು ಕೇಳಿ
ಹುತ್ತುತ್ತಿ ಹೇರಿ ಕಳುಹನೇ ಸೋಬಾನ॥

ರಾಯನೇ ದುರ್ಗಕ್ಕೆ ಕಾರ್ಡ್‌ಬರೆಯಣ್ಣ
ರಾಯ ನಿನ್ನ ಮಗಳೇ ಮೈನೆರೆತ ಸೋಬಾನ॥
ರಾಯನೇ ನಿನ್ನ ಮಗಳೇ ಮೈನೆರೆತೆಂಬುದು ಕೇಳಿ
ಹುತ್ತುತ್ತಿ ಹೇರು ಕಳುಹನೇ ಸೋಬಾನ॥

ರಾಯನೇದುರ್ಗಕ್ಕೆ ಕಾರ್ಡ್ ಬರೆಯಣ್ಣ
ಶೆಟ್ಟಿ ನಿನ್ನ ತಂಗಿ ಮೈಯನೆರೆತ ಸೋಬಾನ॥
ಶೆಟ್ಟಿ ನಿನ್ನ ತಂಗಿ ಮೈಯನೆರೆತೆಂಬುದು ಕೇಳಿ
ಏಲಕ್ಕಿ ಹೇರು ಕಳುಹನೇ ಸೋಬಾನ॥

**೧೬. ಮದುವೆ ಮನೆಯಲ್ಲಿ ಊಟಕ್ಕೆ ಇಡುವ ಸಂದರ್ಭದಲ್ಲಿ ಹಾಡುವ ಹಾಡು**

ಊಟ ಇಡಿರಿ ಕೋಟೆ ಸಾಲು ಮನೆಯವರೇ
ತೋಪಿ ಹಚ್ಚು ಹೊಡೆದ ಗೌಡರೇ॥
ತೋಪಿನೇ ಹಚ್ಚು ಹಿಡಿದ ಗೌಡರಿರೋ
ಊಟಕ್ಕೂ ಸಂಭ್ರಮದಿಂದ ಕಳುವ್ಯರೇ॥

ಮಂಡೆ ಅನ್ನ ಬಿಚ್ಚಿ ಮಂಚ ಇಳಿಯೇ
ಬಿಸಿ ನೀರಿನ ಗೋಣಿಯ ಮುಖ ತೋಳಿಯೇ॥
ಬಿಸಿ ನೀರ ಗೋಣಿಯ ಮುಖ ತೋಳಿಯೇಸಂಭ್ರಮ
ರಂಭೆರು ತಂದ ಅಡುಗೆ ಉಣು ಬಾರೇ

ಉಂಬಕ್ಕೆ ಹೇಳ್ಯಾರೆ ಸಂದು ಸಾಲು ಮನೆಯರೇ
ಗೊಂಬೆ ಹಚ್ಚು ಹೊಡೆದ ಗೌಡರೇ॥
ಗೊಂಬೆನ್ನೆ ಹಚ್ಚು ಹೊಡೆದ ಗೌಡರೇ ಕಳುಹರೋ
ಉಂಬಕ್ಕೆ ಸಂಭ್ರಮಗೆ ಕಳುಹರೇ

ಮಂಡೆ ಅನ್ನ ಬಿಚ್ಚಿ ಮಂಚವ ಹೇರಿ
ತಣ್ಣೀರೀನ ಗೋಣಿ ಮುಖ ತೋಳಿ॥
ತಣ್ಣೀರೀನ ಗೋಣಿ ಮುಖ ತೋಳಿಯೇ ಸಂಭ್ರಮ
ನೆಸ್ತ್ರೇರು ತಂದ ಅಡುಗೆ ಉಣು ಬಾರೇ॥

**೧೭. ಮೈನೆರೆತಾಗ ಗಂಗಮ್ಮನ ಶಾಸ್ತ್ರ ಮಾಡುವಾಗ ಹೇಳುವ ಹಾಡು**

ಹತ್ತು ಜನ ಸೇರಿ ಕಿತ್ತರೆ ಚಿಲುಮೆಯ
ಎತ್ತ ನೋಡಿದರು ಜಲವಿಲ್ಲ ॥
ಎತ್ತೇನೆ ನೋಡಿದರು ಜಲವಿಲ್ಲ ಗಂಗಮ್ಮ
ಕಡುಗನೆ ಕೊಡುತ್ತೇನೆ ತೆರಿಯೇ

ಆರು ಜನ ಸೇರಿ ಕಿತ್ತರೆ ಚಿಲುಮೆ
ಯಾವಲ್ಲಿ ನೋಡಿದರು ಜಲವಿಲ್ಲ॥
ಯಾವಲ್ಲಿ ನೋಡಿದರು ಜಲವಿಲ್ಲ ಗಂಗಮ್ಮ
ಓಲೆ ಕೊಡುತ್ತಿನಿ ತೆರಿಯೇ

ಸೀಗಿ ಕಾಯಿ ಅನ್ನ ಸಿಗಿದು ಶೆಟ್ಟಿ ತಂದೆ
ನಾಗಗನ್ನ ಕೆರುನಲು ನಲುದೆ॥
ನಾಗನ್ನೆ ಗನ್ನಕ್ಕಿ ನಲು ನಲುದೆ ನೀರು
ಸೀಗಿಯ ವನಕ್ಕೆ ಹರು ಹೋದವೆ॥

ನುಗ್ಗಿ ಕಾಯಿ ಅನ್ನ ಸ್ವಾರೆಗೆ ತುಂಬಿ
ಭದ್ರನ್ನಕ್ಕಿಗೆ ನಲು ನಲುದೆ॥
ಭದ್ರನ್ನೇಗನ್ನಕ್ಕಿ ನಲು ನಲುದ ನೀರು
ನುಗ್ಗಿಯ ವನಕ್ಕೆ ಹರುದಾವೆ

ಪಟ್ಟೆದಮ್ಮ ಸೀರೆ ಬೇರೆ ಬಿಚ್ಚಿ ಉಡುವಾಗ
ಸುತ್ತಲ ಗೆಳತಿಯರೆ ಕೈಯಲ್ಯೊಯದೆ॥
ಸುತ್ತಲ ಗೆಳತಿಯರೆ ಕೈಯಲ್ಯೊಯ ನಕ್ಕರೆ
ಮುಟ್ಟು ಬೇಡಿರಿ ಗೆಣತಿ ಮೈಯನೆರುತೆ॥

ಮುಟ್ಟು ಬೇಡಿರಿ ಗೆಣತಿ ಮೈಯನೆರುತೆ ಎಂಬ ಸುದ್ದಿ
ಒಟ್ಟು ಹನ್ನೇರೆಡು ವರುಸಕ್ಕೆ॥
ಒಟ್ಟುವೂ ಹನ್ನೆರೆಡು ವರುಸಕ್ಕೆ
ಕೊಟ್ಟ್ಯಾಳೇ ಎಳೆ ಸೀಗಿಳಿ॥
ಕೊಟ್ಟ್ಯಾಳೇ ಎಳೆ ಸೀಗಿಳಿ ತಮ್ಮಟೆದುಂಡೆ
ಮೈನೆರೆದೆ ಕರಕೊಳ್ಳಿ ಮಗಳಿಗೆ ನೀರ್ಯೋದೆ ಕರಕೊಳೆ

ಸಾದಿ ನನ್ನ ಸೀರೆ ಎಳೆ ನೋಡಿ ಉಡುವಾಗ
ದೂರಲ ಗೆಳತಿಯರ ಕರೆಯ್ಯೋದೆ॥
ದೂರದ ಗೆಳತಿಯರ ಕರೆಯ್ಯೋದೆ ನಕ್ಕರೆ
ನೋಡು ಬ್ಯಾಡಿರಿ ಗೆಳತಿ ಮೈಯನೆರೆತೆ॥
ನೋಡು ಬ್ಯಾಡಿರಿ ಗೆಣತಿ ಮೈಯನೆರೆತ ಸುದ್ದಿ
ಹರುದಾವೇ ಹನ್ನೇರೆಡೆ ವರುಸ॥
ಹರುದಾವೇ ಹನ್ನೇರೆಡೆ ವರುಸ ಮಹಾಲಕ್ಷ್ಮೀ
ಮಾಡ್ಯಾಳೇ ಎಳ್ಳು ಸೀಗಿಳ್ಳಿಯ॥
ಮಾಡ್ಯಾಳೇ ಎಳ್ಳು ಸೀಗಿಳಿ ತಮ್ಮಟದುಂಡೆ
ಕಂದಾಗೇ ಹಾಲು ಒತ್ತಿ ಕರಕೊಳ್ಳೆ॥

### ೧೮. ಒಸುಗೆ ತರುವಾಗ ಹೇಳುವ ಹಾಡು

ಒಸುಗೆಯು ಬರುವಾಗ ಬೆಸಗ್ಯಾವ್ರೋ ತಮ್ಮಟಗಲ್ಲು
ಬಸುಳೆಯ ಮರವೇ ನಡುಗ್ಯಾವೇ॥

ಬಾಸುಳೆಯ ಮರವೇ ನಡುಗ್ಯಾವೆ ಪಾಪೇನ ಹಳ್ಳಿ
ಒಸುಗೆ ಬಂದುರು ಹೋಗುವಾಗ॥

ಅಂದಲು ಬರುವಾಗ ಅಂಜವೊ ತಮ್ಮಟಗಲ್ಲೆ
ಗಂಧದ ಮರವೇ ನಡುಗ್ಯಾವೇ ॥
ಗಂಧದ ಮರವೇ ನಡುಗ್ಯಾವೇ ಪಾಪೇನ ಹಳ್ಳಿ
ಅಂದಲು ಬಂದು ಹೋಗುವಾಗ॥

ಎತ್ತೆನೋ ನೋಡಿದರು ಅವರಪ್ಪನ ಕಡೆಯ ಬಳಗ
ಎತ್ತಿನೆ ಮೇಲೆ ಜವಳಿ॥
ಎತ್ತಿನ ಮೇಲೆ ಜವಳಿ ಹೇರಿಕೊಂಡು
ಚಿಕ್ಕಪ್ಪ ದೊರೆಯೇ ಮುಯ್ಯ ತಂದ॥

ಚಿಕ್ಕಪ್ಪ ದೊರೆಯೇ ಏನೇನು ಮುಯ್ಯ ತಂದ
ಬೆಂಡಲೆ ಬೆಳ್ಳಿ ಕಡಗವ
ಬೆಂಡೋಲೆ ಬೆಳ್ಳಿ ಕಡಗವ ತಂದಿದೇನೆ
ಚಂದಳದ ಗೊಂಬೆ ಉಡಿ ಒಡ್ಡೆ॥

ಎಲ್ಲೇನು ನೋಡಿದರು ಅವರವ್ವನ ಕಡೆಯ ಬಳಗ
ಹೊರೆಯ ಮೇಲೆ ಜವಳಿ॥
ಹೊರೆಯ ಮೇಲೆ ಜವಳಿ ಹೇರಿಕೊಂಡು
ಅವರ ಮಾವಯ್ಯ ದೊರೆಯೆ ಮುಯ್ಯ ತಂದ॥

ಮಾವಯ್ಯ ದೊರೆಯೇ ಏನೇನು ಮುಯ್ಯ ತಂದೆ
ಅರುಳವೇ ಹಸ್ತ ಕಡುಗ॥
ಅರುಳವೇ ಹಸ್ತ ಕಡುಗ ಮುಯ್ಯತಂದಿದ್ದೇನೆ
ಮಾಯದ ಗೊಂಬೆ ಉಡಿ ಒಡ್ಡೆ.

೧೯. ತಾಮುಂದೆ ಗಂಜಿಗಟ್ಟೆ ಬಯಲಗೆ
ಒಂದೊಂದೆ ಹೂವು ಬಿಡುಸುವನೇ ಸೋಬಾನ
ಒಂದೊಂದೆ ಹೂವು ಬಿಡುಸುವನೇ ಅಂಜಿನಿ
ಮಂಗಳದ ಪೂಜೆ ನಿಮ್ಮ ಮನೆಯಾಗೆ ಸೋಬಾನ
ಯಾಕೋಜ್ಜ ನಿಮ್ಮ ಮನೆಯಾಗೆ ಸೋಬಾನ
ಯಾವ ಪೂಜೆ ನಿಮ್ಮ ಮನೆಯಾಗೆ ಮಂಗಳವಾರ

ಹುತ್ತಿತ್ತಿ ಹಣ್ಣಿನಂಗೆ ನಿಸ್ತ್ರೇದ್ದು ಬರುತ್ತಾಳೆ ಸೋಬಾನವೇ
ಎಂಬೆ ಬಿಡಿರಣ್ಣ ಎಡಬಲಕ್ಕೆ ಸೋಬಾನವೇ
ಎಂಬೆನೇ ಬಿಡಿರಣ್ಣ ಎಡಬಲಕ್ಕೆ ಸಿಂಥಮ್ಮನ ಸೋಬಾನವೇ
ತಾಯಿ ತಂದೆ ಅಗಲಿ ಬರುತ್ತಾಳೆ ಸೋಬಾನವೇ॥

ಬಾಳೆ ಹಣ್ಣಿನಂಗೆ ಬಾಲೆದ್ದು ಬರುತ್ತಾಳೆ ಸೋಬಾನವೇ
ಭಾಜ ಬಿಡಿರಣ್ಣ ಎಡಬಲಕ್ಕೆ ಸೋಬಾನವೇ
ಭಾಜ ಬಿಡಿರಣ್ಣ ಎಡಬಲಕ್ಕ ಸಿಂಥಮ್ಮನ ಸೋಬಾನವೇ
ಅಣ್ಣ ತಮ್ಮಗಳ ಅಗಲಿ ಬರುತ್ತಾಳೆ ಸೋಬಾನವೇ॥

**ಜನಪದ ಗೀತೆಗಳು**

೧

ಬಾರಪ್ಪ ಬಳೆಗಾರ ಹೇಗಿದೆಯೋ ತವರೂರು
ವರ್ಷಕ್ಕೊಮ್ಮೆ ಹೋದಗು ಬರಲಿಲ್ಲ ತವರವರು ॥
ಬಹಳ ದೂರ ತರೂರು ನನಗೆ ಹೇಳಿ ಕಳುಹಿದರು
ಕಥೆ ಹೇಳುತ್ತಿನಿ ತಂಗಿ ಸುರಿಸಬೇಡ ಕಣ್ಣೀರು ॥

ಅವ್ವ ಏನು ಹೇಳಿದಳು ಅಪ್ಪ ಏನು ಹೇಳಿದನು
ಮಗಳಿಗೆ ಕೊಡು ಅಂತ ಏನು ಕೊಟ್ಟು ಕಳುಹಿದರು ॥

ಯಾಕಪ್ಪ ಬಳೆಗಾರ ನಿನ್ನ ಕಣ್ಣಲ್ಲಿ ಕಣ್ಣೀರು
ಆನಂದದ ತವರವರು ಏಕೆ ನನ್ನ ಮರೆತವರು ॥

ಅಣ್ಣ ಏನು ಹೇಳಿದನೊ ತಮ್ಮ ಏನು ಹೇಳಿದನೊ
ಅಣ್ಣನ ಹೆಂಡತಿ ಏನು ಹೇಳಿ ಕಳುಹಿದಳು ॥
ಯಾಕಪ್ಪ ಬಳೆಗಾರ ನಿನ್ನ ಕಣ್ಣಲ್ಲಿ ಕಣ್ಣೀರು
ಆನಂದದ ತವರವರು ಏಕೆ ನನ್ನ ಮರೆತವರು

ಅಣ್ಣ ಬಂದು ಹೇಳಿದನು ತಮ್ಮ ಬಂದು ಹೇಳಿದನು
ಅಣ್ಣನ ಹೆಂಡತಿ ಮರುಗುತ್ತ ಮಲಗಿದಳು ॥
ಯಾಕಪ್ಪ ಬಳೆಗಾರ ನಿನ್ನ ಕಣ್ಣಲ್ಲಿ ಕಣ್ಣೀರು
ಆನಂದದ ತವರವರು ಏಕೆ ನನ್ನ ಮರೆತವರು

ನಿಮ್ಮಪ್ಪ ನಿಮ್ಮಮ್ಮ ನಿಮ್ಮೂರಿಗೆ ಹೊರಟಿದರು
ತುಂಬಿದ ಹೋಲೆಯಾಗಿ ದೋಣಿ ಮುಳುಗಿ ಹೋದರು ॥
ಅಯ್ಯೋ ನನ್ನ ಹಡದಪ್ಪ ಅಯ್ಯೋ ನನ್ನ ಹಡದಮ್ಮ
ತಬ್ಬಲಿ ಮಾಡಿ ನನ್ನ ದೂರಾಗಿ ಹೋದಿರಾ ॥

೨

ಸರ್ವ ಮಂಗಳ ಮಾಂಗಲ್ಯಯೇ
ಶಿವೇ ಸರ್ವತಾ ಸಾದಿಕೆ
ಶರಣೆ ತ್ರೈಯಂಬಿಕೆ ದೇವಿ
ನಾರಾಯಣಿ ನಮೋಸ್ತುತ್ತೆ

ಇಂದು ಶುಕ್ರವಾರ ಶುಭವ ತರುವ ವಾರ ॥
ಸುಮಂಗಲೆಯರೆಲ್ಲ ನೀನ್ನ ಪೂಜಿಸುವ ಪುಣ್ಯವಾರ ॥
ಇಂದು ಶುಕ್ರವಾರ ಶುಭವ ತರುವ ವಾರ ॥

ಮುಂಜಾನೆ ಮಡಿಯುಟ್ಟು ॥
ಕುಂಕುಮವ ಹಣೆಗಿಟ್ಟು ॥
ರಂಗೋಲಿ ಬಾಗಿಲಿಗಿಟ್ಟು ॥
ಹಣ್ಣು ಕಾಯಿ ಹೊಡೆಯುವ ವಾರ
ಇಂದು ಶುಕ್ರವಾರ ಶುಭವ ತರುವ ವಾರ ॥

ಮಲ್ಲಿಗೆ ಜಾಜಿ ಹೂ ಮಾಲೆಯಾಗಿ
ಚಂದನ ಹಚ್ಚಿ ಶೃಂಗಾರ ಮಾಡಿ ॥
ಕರ್ಪೂರದಾರತಿ ನಿನಗೆ ಬೆಳಗಿ ॥
ಭಕ್ತಿಯಿಂದ ಭಜಿಸುವ ವಾರ
ಇಂದು ಶುಕ್ರವಾರ ಶುಭವ ತರುವ ವಾರ ॥

ಸುವಾಸಿನಿಯರಿಗೆ ಕುಂಕಮ ಹಚ್ಚಿ
ಸಂಭ್ರಮದಿಂದ ಬಾಗಿನ ನೀಡಿ
ಸರ್ವಮಂಗಳೆ ಕೀರ್ತಿಯ ಪಾಡಿ ॥
ಸಕಲ ಭಾಗ್ಯವ ಬೇಡುವ ವರ
ಇಂದು ಶುಕ್ರವಾರ ಶುಭವ ತರುವ ವಾರ.

## ಭಜನೆ ಹಾಡುಗಳು

೧

ಓಂ ನಮ ಶಿವಾಯ ಓಂ ನಮ ಶಿವಾಯ
ಓಂ ನಮ ಶಿವಾಯ ಓಂ ನಮ ಶಿವಾಯ
ಒಂದು ದಳದ ಕಮಲದಲ್ಲಿ ಅರಳಿ ಬಂದ ಲಿಂಗವೆ ॥
ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥

ಓಂ ನಮ ಶಿವಾಯ ಓಂ ನಮ ಶಿವಾಯ ॥
ಎರಡು ದಳದ ಕಮಲದಲ್ಲಿ ಅರಳಿ ಬಂದ ಲಿಂಗವೆ ॥
ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥

ಓಂ ನಮ ಶಿವಾಯ ಓಂ ನಮ ಶಿವಾಯ ॥
ಮೂರು ದಳದ ಕಮಲದಲ್ಲಿ ಅರಳಿ ಮೂಡಿ ಬಂದ ಲಿಂಗವೆ ॥
ಸತ್ಯ ಪ್ರಾಣ ಲಿಖಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ

ಓಂ ನಮ ಶಿವಾಯ ಓಂ ನಮ ಶಿವಾಯ ॥
ನಾಲ್ಕು ದಳದ ಕಮಲದಲ್ಲಿ ನಾಶಗೋಪಿ ಲಿಂಗವೆ ॥
ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥

ಓಂ ನಮ ಶಿವಾಯ ಓಂ ನಮ ಶಿವಾಯ ॥
ಐದು ದಳದ ಕಮಲದಲ್ಲಿ ಐಕ್ಯವಾದ ಲಿಂಗವೆ ॥
ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥

ಓಂ ನಮ ಶಿವಾಯ ಓಂ ನಮ ಶಿವಾಯ ॥
ಆರು ದಳದ ಕಮಲದಲ್ಲಿ ಮೂಡಿ ಬಂದ ಲಿಂಗವೆ ॥
ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥

ಓಂ ನಮ ಶಿವಾಯ ಓಂ ನಮ ಶಿವಾಯ ॥
ಏಳು ದಳದ ಕಮಲದಲ್ಲಿ ಘಂಟನಾದ ಲಿಂಗವೆ ॥

ಸತ್ಯ ಪ್ರಾಣ ಲಿಂಗವೆ ನಿತ್ಯ ಪ್ರಾಣ ಲಿಂಗವೆ ॥
ಓಂ ನಮ ಶಿವಾಯ ಓಂ ನಮ ಶಿವಾಯ ॥
೧
ಯಾರಿಗೂ ಬಿಡದು ವಿಧಿಯ ವಿಲಾಸ ಎದಿರಬಾರದು
ಕರಿಬಸವೇಶ್ವರನ ಧ್ಯಾನವ ಮಾಡು ಕಷ್ಟಬಾರದು
ಅಜ್ಜನ ಸ್ಮರಣೆಯ ಮನದಲ್ಲಿ ಮಾಡು ಮುಕ್ತಿ ಸಿಗುವುದು
ಮನುಜ ಮುಕ್ತಿ ಸಿಗುವುದು.

ಪರಮೇಶ್ವರನು ಬ್ರಹ್ಮನ ಶಾಪಕ್ಕೆ ಕಟ್ಟು ಬಿದ್ದನು ॥
ಬ್ರಹ್ಮ ಕಪಾಲವನ್ನು ಇಡಿಯಾಗಿ ಇಟ್ಟರೆ ಶಾಪ ಹೋಗದು
ಶಿವನೇ ಬ್ರಹ್ಮ ಕಪಾಲವನ್ನು ಹಿಡಿದು ಭೀಕ್ಷೆ ಬೇಡಿದ ಇವನು ಭೀಕ್ಷೆ ಬೇಡಿದ
ಯಾರಿಗೂ ಬಿಡದು ವಿಧಿಯ ವಿಲಾಸ ಎದರಬಾರದು
ಕರಿಬಸವೇಶ್ವರನ ಧ್ಯಾನವ ಮಾಡು ಕಷ್ಟಬಾರದು
ಅಜ್ಜನ ಸ್ಮರಣೆಯ ಮನದಲ್ಲಿ ಮಾಡು ಯುಕ್ತಿ ಸಿಗುವುದು
ಮನುಜ ಮುಕ್ತಿ ಸಿಗುವುದು.

ಶನಿದೇವರನೆ ನಿಂದಿಸಿ ವಿಕ್ರಮ ಕಾಡು ಸೇರಿದ ॥
ಶನಿ ದೇವರನ್ನು ನೆನೆಯದಿದ್ದರೆ ಶಾಪ ಹೋಗದು
ಕೈ ಕಾಲು ಮುರಿದುಕೊಂಡು ಗಾಣ ತಿರುವಿದ ವಿಕ್ರಮಗಾಣ ತಿರುವಿದ
ಯಾರಿಗೂ ಬಿಡದು ವಿಧಿಯ ವಿಲಾಸ ಎದರಬಾರದು ॥

ವಿಶ್ವಮಿತ್ರನ ಶಾಪಕ್ಕೆ ಹರಿಶ್ಚಂದ್ರ ಕೆಟಟು ಬಿದ್ದನು
ಸ್ಮಶಾನ ಕಾಯುತ್ತಾ ಕಾಡಿನಲ್ಲಿ ಕಾಡಿ ಹೋದನು
ತನ್ನ ಮಗನ ಶವವು ಬಂದರೆ ಹೊರಗೆ ತಳ್ಳದ ಹರಿಶ್ಚಂದ್ರ ಹೊರಗೆ ತಳ್ಳದ
ಯಾರಿಗೂ ಬಿಡದು ವಿಧಿಯ ವಿಲಾಸ ಎದರಬಾರದು ॥

ಕರಿಬಸವೇಶ್ವರನ ಜಪತಪದಿಂದ ಮಂತ್ರ ಹೇಳಿದ
ಪ್ವೆವಗಳ ಬಿಡಿಸಿ ಭಕ್ತರ ಕಷ್ಟವ ದೂರ ಮಾಡಿದ
ಆ ಗುರಿವಿನ ಧ್ಯಾನವ ನಾವು ನಿತ್ಯ ಮಾಡುವ ಮನುಜ ನಿತ್ಯ ಮಾಡುವ
ಯಾರಿಗೂ ಬಿಡದು ವಿಧಿಯ ವಿಲಾಸ ಎದರಬಾರದು ॥

೩

ಬ್ರಹ್ಮ ಕುಂಬಾರ ನಿನಾದೆ ಬ್ರಹ್ಮ ಮಹಾದೇವ ನೀನಾದೆ
ಇಡೀ ಬ್ರಹ್ಮಾಂಡವ ತುಂಬಿದ ಗಂಡಿಗೆ ನೀನೆ ಮಡಿದ್ದೆ ॥ಬ್ರಹ್ಮ॥
ಮಮಕಾರ ಮಣ್ಣನು ತಂದು ನಿರಾಕಾರ ನೀರನ್ನು ಎರೆದು
ನಿರಾಕಾರ ನೀರನ್ನು ಎರೆದು ಹದಮಡಿ ತುಳಿದಿದ್ದೆ ॥ಬ್ರಹ್ಮ॥
ಗುಣವೆಂಬ ಗುಟವನಿಟ್ಟು ವಿಷ್ಣು ಚಕ್ರವನಿಟ್ಟು ॥
ಓಂಕಾರ ಕೋಲಪಿಡಿದು ಗರಗರ ತಿರುವಿದ್ದೆ ॥ಬ್ರಹ್ಮ॥
ತನುವೆಂಬ ಹಾವಿಗೆಯ ಒಳಗೆ ಗಡಿಗೆಯ ಒಡ್ಡಿದ್ದೆ ॥
ಅಗ್ನಿಯ ಪುಟವ ಮುಚ್ಚಿ ಗಡಿಗೆ ಸುಟ್ಟಿದ್ದೆ ॥ಬ್ರಹ್ಮ॥
ನಾನಾ ತರಹದ ಗಡಿಗೆಯ ಮಾಡಿ ಗಡಿಗೆಯ ಇಳವಿದ್ದೆ ॥
ಮುನ್ನೂರ ಅರವತ್ತೈದು ಪೆಟ್ಟನ್ನು ಕೊಟ್ಟಿದ್ದೆ ॥ಬ್ರಹ್ಮ॥
ಅವರವರ ಹಣೆಬರಹವನ್ನು ಗಡಿಗೆಯಲ್ಲಿ ಬರೆದಿದ್ದೆ ॥
ತಿರುಗಿ ಬಾರದ ಊರಿಗೆ ಗಡಿಗೆ ಕುಳುವಿದ್ದೆ ॥ಬ್ರಹ್ಮ॥
ಧರೆಯೊಳೊ ಹುಬ್ಬಳ್ಳಿ ಗುರು ಸಿದ್ಧರೂಢರ ॥
ಗುರುಸಿದ್ಧರೂಢರ ಪಾದಕೊಂದಿತು ಗಡಿಗೆ ॥ಬ್ರಹ್ಮ॥
ಇಡೀ ಬ್ರಹ್ಮಾಂಡವ ತುಂಬಿದ ಗಡಿಗೆ ॥
ನೀನೇ ಮಾಡಿದ್ದೆ ॥ಬ್ರಹ್ಮ॥

೪

ಆತ್ಮರಾಮ ಆನಂತ ರಮಣ
ಅಚ್ಚುತ ಕೇಶವ ಹರಿನಾರಾಯಣ
ಭವ ಭಯಹರಣ ವಂದಿತ ಚರಣ ॥

ರಘುಕುಲ ಭೂಷಣ ರಾಧೆ ಗೋಪಾಲ
ಆತ್ಮರಾಮ ಆನಂತ ರಮಣ
ಅಚ್ಚುತ ಕೇಶವ ಹರಿನಾರಾಯಣ
ದಶರಥ ನಂದನ ಶ್ರೀರಾಮ ॥
ದಶಮುಖ ಮರ್ಧನ ರಘುರಾಮ
ಆತ್ಮರಾಮ ಆನಂತ ರಮಣ ॥
ಉಡುಪಿಯಲ್ಲಿರುವಂತ ಶ್ರೀಕೃಷ್ಣ ॥
ಹನುಮನ ಭಜಿಸುವ ಶ್ರೀರಾಮ ॥
ಆತ್ಮರಾಮ ಆನಂತ ರಮಣ ॥
ಕೌಸಲ್ಯರಾಮ ಶ್ರೀರಾಮ ॥
ಜಾನಕಿ ರಮಣ ಜಯ ಜಯ ರಾಮ ॥
ಆತ್ಮರಾಮ ಆನಂತ ರಮಣ

೫

ರಾಮಕೃಷ್ಣ ಗುರುವೇ ಪರಮಹಂಸ ಗುರುವೇ ॥
ಕಾಮಿತದಾಯಕ ಪ್ರೇಮದಿ ನಮಿಪೆವು ॥
ರಾಮಕೃಷ್ಣ ಗುರುವೇ ಪರಮಹಂಸ ಗುರುವೇ
ಸಕಲ ಮತವನ್ನೆ ಏಕವೆಂದೆನಿಸಿದೆ ॥
ಅಕಣಂಕ ಮಹಿಮ ಮಹಾದೇವ
ಸಕಲ ಮತವನ್ನೆ ಏಕವೆಂದೆನಿಸಿದೆ ॥
ಅಕಣಂಕ ಮಹಿಮೆ ಮಹಾದೇವ
ಲೋಕ ಸೇವೆ ಖ್ಯಾತಿಯ ಹೊಂದಿದೆ
ಮುಕ್ಕಣ್ಣನ ಪ್ರಿಯ ನಮಿಪೆವು ದೇವ ॥
ರಾಮಕೃಷ್ಣ ಗುರುವೇ ಪರಮಹಂಸ ಗುರುವೇ ॥
ಸ್ವಾಮಿ ವಿವೇಕಾನಂದನ ಗುರುವೇ
ಪ್ರೇಮದಿ ಸಲಹಿಯೆ ಸಕಲ ಲೋಕವೆ ॥

ತಾಮಸ ಮಾಡದೆ ಕಾಯುವೆ ಎನ್ನನು ॥

ಚಾಮುಂಡಾಂಬೆಯ ವರಭಕ್ತನೇ

ರಾಮಕೃಷ್ಣ ಗುರುವೇ ಪರಮಹಂಸ ಗುರುವೇ ॥

೬

ಹನುಮಂತನೇ ರಾಮಬಂಟನೇ

ಎಲ್ಲಿರುವೆ ಸ್ವಾಮಿ ಹನುಮ ಜಗದ ನಂಟನೆ

ನಿನ್ನ ಹುಡುಕಿ ಅಲೆದೆನಯ್ಯ ಪರಮಾತ್ಮನೇ ॥

ಹನುಮಂತನೇ ರಾಮಬಂಟನೇ

ಸೀತೆಯ ಶೋಕವ ಅಳಸಿ ಶರಧಿಯನ್ನು ಹಾರಿದವೀರ

ನಿನ್ನ ಶೋಕವ ಅಳಿಸಲು ಹನುಮ ಕರುಣೆ ತೋರಿ ಬೇಗನೆ ಬಾರ

ನಿನ್ನ ಪಾದ ಸೇರುವ ಆಸೆ ಸ್ವಾಮಿ ಹನುಮ ದೇವ ॥

ಅಳಿಸೋಸ್ವಾಮಿ ಈ ಜಗದೆಲ್ಲ ಬಂಧನ ನೋವ ॥

ಹನುಮಂತನೇ ರಾಮಬಂಟನೇ

ಎಲ್ಲಿರುವೆ ಸ್ವಾಮಿ ಹನುಮ ಜಗದ ನಂಟನೆ

ನಿನ್ನ ಹುಡುಕಿ ಅಲೆದೆನಯ್ಯ ಪರಮಾತ್ಮನೆ

ಹನುಮಂತನೇ ರಾಮಬಂಟನೇ

ನಿನ್ನ ದಿವ್ಯ ಚರಿತೆ ಕಥೆಯ ಹನುಮ ನಾನು ಕೇಳಲೇ ಇಲ್ಲ

ನಿನ್ನ ರಾಮ ಭಕ್ತಿಯ ಶಕ್ತಿ ಸ್ವಾಮಿ ನಾನು ಅರಿಯಲೇ ಇಲ್ಲ ॥

ನಿನ್ನ ಗುಡಿಗೆ ಪಾಪಿ ನಾನು ಒಮ್ಮೆ ಬಾರಲೇ ಇಲ್ಲ ॥

ಹಿರಿಯರಾಡೋ ಮಾತುಗಳನ್ನು ಕೇಳಲೇ ಇಲ್ಲ

ಬದುಕಿನಲ್ಲಿ ಒಂದಿಷ್ಟು ಪುಣ್ಯ ಗಳಿಸಲೇ ಇಲ್ಲ

ಹನುಮಂತನೇ ರಾಮಬಂಟನೇ ॥

ಕೆಟ್ಟ ಮೇಲೆ ನನಗೆ ಈಗ ಬುದ್ಧಿಬಂತು ಶ್ರೀ ಹನುಮಂತ

ರಾಮನಾಣೆ ನಿನ್ನ ಮೇಲೆ ಭಕ್ತಿ ಬಂತು ರಾಮರಧೂತ ॥

ನಾನು ನಿನ್ನ ಹಾಗೇ ಬದುಕುವ ಆಸೆ ಹನುಮಂತ

ನಾನು ನಿನ್ನ ಹಾಗೇ ಬದುಕುವ ಆಸೆ ಹನುಮಂತ ॥

ನಿನಗಿಂತ ದೇವರು ಬೇಕೇ ಶ್ರೀ ಹನುಮಂತ

ನಿನಗಿಂತ ಗುರುಗಳು ಬೇಕೆ ರಾಮ ಪಂಡಿತ

ಹನುಮಂತನೇ ರಾಮಬಂಟನೇ

ಯಾವುದೇ ಹಾಡುಗಳಾಗಲೀ ಅಂದರೆ ಜನಪದ ಗೀತೆ, ಭಾವಗೀತೆ, ಭಕ್ತಿಗೀತೆ, ಸೋಬಾನೆ ಪದಗಳು ಪ್ರತಿಯೊಂದು ಹಾಡಿಗೂ ಒಂದು ತಾತ್ಪರ್ಯವಿರುತ್ತದೆ. ಇಲ್ಲಿ ಕೆಲವು ಭಜನೆ ಹಾಡುಗಳನ್ನು ತೆಗೆದುಕೊಳ್ಳಲಾಗಿದೆ. ಇವುಗಳ ಅರ್ಥವನ್ನು ತಿಳಿಸಲಾಗಿದೆ. ಮೊದಲನೇ ಹಾಡಿನಲ್ಲಿ ಸೃಷ್ಟಿಕರ್ತನಾದ ಬ್ರಹ್ಮನನ್ನು ಮಡಿಕೆ ಮಾಡುವ ಕುಂಬಾರನಿಗೆ ಹೋಲಿಕೆ ಮಾಡಲಾಗಿದೆ. ಕುಂಬಾರ ಯಾವ ರೀತಿಯಾಗಿ ಮಡಿಕೆಯನ್ನು ಹಂತ ಹಂತವಾಗಿ ತಯಾರಿಸುತ್ತಾನೋ ಹಾಗೇ ಈ ಜಗತ್ತಿನಲ್ಲಿ ಮನುಷ್ಯರನ್ನು ಸೃಷ್ಟಿ ಆ ಮನುಷ್ಯನಿಗೆ ಮಮಕಾರ, ಪ್ರೀತಿ, ಪ್ರೇಮ, ತ್ಯಾಗ, ದ್ವೇಷ, ಅಸೂಯೆ ಈ ಗುಣಗಳನ್ನು ತುಂಬಿ ಜಗತ್ತಿನಲ್ಲಿ ನಾನಾ ರೀತಿಯ ಜನರನ್ನು ಸೃಷ್ಟಿಸಿ ಆವರಿಸಿ ಮುನ್ನೂರ ಅರವತ್ತೈದು ದಿನಗಳು ನಾನಾ ರೀತಿಯ ಕಷ್ಟ ಸುಖಗಳನ್ನು ನೀಡುತ್ತಾನೆ. ಕಷ್ಟಗಳನ್ನು ಇಲ್ಲಿ ಪೆಟ್ಟು ಎಂದು ಹೋಲಿಕೆ ಮಾಡಿದ್ದರೆ ಮನುಷ್ಯನ ವಿಧಿಯನ್ನು ಬರೆದು ತಿರುಗಿ ಬಾರದ ಊರಿಗೆ ಕಳುಹಿಸಿದ್ದಾನೆ.

ಎರಡನೆಯದು ವಿಷ್ಣುವಿನ ಅವತಾರಗಳಾದ ರಾಮ, ಕೃಷ್ಣರ ಗುಣಗಳನ್ನು ಹಾಡಿ ಹೊಗಳಲಾಗಿದೆ. ಇಲ್ಲಿ ರಘುಕುಲ ಭೂಷಣ, ರಾಧೆ ಗೋಪಾಲ, ದಶರಥನ ನಂದ, ಹನುಮನ ಭಜಿಸುವ ಶ್ರೀರಾಮ, ಕೌಸಲ್ಯರಾಮ, ಜಾನಕಿ ರಮಣ ರಾವಣನನ್ನು ವಿನಾಶಗೊಳಿಸಿದಂತಹವನೆ. ಇಲ್ಲಿ ಯಶೋಧೆಯ ಮಗನಾಗಿ ದ್ವಾರಕಿಯ ಉದ್ದಾರಕ್ಕಾಗಿ ಶ್ರಮಿಸಿದವನೇ ರಾಧೆಯ ಗೆಳೆಯನಾಗಿ, ಜಾಣತನದಿಂದ ನಡೆದುಕೊಳ್ಳುವವನೇ ಉಡುಪಿಯಲ್ಲಿ ನೆಲೆಸಿದಂತಹ ಭಯ-ಭಕ್ತಿಯಿಂದ ಇವನ ಪಾದಗಳಿಗೆ ವಂದಿಸುವ ಸ್ಥಾನ ಪಡೆದಿರುವಂತಹ ಶ್ರೀ ಕೃಷ್ಣ ನಿನಗೆ ಜಯವಾಗಲೀ ಎಂದು ತಿಳಿಸಿದ್ದಾರೆ.

ಮೂರನೆಯದು ರಾಮಕೃಷ್ಣ ಪರಮಹಂಸ ಗುರುವನ್ನು ಪ್ರೇಮದಿ ನಮಸ್ಕರಿಸಿ ಪರಮಹಂಸರು ಜಗತ್ತಿನಲ್ಲಿ ಎಲ್ಲಾ ಮತ ಧರ್ಮಗಳನ್ನು ಒಂದೇ ಎಂದು ತಿಳಿಸುವಂತೆ ಮಾಡಿದವರು ಲೋಕ ಸೇವೆಯನ್ನು ಮಾಡಿ ಖ್ಯಾತಿಯನ್ನು ಪಡೆದಂತಹ ಶಿವನ ಭಕ್ತನೆ, ಸ್ವಾಮಿ ವಿವೇಕಾನಂದರ ಗುರುವೇ ಸಕಲ ಲೋಕವನ್ನು ಪ್ರೀತಿ, ಪ್ರೇಮದಿಂದ ನೋಡಿದವನೇ ತಿರಸ್ಕಾರ ಮಾಡದೆ ನಿನ್ನನ್ನು ಕಾಯುವ ಚಾಮುಂಡಾಂಬೆಯ ವರಭಕ್ತನೇ ಎಂದು ಪರಮಹಂಸರ ಗುಣವನ್ನು ಇಲ್ಲಿ ಸ್ಮರಿಸಿದ್ದಾರೆ.

ಇನ್ನು ಕೊನೆಯದಾಗಿ ಇಲ್ಲಿ ರಾಮನ ಬಂಟನಾದ ಹನುಮಂತನನ್ನು ಭಕ್ತರು ಎಲ್ಲಿರುವೆ ಎಂದು ಹುಡುಕಿ ಅಲೆದರು. ಅಂದರೆ, ಜನರು ಭಕ್ತಿಯಿಂದ ಪೂಜಿಸಿ ತಮ್ಮ ಕಷ್ಟಗಳನ್ನು

ಪರಿಹರಿಸು ಎಂದು ಬೇಡುತ್ತಾರೆ. ರಾವಣನ ಬಂಧನದಲ್ಲಿದ್ದಂತಹ ಸೀತೆಯನ್ನು ಶೋಕದಿಂದ ಮುಕ್ತಿಗೊಳಿಸಿದಂತ ವೀರನೆ ನಮ್ಮ ಕಷ್ಟಗಳನ್ನು ದುಃಖಗಳನ್ನು ಪರಿಹರಿಸಲು ಕರುಣೆ ತೋರಿ ಬೇಗ ಬಾ. ಈ ಜಗತ್ತಿನ ಎಲ್ಲಾ ಬಂಧನಗಳಿಂದ ಮುಕ್ತಿ ಪಡೆದು ನಿನ್ನ ಪಾದ ಸೇರುವ ಆಸೆ. ಆಂಜನೇಯ ನಿನ್ನ ದಿವ್ಯ ಚರಿತ್ರೆಯನ್ನು ನಿನ್ನ ಶಕ್ತಿಯನ್ನು ತಿಳಿಯಲಿಲ್ಲ, ಒಂದು ದಿನಕ್ಕೂ ನಿನ್ನ ದೇವಸ್ಥಾನಕ್ಕೆ ಬರಲೇ ಇಲ್ಲ, ಹಿರಿಯರು ಹೇಳುವ ಮಾತುಗಳನ್ನು ಸಹ ಕೇಳಲಿಲ್ಲ. ಬದುಕಿನಲ್ಲಿ ಪುಣ್ಯ ಅನ್ನುವುದನ್ನು ಗಳಿಸಲೇ ಇಲ್ಲ. ಮನುಷ್ಯನಿಗೆ ಕೆಟ್ಟ ಮೇಲೆ ಬುದ್ಧಿ ಬಂದು ತಾನು ಸಹ ನಿನ್ನ ರೀತಿಯಲ್ಲಿ ಬದುಕಬೇಕು. ಈ ರೀತಿ ಬದುಕಲು ನಿನಗಿಂತ ಗುರುಗಳು ಬೇಕೆ ಎಂದು ಇಲ್ಲಿ ಆಂಜನೇಯನನ್ನು ಹೊಗಳಿದ್ದಾರೆ.

ಇನ್ನು ಸೋಬಾನೆ ಹಾಡುಗಳನ್ನು ನೋಡುವುದಾದರೆ ಮೊದಲನೆ ಹಾಡಿನಲ್ಲಿ ನಡಿಗೆಯಲ್ಲಿ ಒಂದು ಹೆಣ್ಣಿನ ಗುಣವನ್ನು ನಿರ್ಧರಿಸುವ, ಒಳ್ಳೆಯ ಗುಣವಂತೆ ಆದ ಮಗಳನ್ನು ಬಡವರಿಗ್ಯಾಕೆ ಕೊಡಬೇಕಿತ್ತು. ಕಡಲೆ ಬೇಳೆ, ರೊಟ್ಟಿ ಮಾಡುವ ಮನೆಗೆ ಏಕೆ ಕೊಡಬೇಕು ತವರು ಮನೆಗೊಂದು ಮಗಳನ್ನು ಕೊಡಬಹುದಾಗಿತ್ತು. ಹಡಗಿಯ ಚಂದ್ರಮನ ಮಗಳು ಮೈನೆರದವಳೆ ಅವಳನ್ನು ಸೌಭಾಗಿಸು ಆಶೀರ್ವದಿಸು ಇವಳು ನೀರಿಗೆ ಹೋಗಿದ್ದಾಗ ಇವಳ ಅಪ್ಪ ಸಿರಿಧಾನ್ಯಗಳನ್ನು ಕೊಟ್ಟು ಸಂತೋಷದಿಂದ ಹರಸಿದನು. ಈ ಹಾಡನ್ನು ವಧು–ವರರಿಗೆ ಬಾಸಿಂಗ ಕಟ್ಟುವಾಗ ಹಾಡಿದ ಹಾಡು.

ಇನ್ನು ಎರಡನೆಯ ಹಾಡು ಒಬ್ಬ ವ್ಯಕ್ತಿಯ ವಿವಾಹವು ಗುಡಿಯ ಬಸವಣ್ಣನ ದೇವಸ್ಥಾನದಲ್ಲಿ ನಡೆಯುತ್ತದೆ. ದೇವಸ್ಥಾನದಲ್ಲಿ ಇರುವಂತಹವರನು ವಧುವನ್ನು ಮಾತನಾಡಿಸುವುದು ಹೇಗೆ ಎಂದು ಇವರ ವಿವಾಹ ಕಾರ ಹುಣ್ಣಿಮೆ ದಿನ ಗುಡಿಯ ಮುಂದೆ ಮುತ್ತು ಹರಿದಾಗ ಮುತ್ತಿ ಸಲುಹಿದಾಗ ಮುತ್ತಿನ ಪ್ರಯಾಣ ನಡೆಯುತ್ತದೆ. ಅಶೋಕನವ್ವ ನನ್ನ ಮಗ ನಿನ್ನ ಅಳಿಯ ಒಬ್ಬ ವ್ಯಕ್ತಿಯನ್ನು ದ್ವೇಷದಿಂದ ಷರತ್ತಿನಿಂದ ಗೆಲ್ಲಲು ಸಾಧ್ಯವಿಲ್ಲ ಎಂದು ಕುದುರೆಯ ಮೇಲೆ ಬರುವಂತಹ ವ್ಯಕ್ತಿ ನನ್ನ ಮಗ ತುಂಬ ಜಾಣ ಮತ್ತು ಚಲುವ ಆಗಿದ್ದಾನೆ ಎನ್ನುವ ಅರ್ಥವಿದೆ.

ಇನ್ನು ಮೂರನೆಯ ಹಾಡಿನಲ್ಲಿ ಇದು ಕುಟ್ಟುವ ಸಂದರ್ಭದಲ್ಲಿ ಹೇಳುವ ಹಾಡು ಭಜನೆಯನ್ನು ಮಾಡುತ ದೇವರಿಗೆ ಹೂವು ಮುಡಿಸುತ ತಾಳ ತಂಬೂರಿಯನ್ನು ನುಡಿಸುತ್ತಾ ದೇವರ ಹೆಸರಿನಲ್ಲಿ ಬೆಳಿಗ್ಗೆಯೇ ಗುಡಿಯಲ್ಲಿ ಭಜನೆಯನ್ನು ಮಾಡುತ್ತಾರೆ. ಕರಿಯಜ್ಜಿ ರವಕೆ ಉಟ್ಟು ಕೆರೆಯ ನೀರಿಗೆ ಹೋಗುವ ಸಂದರ್ಭದಲ್ಲಿ ತನ್ನ ಊರಿನ ಗೌಡ ಎದುರಿಗೆ ಭಜನೆಯನ್ನು ಮಾಡುತ್ತಾ ಬೇಲೂರಿನಲ್ಲಿ ಸೀರೆ ಬೆಲೆ ಕೇಳುತ್ತಾನೆ. ಆಗ ಸೀರೆಗೆ ೩೦, ಸೆರಗಿಗೆ ನಲವತ್ತು ನೇಯ್ದ ನೇಕಾರನಿಗೆ ಐವತ್ತು ಎಂದು ಹೇಳುತ್ತಾನೆ.

ಇನ್ನು ಕೊನೆಯದಾಗಿ ಗ್ರಾಮೀಣರು ತಮ್ಮ ಜೀವನದಲ್ಲಿ ಸದಾ ನಗು ಎನ್ನುವುದು ತುಂಬುವುದು ಮಳೆ–ಬೆಳೆ ಚೆನ್ನಾಗಿ ಆದಾಗ. ರೈತನಿಗೆ ಹೇಳುವಂತಹದ್ದು ಬಿತ್ತನೆ ಮಾಡಿ ಆದರೆ

ಹೊಲದ ಸುತ್ತ ಬೇಲಿಯನ್ನು ನೆಡಿ ಇಲ್ಲವಾದರೆ ದನಕರುಗಳ ಪಾಲಾಗುತ್ತದೆ. ರೈತ ಬಿತ್ತನೆ ಮಾಡಿ ಮಳೆರಾಯನಿಗಾಗಿ ಕಾಯುವ ಸಂದರ್ಭದಲ್ಲಿ ಎಲ್ಲಿಗೆ ಹೋಗಿದ್ದೆ ಮಳೆರಾಯ ಬಿತ್ತನೆ ಮಾಡಿ ಮಳೆಗಾಗಿ ಕಾಯುತ್ತ ಬಿತ್ತನೆ ಬೀಜ ಬಾಯಿ ಬಿಡುತ್ತಿವೆ ಎಂದು ಮೂಡಲಗಿರಿಯ ಮಹಾದೇವನ, ನಂಜನಗೂಡಿನ ನಂಜುಂಡ, ಎಡೆಯೂರಿನ ಸಿದ್ದಲಿಂಗನನ್ನು ಕಣ್ಣಾರೆ ನಾವು ನೋಡಿವೆವು. ಶಿವನ ಪತ್ನಿಯರನ್ನು ಪಾರ್ವತಿಯನ್ನು ತೊಡೆಯ ಮೇಲೆ ಮುಡಿಯ ಒಳಗೆ ಗೌರಿಯನ್ನು ನಾವು ಕಂಡೆವು. ಬೆಳಿಗ್ಗೆ ಎದ್ದ ತಕ್ಷಣ ನಾವು ಯಾರನ್ನು ನೆನಪು ಮಾಡಿಕೊಳ್ಳಲಿ ಎಳ್ಳು ಜೀರಿಗೆ ಬೆಳೆಯುವ ಭೂಮಿತಾಯಿಯನ್ನು ಎದ್ದೊಂದು ಗಳಿಗೆ ನೆನೆಯೋಣ ಎಂದು ಜನಪದರು ಸಂಜೆ ಆಯಿತು ಆಟವನ್ನು ಆಡಿ ಮನೆಗೆ ಬಾರೋ ಎಂದು ಮಗುವಿಗೆ ಹೇಳುತ್ತಾರೆ.

# ಅಧ್ಯಾಯ ಆರು

ಸಮಾರೋಪ

೬.೧. ಅಧ್ಯಯನದ ಫಲಿತಗಳು

೬.೨. ಗ್ರಂಥ ಋಣ

೬.೩. ವಕ್ತೃ ವಿವರ

೬.೪. ಛಾಯಚಿತ್ರಗಳು

## ಅಧ್ಯಾಯ : ಆರು

# ಸಮಾರೋಪ

ಭಾರತದ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಹಿಂದಿನಿಂದಲೂ ಸಾಮಾಜಿಕ, ಕೌಟುಂಬಿಕ ದೌರ್ಜನ್ಯಗಳಿಗೆ ತುತ್ತಾಗುತ್ತಾ ಬಂದಿದ್ದಾರೆ. ಆದರೆ ಈಗ ಆಧುನಿಕ ಸಮಾಜದಲ್ಲಿ ಮಹಿಳೆಯರ ಪಾತ್ರ ವಿಶಾಲವಾಗಿದೆ. ಈ ತೊಟ್ಟಿಲು ತೂಗುವ ಕೈ ರಾಜ್ಯವನ್ನಷ್ಟೆ ಅಲ್ಲದೆ ಎಲ್ಲ ಕ್ಷೇತ್ರಗಳಲ್ಲೂ ತನ್ನ ಛಾಪನ್ನು ಮೂಡಿಸಿದೆ. ಆದರೂ ಇನ್ನು ಮಹಿಳೆ ದುರ್ಬಲೆ. ಎರಡನೇ ದರ್ಜೆಯ ನಾಗರಿಕಳು ಎಂಬ ಭಾವನೆ ಸಮಾಜದಲ್ಲಿ ಅದರಲ್ಲೂ ಪುರುಷರಲ್ಲಿ ಹೆಚ್ಚಾಗಿ ಬೇರೂರಿದೆ. ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಪುರುಷನಿಗೆ ಇರುವಷ್ಟು ಗೌರವಯುತವಾದ ಸ್ಥಾನಮಾನ ಮಹಿಳೆಯರಿಗೆ ಈಗಲೂ ಇಲ್ಲ. ಈ ನಡುವೆಯೇ ಮಹಿಳೆ ಹೆಚ್ಚು ಸಾಕ್ಷರಳಾಗಿ, ಸುಶಿಕ್ಷಿತಳಾಗಿ ಸ್ವಾವಲಂಬಿಯಾಗಿ ಸಮಾಜದಲ್ಲಿ ಇತರರಿಗೆ ಮಾದರಿಯಾಗುತ್ತಿದ್ದಾಳೆ.

ಆಧುನಿಕ ಯುಗದಲ್ಲಿ ಯೂರೋಪ್ ಮತ್ತು ಭಾರತದಲ್ಲಿ ನಡೆದ ಮಹಿಳಾಪರ ಹೋರಾಟಗಳು ಸ್ತ್ರೀ ಸಮಾನತೆಯನ್ನು ಕೇಳಿವೆಯೇ ಹೊರತು ಅವು ಎಂದಿಗೂ ಪುರುಷನಿಗಿಂತ ಅಧಿಕ ಸ್ಥಾನಮಾನಗಳು ಬೇಕೆಂದು ಹೋರಾಟ ನಡೆಸಿಲ್ಲ. ಸ್ತ್ರೀ ಪರ ಚಿಂತನೆಯು ಸದಾ ಲಿಂಗ ಸಮಾನತೆಯನ್ನು ಪ್ರತಿಪಾದಿಸಿದೆಯೇ ಹೊರತು ಸ್ತ್ರೀ ಪಾರಮ್ಯವನ್ನು ಪ್ರತಿಪಾದಿಸಿಲ್ಲ. ಲಿಂಗದಲ್ಲಿ ಯಾವುದು ಹೆಚ್ಚು, ಯಾವುದೂ ಕಡಿಮೆಯಿಲ್ಲ, ಅವು ಸಮಾನ ನೆಲೆಯಲ್ಲಿ ಪರಸ್ಪರ ಆತ್ಮಗೌರವದಿಂದ ಹೊಂದಾಣಿಕೆಯಿಂದ ನಡೆದುಕೊಂಡು ಹೋದಾಗ ಮಾತ್ರ ಸಮಾಜ ಸುವ್ಯವಸ್ಥೆಯಿಂದ ಇರಲು ಸಾಧ್ಯ.

ಕಳೆದ ಒಂದು ಶತಮಾನದಿಂದಲೂ ಸ್ತ್ರೀಪರ ಆಲೋಚನೆಗಳು ಜಾಗೃತಿಯನ್ನುಂಟು ಮಾಡಲು ಪ್ರತ್ನಿಸಿವೆ. ಸರ್ಕಾರ ಕೂಡಾ ಸ್ತ್ರೀಯ ಮೂಲಭೂತ ಹಕ್ಕುಗಳನ್ನು ಕಾಪಾಡಲು ನಿಯಮಗಳನ್ನು ರೂಪಿಸಿದೆ. ಕಾನೂನುಗಳನ್ನು ತಂದಿದೆ. ದುಡಿಮೆಯ ಕ್ಷೇತ್ರದಲ್ಲಿ ಪುರುಷ ಪ್ರಾಧಾನ್ಯತೆಯನ್ನು ಮಿತಗೊಳಿಸಲು ಸ್ತ್ರೀಯರಿಗೆ ವಿಶೇಷ ಮೀಸಲಾತಿ ಸೌಕರ್ಯಗಳನ್ನು ರೂಪಿಸಿವೆ.

ಇಷ್ಟಾದರೂ ಸ್ತ್ರೀಯರ ಸ್ಥಾನಮಾನಗಳನ್ನು ನಿಯಂತ್ರಿಸಿಕೊಂಡು ಬಂದುದರ ಕಾರಣದಿಂದಾಗಿ ಪುರುಷ ರೂಪಿತ ಮೌಲ್ಯಗಳ ಹಿಡಿತದಿಂದ ಸ್ತ್ರೀ ಪರಿಪೂರ್ಣವಾಗಿ ಬಿಡಿಸಿಕೊಳ್ಳಲು ಸಾಧ್ಯವಾಗಿಲ್ಲ. ಪುರುಷ ರೂಪಿತ ಆಲೋಚನೆಗಳು ಮತ್ತು ಧೋರಣೆಗಳು ಇಂದಿಗೂ ನಮ್ಮ ಸಮಾಜವನ್ನು ಆಳುತ್ತಿವೆ. ಆದ್ದರಿಂದ ಲಿಂಗ ತಾರತಮ್ಯ, ಲಿಂಗ ಅಸಮಾನತೆ ಎನ್ನುವುದು ಹೆಚ್ಚಾಗಿದೆ.

ತಮಟಕಲ್ಲು ಗ್ರಾಮೀಣ ಪರಿಸರದಲ್ಲಿ ಮಹಿಳೆಯ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಗ್ರಾಮದ ಬಹುಪಾಲು ಮಹಿಳೆಯರು ಕೃಷಿ ಕೂಲಿ ಅಸಂಘಟಿತ ವಲಯದ ಕೂಲಿಯನ್ನು ಅವಲಂಬಿಸಿದ್ದಾರೆ. ಅರ್ಧಕ್ಕಿಂತ ಹೆಚ್ಚು ಮಹಿಳೆಯರು ಗೃಹಕೃತ್ಯಗಳಲ್ಲಿಯೇ ತೊಡಗುವ ಮತ್ತು ಅವರ ಕಾರ್ಯವನ್ನು ಯಾವುದೇ ವೃತ್ತಿಯೆಂದು ಪರಿಗಣಿಸದ ಸ್ಥಿತಿಯಲ್ಲಿದ್ದಾರೆ, ಹಾಗೂ ಇಂತಹ ಮಹಿಳೆಯರು ಪ್ರಾಥಮಿಕ ಸೌಲಭ್ಯಗಳಿಂದಲೂ ವಂಚಿತರಾಗಿದ್ದಾರೆ. ಕೃಷಿ ಮತ್ತು ಇತರ ಕಷ್ಟಕರ ಕೆಲಸಗಳನ್ನು ಮಾಡಿದರು, ಅವಳು ಆರ್ಥಿಕ ಸ್ವಾವಲಂಬನೆಯಿಂದ ವಂಚಿತಳಾಗಿದ್ದಾಳೆ. ಅಷ್ಟೆ ಅಲ್ಲದೆ ಮಹಿಳೆ ಸಾಮಾಜಿಕ ಹಾಗೂ ರಾಜಕೀಯ ಸಮಾನತೆಗಳಿಂದಲೂ ದೂರವುಳಿಯಬೇಕಾದ ಅನಿವಾರ್ಯ ಸ್ಥಿತಿಗೆ ನೂಕಲ್ಪಟ್ಟಿದ್ದಾರೆ.

ನಮ್ಮಲ್ಲಿ ಮಹಿಳೆ ದುಡಿದರೆ ಆರ್ಥಿಕವಾಗಿ ಸ್ವಾವಲಂಬಿಯಾಗುತ್ತಾಳೆ ಎನ್ನುವ ಸಾರ್ವತ್ರಿಕ ವಿಚಾರ ಒಂದಿದೆ. ಆದರೆ ದುಡಿಯುವ ಎಲ್ಲಾ ಮಹಿಳೆಯರಿಗೂ ಆರ್ಥಿಕವಾಗಿ ಸ್ವಾವಲಂಬಿಗಳಾಗುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ದುಡಿಯುವ ಎಷ್ಟೋ ಮಹಿಳೆಯರಿಗೆ ತಮ್ಮ ದುಡಿಮೆಯಿಂದ ಬಂದ ಹಣವನ್ನು ಖರ್ಚು ಮಾಡುವ ಸ್ವಾತಂತ್ರ್ಯ ಇರುವುದಿಲ್ಲ. ತನ್ನ ದುಡಿಮೆಯ ಹಣವನ್ನು ಮನೆಯಲ್ಲಿ ಗಂಡನ ಕೈಗೆ ತಂದುಕೊಡುವ ಉದಾಹರಣೆಗಳು ನಮ್ಮಲ್ಲಿ ಹಲವಾರು ಇವೆ. ಅಂದರೆ ತನ್ನ ದುಡಿಮೆಯ ಹಣವನ್ನು ಖರ್ಚು ಮಾಡುವ ಅಧಿಕಾರ ಮಹಿಳೆಗೆ ಇರುವುದಿಲ್ಲ. ಹಾಗೊಂದು ವೇಳೆ ಅವಳಿಗೆ ಖರ್ಚು ಮಾಡುವ ಅವಕಾಶವಿದ್ದಾಗಲೂ ಅವಳು ತನ್ನ ದುಡಿಮೆಯ ಹಣವನ್ನು ಕುಟುಂಬದ ಹಿತಾಸಕ್ತಿಗಾಗಿ ಮನೆಯ ನಿರ್ವಹಣೆಗಾಗಿ ಬಳಸುತ್ತಾಳೆಯೇ ಹೊರತು ಸ್ವಹಿತಕ್ಕಾಗಿ ಬಳಸಿಕೊಳ್ಳುವುದಿಲ್ಲ. ಹೀಗೆ ಬಹುಪಾಲು ಗ್ರಾಮ ಮಹಿಳೆಯರು ತಮ್ಮ ದುಡಿಮೆಯಿಂದ ಬಂದ ಹಣವನ್ನು ಗಂಡನ ಕುಡಿತದ ಚಟಕ್ಕೂ, ಮಕ್ಕಳ ಲಾಲನೆ, ಪಾಲನೆಗೂ, ಮನೆಯ ನಿರ್ವಹಣೆಗೂ ವ್ಯಯಿಸುವುದು ಕಂಡುಬರುತ್ತದೆ.

ಕೆಲವು ಕುಟುಂಬದಲ್ಲಿ ಪುರುಷನಿದ್ದಾಗ್ಯೂ ಕುಟುಂಬದ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರವಹಿಸಿ ಗಂಡ ಹಿನ್ನೆಲೆಯಲ್ಲಿದ್ದರೆ ಅಥವಾ ಹೆಣ್ಣನ್ನು ಸಮಾನತೆಯಿಂದ ಕಂಡು ಅವಳಿಗೆ ಕುಟುಂಬದಲ್ಲಿ ಮುಕ್ತ ಅವಕಾಶ ನೀಡಿದರೆ ಅದನ್ನು ಅಕ್ಕ-ಪಕ್ಕದವರು ಇಷ್ಟಪಡುವುದಿಲ್ಲ. ಅಂತಹ ಪುರುಷನನ್ನು ಹೆಂಡತಿಯ ಗುಲಾಮ ಎಂದೋ, ಹೆಂಡತಿಯ ಛೇಲಾ ಎಂದೋ, ಹೆಂಡ್ತಿ ಸೆರಗಿನ ಹಿಂದೆ ಅಡ್ಡಾಡುವವನೆಂದು ಕರೆದು ಆ ಪುರುಷನನ್ನು ಅವಮಾನಗೊಳಿಸಲಾಗುತ್ತದೆ. ಅಂದರೆ ಅವರ ಈ ಮನೋಭಾವದ ಹಿಂದೆ ಮಹಿಳೆಗೆ ಕಲ್ಪಿಸುವ ಸಮಾನತೆಯನ್ನು ಹತ್ತಿಕ್ಕುವ

ಹುನ್ನಾರ ಅಡಗಿರುತ್ತದೆ. ಹೀಗೆ ಕುಟುಂಬಗಳಲ್ಲಿ ಪ್ರತಿನಿತ್ಯವು ಮಹಿಳೆ ಪುರುಷನಿಗೆ ಅಧೀನವಾಗಿಯೇ ಇರಬೇಕೆಂಬ ನಿರೀಕ್ಷೆಗಳಿರುತ್ತವೆ. ಆ ಕಾರಣಕ್ಕಾಗಿ ಮಹಿಳೆ ಪುರುಷನಂತೆ ಸಮಾನವಾಗಿ ಬದುಕುವುದನ್ನು ಅವರು ಸಹಿಸುವುದಿಲ್ಲ. ಹಾಗೆ ಮಹಿಳೆ ಮುನ್ನಡೆಗೆ ಬಂದ ಸಂದರ್ಭಗಳಲ್ಲಿ ಮಹಿಳೆ ಗಂಡು ಬೀರಿಯಾಗಿಯೂ, ಗಯ್ಯಾಳಿಯಾಗಿಯೂ ಕರೆಯಲ್ಪಡುತ್ತಾಳೆ. ಒಟ್ಟಿನಲ್ಲಿ ಕುಟುಂಬದಲ್ಲಿ ಪುರುಷನಿಗೆ ಪ್ರಾಶಸ್ತ್ಯವಿದ್ದಷ್ಟು ಮಹಿಳೆಗೆ ಇಲ್ಲದೆ ಇರುವುದನ್ನು ಗುರಿತಿಸಬಹುದು.

ಗ್ರಾಮದಲ್ಲಿ ಸಾಂಪ್ರಾದಾಯಿಕ ನೆಲೆಯಲ್ಲಿ ಬದುಕನ್ನು ರೂಪಿಸಿಕೊಂಡಿರುವಂತಹ ಬಹು ಸಂಖ್ಯಾತ ಕುಟುಂಬಗಳು ಮಹಿಳೆಯ ಶಿಕ್ಷಣದ ಬಗ್ಗೆ ಅಸಡ್ಡೆ ಹೊಂದಿರುವುದನ್ನು ಪ್ರಸ್ತುತ ದಿನಮಾನಗಳಲ್ಲಿಯೂ ಗುರುತಿಸಬಹುದಾಗಿದೆ. ಹೆಣ್ಣು ಮತ್ತು ಗಂಡು ಮಕ್ಕಳ ಬಗೆಗಿನ ನಮ್ಮ ಸಾಮಾಜಿಕ ಅಭಿಪ್ರಾಯಗಳಿಂದಾಗಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸವನ್ನು ಮುಂದುವರೆಸುವುದೇನು ಸಹಜದ ಮಾತಲ್ಲ. ವಾಸ್ತವದಲ್ಲಿ ಶಿಕ್ಷಣದ ಉನ್ನತ ಹಂತಗಳನ್ನು ತಲುಪಿದ ಹೆಣ್ಣು ಮಕ್ಕಳ ಸಾಧನೆ, ಸಾಮರ್ಥ್ಯಗಳು ಗಂಡು ಹುಡುಗರನ್ನು ಮೀರಿಸುತ್ತದೆ. ಆದರೂ ಮಹಿಳೆ ಶಿಕ್ಷಣಕ್ಕೆ ಕುಟುಂಬದಲ್ಲೇ ಹಲವು ರೀತಿಯ ಕಂಟಕಗಳಿವೆ. ಅಷ್ಟೇನು ಬುದ್ದಿವಂತನಲ್ಲದ ಮಗ ಚೆನ್ನಾಗಿ ಓದುವ ಮಗಳು ಇವರಿಬ್ಬರಲ್ಲಿ ಉನ್ನತ ಶಿಕ್ಷಣದ ಅವಕಾಶ ಲಭಿಸುವುದು ಮೊದಲು ಮಗನಿಗೆ. ಉಳಿದರೆ ಮಗಳಿಗೆ ಕೆಲವೊಮ್ಮೆ ಆರ್ಥಿಕ ಅನುಕೂಲವಿದ್ದರೂ ಜಾಸ್ತಿ ಓದಿದರೆ ಗಂಡು ಸಿಗಲಾರನೆಂಬ ಕಾರಣ ಅವಳ ಅವಕಾಶವನ್ನು ಮೊಟುಕುಗೊಳಿಸಲಾಗುತ್ತದೆ. ಹೆಣ್ಣು ಮಗು ಮದುವೆಯಾಗಿ ಬೇರೊಂದು ಮನೆಯನ್ನು ಸೇರುವುದರಿಂದ ಆಕೆಯ ಶಿಕ್ಷಣದಿಂದ ತಮಗೇನೂ ಪ್ರಯೋಜನವಿಲ್ಲ ಎಂಬ ಭಾವನೆ ಹೆಚ್ಚಿನ ಪಾಲಕರಲ್ಲಿದೆ. ಅಲ್ಲದೆ ವರದಕ್ಷಿಣೆಗೆ ಹಣ ಹೊಂದಿಸಬೇಕಾಗಿರುವಾಗ ಆಕೆಯ ಶಿಕ್ಷಣದ ವೆಚ್ಚವನ್ನು ಭರಿಸುವುದು ಪಾಲಕರಿಗೆ ಕಷ್ಟದಾಯಕವಾಗಿ ಪರಿಣಮಿಸುತ್ತದೆ. ಒಂದು ವೇಳೆ ಹೆಣ್ಣು ಮಗುವಿಗೆ ಶಿಕ್ಷಣ ನೀಡಿದರೂ ಅದು ಅತ್ಯಲ್ಪ ವೆಚ್ಚದ್ದಾಗಿರುತ್ತದೆ. ಮನೆಯ ಹತ್ತಿರದಲ್ಲೇ ಶಿಕ್ಷಣ ಸಂಸ್ಥೆ ಇಲ್ಲದಿದ್ದಲ್ಲಿ ಹೆಣ್ಣು ಮಗುವಿನ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಲಾಗುತ್ತದೆ ಮತ್ತು ಇತ್ತೀಚಿನ ದಿನಗಳಲ್ಲಿ ಮಹಿಳೆ ಮತ್ತು ಚಿಕ್ಕಮಕ್ಕಳ ಮೇಲೆ ನಡೆಯುವ ಅತ್ಯಾಚಾರ, ಮಾನಭಂಗಗಳನ್ನು ದೂರದರ್ಶನ, ನ್ಯೂಸ್ ಪೇಪರ್‌ನಲ್ಲಿ ನೋಡಿದ ಪೋಷಕರು ತಮ್ಮ ಮಕ್ಕಳು ಓದದಿದ್ದರು ಪರವಾಗಿಲ್ಲ ಮಾನ, ಮರ್ಯಾದೆ ಮುಖ್ಯ. ಮನೆಯಲ್ಲಿ ಚಟ್ನಿ, ಮುದ್ದೆ ತಿಂದರೂ ಪರವಾಗಿಲ್ಲ ಇವರು ಓದಿ ಉದ್ದಾರ ಆಗುವುದು ಅಷ್ಟರಲ್ಲಿಯೇ ಇದೆ. ನಮ್ಮ ಊರಿನಲ್ಲಿ ಒಂದರಿಂದ ಹತ್ತನೇ ತರಗತಿಯವರೆಗೆ ಇದೆ. ಅಲ್ಲಿವರೆಗೂ ಮಾತ್ರ ಓದಿಸುವುದಾಗಿದೆ ಎಂದು ಹೇಳಿದರೆ, ಮತ್ತೆ ಕೆಲವರು ನಮ್ಮ ಮಕ್ಕಳ ವಿದ್ಯಾಭ್ಯಾಸ ಮಾಡಿ ಸರ್ಕಾರಿ ನೌಕರಿ ಪಡೆಯಬೇಕು ಎಂದು ಹೇಳಿದರು. ಏಕೆ ಎಂದು ಪ್ರಶ್ನೆ ಮಾಡಿದ್ದಕ್ಕೆ, ಅವರ ಉತ್ತರ ಹೀಗಿತ್ತು. ಅವಳ ಭವಿಷ್ಯದ ಭದ್ರತೆಯ ದೃಷ್ಟಿಯಿಂದ ಸಮಾಜದಲ್ಲಿ ಗೌರವದ ಬಾಳು ಬಾಳಲು ಪುರುಷರೊಂದಿಗೆ ಮನೆಗಳಲ್ಲಿ ಸಮಾನ ಹಕ್ಕು ಪಡೆದುಕೊಳ್ಳಲು ಮತ್ತು ಒಂದು ವೇಳೆ ಆರ್ಥಿಕ ಭದ್ರತೆ ಇಲ್ಲದೆ

ಗಂಡನಿಂದ ಬೇರ್ಪಟ್ಟು ಮಕ್ಕಳ ಜೊತೆ ಒಂಟಿಯಾಗಿ ಬದುಕು ಅತ್ತ ತಾಯಿಯ ಮನೆಯಲ್ಲೂ ಬೇಡವಾದ ಇತ್ತ ಗಂಡನ ಮನೆಯಲ್ಲೂ ಸುಖ ಸಿಗದ ಹೆಣ್ಣಿನ ಸ್ಥಿತಿಯನ್ನು ನೋಡಿದರೆ ಇಂತಹ ಪರಿಸ್ಥಿತಿಯಲ್ಲಿ ಹೆಣ್ಣು ಶಿಕ್ಷಣ ಪಡೆದು ಸ್ವ-ಉದ್ಯೋಗವನ್ನು ಹೊಂದಿದ್ದರೆ ಕುಡುಕ ಗಂಡನಾಗಿರಲಿ, ದುಡಿಯದ ಗಂಡನಾಗಿರಲಿ ತನ್ನ ದುಡಿಮೆಯಿಂದ ಕೌಟುಂಬಿಕ ಜವಾಬ್ದಾರಿಗಳಾದ ಮಕ್ಕಳ ಲಾಲನೆ ಪೋಷಣೆ ಮಾಡುತ್ತಾ ಸಮಾಜದಲ್ಲಿ ಗೌರವಯುತವಾಗಿ ಬಾಳಬೇಕೆಂದರೆ ಶಿಕ್ಷಣ ಮುಖ್ಯ.

ಮಹಿಳೆ ರಾಜಕೀಯ ಸುಪರ್ದಿಗೆ ಬರಲು ಅವಳ ಆಸಕ್ತಿಯಿಲ್ಲದಿದ್ದರು ಮೀಸಲಾತಿಯನ್ನು ಒಂದು ಆಸ್ತಿ ಮಾಡಿಕೊಂಡು ಪುರುಷರು ಮತ್ತು ಮೇಲ್ಜಾತಿಗಳು ತಮ್ಮ ಹಿಡಿತವನ್ನು ಸಾಧಿಸಲು ತುಂಬ ಜಾಣತನದಿಂದ ಅವಳನ್ನು ತಮ್ಮ ಸೂತ್ರದ ಗಾಳಿಪಟದಂತೆ ಆಡಿಸುತ್ತವೆ. ಮಹಿಳೆಗೆ ಈ ಬಗ್ಗೆ ತಾತ್ಸಾರವಿದೆ. ಪುರುಷ ವರ್ಗ ಮತ್ತು ಮೇಲ್ ವರ್ಗಗಳ ಹಿತಸಾಧನೆಗಾಗಿಯೇ ತನ್ನ ರಾಜಕೀಯ ಅಧಿಕಾರ ಬಳಕೆಯಾಗುತ್ತಿದೆ ಎಂಬ ಅರಿವು ಅವಳಿಗಿದೆ. ಲಿಂಗ ಮತ್ತು ಅನಕ್ಷರತೆಯ ಕಾರಣದಿಂದ ಸಭೆ ಸಮಾರಂಭಗಳಲ್ಲಿ ಅವಳ ದಾಖಲಾತಿಯೂ ಕೇವಲ ಸಾಂಕೇತಿಕ ಹಾಗೂ ಅಲಂಕಾರಿಕ, ಉತ್ಸವ ಮೂರ್ತಿಯಂತೆ ಕಂಡುಬರುತ್ತದೆ. ಅಧಿಕಾರ ಕೇಂದ್ರದ ಅತ್ಯಂತ ಕೆಳಮಟ್ಟದ ಅಂಗವಾಗಿರುವ ಗ್ರಾಮ ಪಂಚಾಯಿತಿಗಳಲ್ಲಿ ಮಹಿಳಾ ರಾಜಕೀಯ ಅಸ್ತಿತ್ವವನ್ನು ಅಲುಗಾಡಿಸುವಂತ ಕಾರ್ಯಗಳು ನಿರಂತರವಾಗಿ ನಡೆಯುತ್ತಿವೆ. ಮಹಿಳೆಗೆ ಅಧಿಕಾರ ಸಿಕ್ಕಿದೆ ಎಂದರೆ ಅದು ಮೇಲ್ಜಾತಿಯ ಪುರುಷ ವರ್ಗದಿಂದ ಮತ್ತು ಮನೆಯ ಯಜಮಾನನ ಹಿಡಿತದಿಂದಲೇ ರಾಜಕೀಯಕ್ಕೆ ತರಲು ಹಾಗೆಯೇ ತಮ್ಮ ಹಿಡಿತವನ್ನು ಇನ್ನಷ್ಟು ವಿಸ್ತರಿಸಿಕೊಳ್ಳಲು ಅವಳು ಒಂದು ದಾಳವಾಗಿಯೇ ಬಳಕೆಯಾಗುತ್ತಿದ್ದಾಳೆ.

ಮಹಿಳೆ ತನಗೆ ರಾಜಕೀಯ ಅಧಿಕಾರ ಸ್ವಂತ ಆಯ್ಕೆ ಅಥವಾ ಬೇಕು ಎಂದು ಬಯಸಿ ಬಂದಿಲ್ಲದಿರುವ ಅಂಶಗಳನ್ನು ನೋಡಿದರೆ, ಅವಳಿಗಿರುವ ರಾಜಕೀಯ ಇಚ್ಛಾಶಕ್ತಿಯ ಅರಿವು ನಮಗಾಗಬಹುದು. ಮಹಿಳೆಗೆ ಸಾಮಾಜಿಕ ನಿರ್ಬಂಧಗಳಿವೆಯೋ ಹಾಗೆಯೇ ಕೌಟುಂಬಿಕವಾಗಿಯೂ ನಿಯಂತ್ರಣಗಳಿವೆ. ಹೀಗಿದ್ದಾಗ್ಯೂ ಅವಳು ಕುಟುಂಬದ ವಿರೋಧದ ನಡುವೆಯೂ ಕುಟುಂಬದ ಹಿರಿಯ ಪುರುಷನ ಮಾತಿನ ಅಣತಿಯಂತೆ ರಾಜಕೀಯಕ್ಕೆ ಬಂದಿರುವುದೇ ಹೆಚ್ಚು. ಪಂಚಾಯಿತಿಯಲ್ಲಿ ಆಯ್ಕೆಯಾದ ಮಹಿಳಾ ಸದಸ್ಯೆ ಅಥವಾ ಅಧ್ಯಕ್ಷೆಯ ಅಧಿಕಾರವನ್ನು ಚಲಾಯಿಸುವವರು ಆ ಮಹಿಳೆಯ ಗಂಡ ಅಥವಾ ಅಪ್ಪ, ಅಣ್ಣ ಯಾರೋ ಒಬ್ಬರಿಂದ ಅಧಿಕಾರ ಚಲಾವಣೆಯಾಗುತ್ತಿರುತ್ತದೆ. ಅಧಿಕಾರಕ್ಕೆ ಬಂದ ಮಹಿಳೆಗೆ ಅಜೆಂಡಾ ಎಂದರೇನು? ಕೋರಂ ಎಂದರೇನು? ಸಭೆಯಲ್ಲಿ ಭಾಗವಹಿಸದಿರುವುದು ಪ್ರಾಥಮಿಕ ಮಾಹಿತಿ ತಿಳಿದುಕೊಳ್ಳದೇ ಹೋದರೆ ತಾನು ಆಯ್ಕೆಯಾದ ಪ್ರದೇಶದ ಜನ ನನ್ನಿಂದ ಏನು ನಿರೀಕ್ಷೆ ಮಾಡುತ್ತಾರೆ ಎನ್ನುವ ಅರಿವು ಇಲ್ಲದೆ ಇರುವುದು. ಅನಕ್ಷರತೆ, ಶಿಕ್ಷಣದ ಕೊರತೆಯಿಂದಾಗಿ ಮತ್ತು ಪುರುಷರ ಅಧೀನದಲ್ಲಿ ಅಧಿಕಾರ ಇರುವುದರಿಂದ

ಕೆಲವೊಮ್ಮೆ ಇವಳು ಮೌನವಾಗಿಯೇ ಇರುತ್ತಾಳೆ. ಇನ್ನು ಕೆಲವು ೪೫-೫೫ರ ವಯಸ್ಸಿನ ಒಳಗೆ ಇರುವ ಮಹಿಳೆಯರು ಅಧಿಕವಾಗಿ ರಾಜಕೀಯಕ್ಕೆ ಬರುತ್ತಿದ್ದಾರೆ. ಇಂತಹ ಸಂಕುಚಿತ ಮನೋಭಾವದ ಹಿಂದೆ ವ್ಯಕ್ತಿಗತವಾಗಿ ಬಂದಿರುವ ಅವಳ ಪಾವಿತ್ರ್ಯತೆಯನ್ನು ಪ್ರಶ್ನಿಸುವ, ಸಂಶಯಿಸುವ ಸಂಭವವೇ ಹೆಚ್ಚು. ಈ ಕಾರಣದಿಂದಲೇ ಅವರು ಮಧ್ಯ ವಯಸ್ಸಿಗೆ ಬಂದ ನಂತರವೇ ಅವರಿಗೆ ರಾಜಕೀಯ ವೇದಿಕೆ ಸೃಷ್ಟಿಸಲಾಗುತ್ತಿದೆ. ರಾಜಕೀಯ ನೀತಿ-ನಿರ್ಧಾರಗಳನ್ನು ತೆಗೆದುಕೊಳ್ಳಲು ಹಾಗೂ ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿಮರ್ಶಿಸಲು, ಪರಿಶೀಲಿಸಲು ಶೈಕ್ಷಣಿಕ ಮಟ್ಟ ಅತ್ಯಂತ ಅಗತ್ಯ. ಆದರೆ ಮಹಿಳಾ ವಿಷಯದಲ್ಲಿ ಇದು ತುಂಬಾ ವ್ಯತಿರಿಕ್ತವಾದ ರೂಪದಲ್ಲಿದ್ದು ಇತ್ತೀಚಿನ ದಿನಗಳಲ್ಲಿ ಈ ಪರಿಸ್ಥಿತಿ ಸುಧಾರಿಸುತ್ತಿದೆ. ಆದರೆ ಅವಳು ಪಿಯುಸಿ ಅಥವಾ ಡಿಗ್ರಿ ಮಾಡಿದ್ದರು ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಂದರ್ಭ ಬಂದಾಗ ಮಹಿಳೆ ಮೌನವಹಿಸಬೇಕಾದ ಪರಿಸ್ಥಿತಿ ಇದೆ. ಮಹಿಳೆಯ ಆಲೋಚನಾಶಕ್ತಿ ಕಡಿಮೆ, ರಾಜಕೀಯದ ಬಗ್ಗೆ ಅವಳಿಗೆ ಅರಿವಿಲ್ಲ, ತರ್ಕ ಚತುರತನಗಳು ಅವಳಿಗೆ ನೈಸರ್ಗಿಕವಾಗಿ ಸಿಕ್ಕಿಲ್ಲ ಎಂಬ ಹುಸಿ ಕಲ್ಪನೆಗಳನ್ನು ಇಟ್ಟುಕೊಂಡು ವ್ಯವಸ್ಥಿತವಾಗಿ ಅವಳ ರಾಜಕೀಯವನ್ನು ತುಳಿಯುವ ನಿಯಂತ್ರಿಸುವ ಅಂಶಗಳು ಇವಾಗಿವೆ. ಗ್ರಾಮ ಸಭೆಗಳಿಗೆ ಇವಳು ಗೈರು ಹಾಜರಾಗುತ್ತಿರುವುದು ಕಂಡುಬರುತ್ತದೆ. ಗ್ರಾಮ ಸಭೆಯಂತಹ ಮಹತ್ವದ ಚರ್ಚೆಯಲ್ಲಿ ಭಾಗವಹಿಸುವಿಕೆಯ ಜೊತೆ ಜೊತೆಗೆ ಗ್ರಾಮಸಭೆಯ ಕುರಿತಾದ ಸಾಮಾನ್ಯ ತಿಳುವಳಿಕೆ ಇಲ್ಲದಿರುವುದು ಸಹ ಇವರು ಗೈರು ಹಾಜರು ಆಗಲು ಕಾರಣ ಆಗಬಹುದು.

ಮಹಿಳೆಯ ರಾಜಕೀಯ ಸಹಭಾಗಿತ್ವ ಕಂಡುಬಂದರೂ ಅದು ಸರ್ಕಾರಿ ಅಂಕಿ ಅಂಶಗಳಿಗೆ ಮತ್ತು ಮೀಸಲಾತಿ ಇದೆ ಎಂಬ ಕಾರಣಕ್ಕಾಗಿ. ಆದರೆ ವಾಸ್ತವದಲ್ಲಿ ಅವಳಿಗೆ ನೀಡಿರುವ ಅಧಿಕಾರ ಕೇವಲ ತೋರಿಕೆಯದ್ದೆ ಆಗಿರುತ್ತದೆ. ಏಕೆಂದರೆ ಮಹಿಳೆ ಇಂದಿಗೂ ಔಪಚಾರಿಕವಾಗಿ ರಾಜಕೀಯ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳದೆ ತನ್ನಲ್ಲಿಯ ಕರ್ತವ್ಯ ಶಕ್ತಿಯನ್ನು ಹೊರಹಾಕದೆ ಕುಳಿತಿದ್ದಾರೆ.

ಭಾರತವು ಬಹು ವಿಶಿಷ್ಟ ಸಾಂಸ್ಕೃತಿಕ ಸಾಮಾಜವಾಗಿದೆ. ಅದು ಹಲವು ಪ್ರಕಾರದ ಧರ್ಮ, ಪಂಗಡ, ಪಂಥ ಎನ್ನುವ ಏಣಿ-ಶ್ರೇಣಿ ಇರುವಂತೆ ಒಂದೊಂದು ಧರ್ಮ, ಸಮುದಾಯ ತನ್ನದೆಯಾದ ಸಾಂಪ್ರದಾಯಿಕ ಆಚರಣೆಗಳು ಬಹು ದೀರ್ಘ ಅವಧಿಯಿಂದಲೂ ರೂಢಿಸಿಕೊಂಡರೂ ಮುಂದುವರೆಯುತ್ತಿವೆ. ಸಮುದಾಯಗಳಲ್ಲಿ ನಡೆಯುವಂತಹ ರೂಢಿ, ಸಂಪ್ರದಾಯಗಳು, ಜಾತ್ರೆ, ಉತ್ಸವಗಳು ಹಾಗೂ ಕುಟುಂಬದಲ್ಲಿ ಜರುಗುವಂತಹ ದೈವ ಮನೆದೇವರುಗಳ ಆಚರಣೆಯಲ್ಲಿ ಪ್ರಮುಖ ಪಾತ್ರವಹಿಸುವಂತಹ ವ್ಯಕ್ತಿ ಯಾರು ಎನ್ನುವ ಪ್ರಶ್ನೆಗೆ ಸಾಮಾನ್ಯವಾಗಿ ಪುರುಷರೆಂದೆ ಉತ್ತರ ಬರುತ್ತದೆ. ಆದರೆ ಮಹಿಳೆಗೆ ಇರುವಂತಹ ಪ್ರಾತಿನಿಧ್ಯ ಮಸುಕಾಗಿ ಎದ್ದು ಕಾಣುತ್ತದೆ. ಸಮಾಜ ಪರಿವರ್ತನೆಯಾದಂತೆ ಮಹಿಳೆಯನ್ನು ನೇಪಥ್ಯಕ್ಕೆ ಸರಿಸಿದ್ದಾರೆ. ಮನುಕುಲದ ಸೃಷ್ಟಿ

ಹಾಗೂ ಲಾಲನೆ- ಪಾಲನೆ-ಪೋಷಣೆಯನ್ನು ಹೊತ್ತ ಸ್ತ್ರೀಗೆ ಯಾವ ಧರ್ಮವೂ ಸಂಪೂರ್ಣ ಸ್ವತಂತ್ರ್ಯವನ್ನು ನೀಡಿಲ್ಲ (ಆರ್.ಇಂದಿರಾ ೨೦೦೨, ಪುಟ ೨೬). ಒಂದು ಅವಧಿಯಲ್ಲಿ ಮಹಿಳೆಯನ್ನು ದೈವತ್ವದ ಪಟ್ಟಕ್ಕೇರಿಸಿದ ಇದೇ ಸಮಾಜ ಇವತ್ತಿನ ಸಂದರ್ಭದಲ್ಲಿ ಅವಳಿಗೆ ಹೇರಿರುವ ನಿರ್ಬಂಧಗಳು ನೂರಾರು. ಆಚರಣೆ, ಉತ್ಸವಗಳಲ್ಲಿ ಕಂಡುಬರುವಂತೆ ಪೂಜಾ-ವಿಧಿವಿಧಾನಗಳಲ್ಲಿ ತಯಾರಿ ಮಾಡುವ ಕರ್ತವ್ಯ ಮಹಿಳೆಯದೆ. ಆದರೆ ಅಂತಿಮವಾಗಿ ದೇವತೆಗಳಿಗೆ ಪೂಜೆ ಸಲ್ಲಿಸುವವನು ಮಾತ್ರ ಪುರುಷನೇ ಆಗಿದ್ದಾನೆ.

ಸ್ವಾತಂತ್ರ್ಯ ನಂತರ ಭಾರತದಲ್ಲಿ ಸಂವಿಧಾನ ದತ್ತವಾಗಿ ೧೯೫೬ರಲ್ಲಿ ಹಿಂದೂ ಉತ್ತರಾಧಿಕಾರತ್ವದ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಈ ಕಾಯಿದೆ ಅನ್ವಯ ಸ್ತ್ರೀಯರಿಗೆ ಮತ್ತು ಪುರುಷರಿಗೆ ಸರಿಸಮಾನ ಹಕ್ಕುಗಳನ್ನು ನೀಡಿದೆ. ಭೂ ಒಡೆತನ ಹೊಂದಿದವರ ಸಂಖ್ಯೆಯನ್ನು ಗಮನಿಸಿದರೆ ಭೂ ಒಡೆತನ ಹೊಂದಿದವರು ವಿರಳವಾಗಿರುವುದು ಕಂಡುಬರುತ್ತದೆ. ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ನೀಡಿ ೫೩ ವರ್ಷಗಳು ಕಳೆದರೂ ಸಹ ಅದು ವಾಸ್ತವದಲ್ಲಿ ಇನ್ನು ಕನಸಿನ ಮಾತಾಗಿಯೇ ಉಳಿದಿರುವುದು ಮಹಿಳೆಯರ ಪಾಲಿಗೆ ದುರಂತದ ಸಂಗತಿಯಾಗಿದೆ. ಒಂದು ವೇಳೆ ಆಸ್ತಿಯ ಹಕ್ಕು ಕೆಲವು ಮಹಿಳೆಯರಿಗೆ ಹಕ್ಕಿದೆಯಾದರೂ ಅದು ಕೇವಲ ನಾಮಕಾವಸ್ಥೆಯದ್ದಾಗಿರುತ್ತದೆ. ಏಕೆಂದರೆ ಭೂ ಒಡೆತನವೇನೋ ಮಹಿಳೆಯರ ಹೆಸರಿನಲ್ಲಿರುತ್ತದೆ. ಆದರೆ ಅದರ ಮೇಲೆ ಯಾವುದೆ ಬಗೆಯ ನಿರ್ಣಯಾತ್ಮಕವಾದ ಹಕ್ಕು ಅವಳಿಗಿರದು. ಆಕೆಯ ಗಂಡ ಇಲ್ಲವೆ ಆಕೆಯ ಮಾವ, ಇಲ್ಲವೆ ಆಕೆಯ ಸಹೋದರರ ಅನುಕೂಲಕ್ಕೆ ತಕ್ಕಂತೆ ಆ ಭೂಮಿ (ಆಸ್ತಿ) ಬಳಕೆಯಾಗುತ್ತದೆ.

ತುಂಬಾ ಶ್ರೀಮಂತ ಕುಟುಂಬಗಳಲ್ಲಿ ಆಸ್ತಿ ಅಧಿಕವಾಗಿರುವಾಗ ಸಹಜವಾಗಿ ಆಗ ಒಬ್ಬ ವ್ಯಕ್ತಿಯ ಹೆಸರಿನಲ್ಲಿಯೇ ಎಲ್ಲ ಆಸ್ತಿಯೂ ಇದ್ದರೆ ಸರಕಾರ ವಿಧಿಸಿದ ಆದಾಯ ಮಿತಿಗಿಂತ ಅಧಿಕವಾಗುತ್ತದೆ. ಅಂತ ಸಂಕಷ್ಟಗಳಿಂದ ಪಾರಾಗಲು ಪುರುಷರು ಮಾಡಿರುವಂತಹ ಪರ್ಯಾಯ ಮಾರ್ಗವೆಂದರೆ ಹೆಂಡತಿಯ ಹೆಸರಿನಲ್ಲೊ, ತಾಯಿಯ ಹೆಸರಿನಲ್ಲೊ ಆಸ್ತಿಯನ್ನು ವರ್ಗಾಯಿಸುತ್ತಾರೆ ಹೊರತು, ತಮ್ಮ ಅಕ್ಕ-ತಂಗಿಯರ ಹೆಸರಿನಲ್ಲಿ ವರ್ಗಾಯಿಸುವುದಿಲ್ಲ. ಏಕೆಂದರೆ ಅವರು ಪರರ ಮನೆಗೆ ಮದುವೆಯಾಗಿ ಹೋಗುವುದರಿಂದ ಹೀಗೆ ಆಸ್ತಿ ವರ್ಗಾಯಿಸುವುದರಿಂದ ಸರಕಾರ ವಿಧಿಸುವ ಆಸ್ತಿಯ ಮೇಲಿನ ಹೆಚ್ಚುವರಿ ತೆರಿಗೆಯಿಂದ ಮುಕ್ತವಾಗಬಹುದೆಂಬ ಉದ್ದೇಶದಿಂದ ಮಹಿಳೆಗೆ ಇಲ್ಲಿ ಒಡೆತನ ಸಿಕ್ಕರುತ್ತಿದೆಯೇ ಹೊರತು ಅದು ಮಹಿಳೆಗೆ ನೈಜ ಒಡೆತನವಾಗಿರದೆ ಕೇವಲ ನಾಮ ಮಾತ್ರ ಒಡೆತನವಾಗುತ್ತದೆ. ಇನ್ನು ಕೆಲವಡೆ ಮಹಿಳೆಯ ಹೆಸರಿನಲ್ಲಿ ಆಸ್ತಿ ಒಡೆತನ ಇರುತ್ತದೆ. ಕಾರಣ ಇಷ್ಟೆ ಬಡ ಕಾರ್ಮಿಕರಿಗಾಗಿ ಕೊಡಮಾಡುವ ಬ್ಯಾಂಕ್ ಸಾಲ ಅದರಲ್ಲಿ ಕೊಡುವ ಸಬ್ಸಿಡಿ ಇತ್ಯಾದಿ ಈ ರೀತಿಯ ಸರ್ಕಾರದ ಸೌಲಭ್ಯವನ್ನು ಪಡೆಯುವ ಉದ್ದೇಶದಿಂದ. ಮಹಿಳೆಯರ ಹೆಸರಿಗೆ ಆಸ್ತಿಯನ್ನು ಮಾಡಿಸಿರುತ್ತಾರೆಯೇ ಹೊರತು ಬೇರಾವ ಕಾರಣಗಳಿಂದಲ್ಲ.

ಸಂವಿಧಾನ ಬದ್ಧವಾಗಿ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕಿದ್ದಾಗಲೂ ಮಹಿಳೆಯರ ಬದುಕಿನಲ್ಲಾಗಲಿ ಅವರ ಸ್ಥಿತಿಗತಿಗಳಲ್ಲಾಗಲಿ ಅಂತಹದ್ದೇನು ವಿಶೇಷವಾದ ಇಲ್ಲವೆ ಗುರುತರವಾದ ಪರಿವರ್ತನೆಯಾಗದೆ ಇದು ಮಹಿಳೆಯತ್ತ ಮತ್ತಷ್ಟು ಸಂಕಷ್ಟಕ್ಕೆ ಎಡೆ ಮಾಡಿದೆ. ಏಕೆಂದರೆ ಕುಟುಂಬದಲ್ಲಿ ತಂದೆಯ ಸಾವಿನ ನಂತರ ಮದುವೆಯಾಗಿ ಹೋದ ಹೆಣ್ಣುಮಕ್ಕಳು ತಮ್ಮ ಸಹೋದರರಲ್ಲಿ ಆಸ್ತಿಯನ್ನು ಕೇಳುವುದರಿಂದ ಅನೇಕ ಸಂಬಂಧಗಳು ಒಡೆದು ಹೋಗುತ್ತವೆ. ಅಂದರೆ ಇಲ್ಲಿ ಆ ಮಹಿಳೆ ಆಸ್ತಿಯನ್ನು ಪಡೆದುಕೊಳ್ಳಬೇಕೋ ಇಲ್ಲವೆ ತನ್ನ ತವರಿನ ಸಂಬಂಧವನ್ನು ಉಳಿಸಿಕೊಳ್ಳಬೇಕೋ ಎನ್ನುವ ಸಂದಿಗ್ಧ ಪರಿಸ್ಥಿತಿ ಎದುರಾಗುತ್ತದೆ. ಇದು ವಾಸ್ತವ ಸತ್ಯ ಕೂಡ ಹೌದು.

ಇನ್ನು ಜನಪದ ಆಟಗಳಲ್ಲಿ ಮಹಿಳೆಯ ಭಾಗವಹಿಸುವಿಕೆ ಬಗ್ಗೆ ಹೇಳುವುದಾದರೆ ಜನಪದ ಆಟದಲ್ಲಿಯೂ ಮಹಿಳೆ ಭಾಗಿಯಾಗುತ್ತಾಳೆ. ಆದರೆ ಹಬ್ಬದಂತಹ ದಿನಗಳಲ್ಲಿ ಅದು ಕೆಲಸ ಮುಗಿಸಿಕೊಂಡು ವಿಶ್ರಾಂತಿ ಪಡೆಯುವ ಸಮಯದಲ್ಲಿ ಇನ್ನು ಕೃಷಿಯಲ್ಲಿ ಏನು ಕೆಲಸ ಇಲ್ಲ, ಬೇಸಿಗೆಯಲ್ಲಿ ಮಾತ್ರ ಆಟ ಆಡಲು ಇವಳಿಗೆ ಅವಕಾಶವಿರುತ್ತದೆ. ಮಿಕ್ಕ ಸಮಯದಲ್ಲಿ ಇವಳು ಬಿಡುವಿಲ್ಲದಂತೆ ಕೆಲಸ ಕಾರ್ಯಗಳಲ್ಲಿ ನಿರಂತರವಾಗಿರುತ್ತಾಳೆ.

ಮಹಿಳೆಯರನ್ನು ಅಭಿವೃದ್ಧಿಯಲ್ಲಿ ಪುರುಷರಿಗೆ ಸಮಾನ ಪಾಲುದಾರರು ಎಂದು ಪರಿಗಣಿಸಿದಾಗ ಮಾತ್ರವೇ ಈ ಲಿಂಗ ತಾರತಮ್ಯ ಲಿಂಗ ಅಸಮಾನತೆಯನ್ನು ದೂರ ಮಾಡಿ ದೇಶದ ಸರ್ವತೋಮುಖ ಬೆಳವಣಿಗೆ ಮಾಡಲು ಸಾಧ್ಯ. ಮಹಿಳೆ ಮತ್ತು ಮಹಿಳಾ ಸಮಾನತೆ ಇತ್ತೀಚಿನ ದಿನಗಳಲ್ಲಿ ಸಾರ್ವಜನಿಕ ಚರ್ಚೆ ವಿಷಯವಾಗಿ ಮಹಿಳಾ ಸಬಲೀಕರಣ ಸಂಪೂರ್ಣವಾಗಲು ಗ್ರಾಮೀಣ ಮಹಿಳೆಯರನ್ನು ಮೊದಲು ಸಶಕ್ತಳನ್ನಾಗಿಸಬೇಕು ಎಂಬ ಮಾತುಗಳಲ್ಲಿ ಪೂರ್ಣ ಸತ್ಯಾಂಶವಿದೆ. ಯಾಕೆಂದರೆ ನಮ್ಮದು ಹಳ್ಳಿಗಳ ದೇಶ, ಗ್ರಾಮೀಣ ವಲಯದ ಸುಧಾರಣೆಯೇ ದೇಶದ ನಿಜವಾದ ಸುಧಾರಣೆ ಎಂದು ಮಹಾತ್ಮ ಗಾಂಧಿಜಿ ಹೇಳಿದ್ದಾರೆ. ಇಂದು ಗ್ರಾಮೀಣ ಮಹಿಳೆ ರಾಷ್ಟ್ರ ನಿರ್ಮಾಣದ ಮುಖ್ಯವಾಹಿನಿಗೆ ಬರುತ್ತಿದ್ದಾಳೆ. ಸ್ವಯಂ ಪ್ರೇರಿತರಾಗಿ ಸಾಧನೆಯತ್ತ ಇಂದಿನ ಮಹಿಳೆಯರು ಸಾಗುತ್ತಿರುವುದು ರಾಷ್ಟ್ರ ನಿರ್ಮಾಣ ಕಾರ್ಯವನ್ನು ಸುಲಭಗೊಳಿಸಿದಂತಾಗಿದೆ. ಆದರೆ ಸಮಾಜದಲ್ಲಿ ಯಾವುದೇ ಕ್ಷೇತ್ರದಲ್ಲಿ ನೋಡಿದರು ಮಹಿಳೆಯರು ಇಂದಿಗೂ ಸಬಲತೆಯ ದಿಟ್ಟ ಪರಧಿಯನ್ನು ಸಮರ್ಥವಾಗಿ ತಲುಪಲು ಸಾಧ್ಯವಾಗುತ್ತಿಲ್ಲ.

೬.೧ ಅಧ್ಯಯನದ ಫಲಿತಗಳು :

೧) ತಮಟಕಲ್ಲು ಗ್ರಾಮ ಚಾರಿತ್ರಿಕ ಹಿನ್ನಲೆಯನ್ನು ಹೊಂದಿದೆ. ಅದಕ್ಕೆ ಪೂರಕವಾಗಿ ಕ್ರ.ಸ. ೫೦೦ರಲ್ಲಿ ಬರೆದ ಶಾಸನ ದೊರೆತಿದ್ದು, ತಮಟಕಲ್ಲು ಗ್ರಾಮಕ್ಕೆ ಹಿಂದೆ ಬೇರೊಂದು ಹೆಸರಿರುವ ಬಗ್ಗೆ ಮತ್ತು ಗುಣಮಧುರಾಂಕನ ಗುಣವನ್ನು ಬಣ್ಣಿಸುತ್ತದೆ.

೨) ಗ್ರಾಮದಲ್ಲಿ ಸಾಮಾನ್ಯವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಇದ್ದು, ಕೆಲವು ಕುಟುಂಬಗಳಲ್ಲಿ ಪುರುಷರ ದುಶ್ಚಟ ಮತ್ತು ದುರ್ನಡತೆಯಿಂದಾಗಿ ಮಹಿಳೆಯರೇ ಮನೆಯ ಎಲ್ಲಾ ಜವಬ್ದಾರಿಯನ್ನು ವಹಿಸಿಕೊಂಡಿರುವುದು ಕಾಣಬಹುದು. ವಿಭಕ್ತ ಕುಟುಂಬಗಳೇ ಸಾರ್ವತ್ರಿಕವಾಗಿವೆ. ಇಡೀ ಗ್ರಾಮದಲ್ಲಿ ಅವಿಭಕ್ತ ಕುಟುಂಬಗಳು ಒಂದು ಅಥವಾ ಎರಡಿವೆ. ಮನೆಯಲ್ಲಿ ಎಲ್ಲಾ ಮಕ್ಕಳು ಮದುವೆಯಾಗುವವರೆಗೆ ಕುಟುಂಬ ವಿಭಕ್ತವಾಗಿರುತ್ತದೆ. ಎಲ್ಲಾ ಮಕ್ಕಳ ಮದುವೆಯಾದ ನಂತರ ಅವಿಭಕ್ತ ಕುಟುಂಬಗಳಾಗುವುದು.

೩) ಕೃಷಿಯೇ ಗ್ರಾಮದ ಜನರ ಪ್ರಧಾನ ಉದ್ಯೋಗ. ಆದರೆ ಇತ್ತೀಚಿನ ದಿನಗಳಲ್ಲಿ ಮಳೆಯಿಲ್ಲದೆ ಸ್ವಂತ ಬೋರ್‌ವೆಲ್ ಸಹ ಇಲ್ಲ ಹಾಗಾಗಿ ಕೃಷಿಯಿಂದ ದೂರವಾಗುತ್ತಿದ್ದಾರೆ. ಕೃಷಿ ಕಾರ್ಮಿಕರ ಸಂಖ್ಯೆ ಅಧಿಕವಾಗಿದೆಯಾದರು ಹೆಚ್ಚಿನ ವೇತನಕ್ಕಾಗಿ ಸಮೀಪದ ನಗರಕ್ಕೆ ಇಟ್ಟಿಗೆ ಬಟ್ಟಿ, ರೈಸ್ ಮಿಲ್‌ಗೆ ಹೋಗುತ್ತಾರೆ. ಇನ್ನು ಕೆಲವರು ಆಟೋಗಳನ್ನು ಹೊಡೆಯುತ್ತಾ ಹೋಟೆಲ್‌ಗಳನ್ನು ಇಟ್ಟುಕೊಂಡು ಜೀವನ ಸಾಗಿಸುತ್ತಾರೆ.

೪) ಗ್ರಾಮದ ಜನಪದರ ಆರ್ಥಿಕ ಸಂಘಟನೆಗಳಾದ ಸ್ವಸಹಾಯ ಸಂಘಗಳು ಗ್ರಾಮದ ಜನರ ಅರ್ಥಿಕ ಸದೃಢತೆಗೆ ಸಹಾಯಕಾರಿಯಾಗಿವೆ. ಮಹಿಳೆಯರ ಸ್ವಸಹಾಯ ಸಂಘಗಳಿಂದ ಸಾಲ ಸೌಲಭ್ಯ ಪಡೆದು ಕೆಲವರು ಹೈನುಗಾರಿಕೆ ಮಾಡಿದರೆ ಮತ್ತೆ ಕೆಲವರು ಮಕ್ಕಳ ಶಿಕ್ಷಣ ಪಡೆಯಲು ವ್ಯಯಿಸುತ್ತಿದ್ದಾರೆ.

೫) ಗ್ರಾಮದಲ್ಲಿ ೧ ಸರ್ಕಾರಿ ಶಿಕ್ಷಣ ಸಂಸ್ಥೆ ಸೇರಿದಂತೆ ಒಂದು ಖಾಸಗಿ ಪ್ರೌಢಶಾಲೆ ಇದ್ದು ಕಡಿಮೆ ಸಂಖ್ಯೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಶಿಕ್ಷಣ ಪಡೆದ ಮಹಿಳೆಯರು ರೂಢಿಯಲ್ಲಿರುವ ಸಾಮಾಜಿಕ ಅನಿಷ್ಟಗಳನ್ನು ನರಾಕರಿಸುತ್ತಿದ್ದಾರೆ.

೬) ಶಿಕ್ಷಣ ಪಡೆದಿರುವ ಮಹಿಳೆಯರು ತಮ್ಮ ಕುಟುಂಬದ ಹೆಣ್ಣು ಮಕ್ಕಳ ವಿದ್ಯಾಭ್ಯಾಸದಲ್ಲಿ ಮುಂದುವರೆಯಬೇಕೆಂದು ಅಪೇಕ್ಷಿಸಿ ಮಕ್ಕಳಿಗೆ ಶಿಕ್ಷಣದಲ್ಲಿ ಮುಂದುವರೆಯಲು ಪ್ರೋತ್ಸಾಹಿಸುತ್ತಾರೆ.

೭) ಮಹಿಳೆಯರಿಗೆ ಸಾಮಾಜಿಕ ನಿರ್ಬಂಧಗಳಿವೆ ಮತ್ತು ಪುರುಷರ ಹಿಡಿತದಲ್ಲಿಯೇ ಕುಟುಂಬ ವ್ಯವಸ್ಥೆ ಇರುವುದರಿಂದ ನೀತಿ ನಿರ್ಧಾರ ತೆಗೆದುಕೊಳ್ಳುವಲ್ಲಿ, ಅಭಿಪ್ರಾಯ ವ್ಯಕ್ತಪಡಿಸುವಲ್ಲಿ, ಹಕ್ಕುಗಳನ್ನು ಪಡೆಯುವಲ್ಲಿ ಮಹಿಳೆಯರು ಹಿಂದುಳಿಯುವಂತಾಗಿದೆ.

೮) ಪುರುಷನ ಸ್ಥಾನಮಾನಗಳಿಗೆ ಧಕ್ಕೆ ಬಾರದಂತೆ ಪ್ರಸ್ತುತ ದಿನಗಳಲ್ಲಿಯೇ ಮಹಿಳೆಯನ್ನು ತನ್ನ ಹಿಡಿತದಲ್ಲಿ ಇರಿಸಿದ್ದಾನೆ.

೯) ಭೂ ಒಡೆತನ ಒಂದು ವೇಳೆ ಮಹಿಳೆಯರ ಹೆಸರಿನಲ್ಲಿ ಇದ್ದರು, ಅದು ಪುರುಷ ಹಿತಾಸಕ್ತಿಗನುಗುಣವಾಗಿಯೇ ಬಳಕೆಯಾಗುತ್ತದೆ. ಅದರ ಮೇಲಿನ ನಿರ್ಣಾಯಕ ಬಹುಪಾಲು ಪುರುಷನದೇ ಆಗಿರುತ್ತದೆ.

೧೦) ಗ್ರಾಮ ಕೃಷಿ ಕ್ಷೇತ್ರದಲ್ಲಿ ಶ್ರಮವಹಿಸಿ ದುಡಿಯುತ್ತಿರುವ ಕೃಷಿಕಾರ್ಮಿಕರಲ್ಲಿ ಪುರುಷರಿಗಿಂತ ಮಹಿಳಾ ಕೂಲಿ ಕೆಲಸಗಾರರ ಸಂಖ್ಯೆಯೇ ಅಧಿಕವಾಗಿರುವುದು.

೧೧) ಗ್ರಾಮದ ಕೆಲವು ಮಹಿಳೆಯರಿಗೆ ತಾವು ಸಂಪಾದಿಸಿದ ಹಣವನ್ನು ಖರ್ಚು ಮಾಡುವ ಅಧಿಕಾರ ಇರುವುದಿಲ್ಲ. ಹಾಗೊಮ್ಮೆ ಇದ್ದರೂ ಮಹಿಳೆಯರು ತಮ್ಮ ಸಂಪಾದನೆಯನ್ನೆ ಮನೆಯ ನಿರ್ವಹಣೆಗೆ ವ್ಯಯ ಮಾಡಿರುತ್ತಾರೆ.

೧೨) ಕುಟುಂಬದ ಹೊಣೆಗಾರಿಕೆಯಲ್ಲಿ ಮತ್ತು ಮಕ್ಕಳ ಲಾಲನೆ ಪೋಷಣೆಯಲ್ಲಿ ಮಹಿಳೆಯರೇ ಹೆಚ್ಚು ಹೊಣೆಗಾರಿಕೆ ಹೊಂದಿದ್ದಾರೆ.

೧೩) ಗ್ರಾಮದ ಕೆಲವು ಮಹಿಳೆಯರು ಮನೆಯಲ್ಲಿ ಮತ್ತು ಹೊಲದಲ್ಲಿ ಎರಡೂ ಕಡೆ ದುಡಿದರೂ ಕೆಲವು ಮಹಿಳೆಯರು ಪುರುಷರಿಂದ ಮಾನಸಿಕ ಮತ್ತು ದೈಹಿಕ ಹಿಂಸೆಗೆ ಒಳಗಾಗುತ್ತಿರುವುದರಿಂದ ಅವರ ಬದುಕಿಗೆ ನೆಮ್ಮದಿಯೆಂಬುದು ಇರುವುದಿಲ್ಲ.

೧೪) ಗ್ರಾಮದ ಕೆಲವು ಮಹಿಳೆಯರು ಶಿಕ್ಷಣ ಪಡೆದುಕೊಂಡು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗಸ್ಥರಾಗಿ ಆರ್ಥಿಕವಾಗಿ, ಉತ್ತಮವಾಗಿರುವುದು ಕಂಡುಬರುತ್ತದೆ.

೧೫) ಮಹಿಳೆಯರು ಸಾಮಾಜಿಕ ರಾಜಕೀಯ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಲವಾರು ಸಮಸ್ಯೆಗಳನ್ನು ಇನ್ನು ಎದುರಿಸುತ್ತಿದ್ದಾರೆ.

೧೬) ಪಂಚಾಯಿತಿಯಲ್ಲಿ ಚುನಾಯಿತ ಮಹಿಳೆಯರಿಗೆ ಅಕ್ಷರ ಜ್ಞಾನದ ಅರಿವೆ ಇಲ್ಲವಾಗಿದೆ. ಹೀಗಿರುವುದರಿಂದ ಅವರು ಅಭಿವೃದ್ಧಿಯ ಹರಿಕಾರರಾಗಲು ಸಾಧ್ಯವಿಲ್ಲ.

೧೭) ಮಹಿಳೆಯರು ಸರ್ಕಾರದ ಯೋಜನೆಗಳನ್ನು ಸಮರ್ಪಕವಾಗಿ ಉಪಯೋಗಿಸುಕೊಳ್ಳುವಲ್ಲಿ ಹಿಂದಾಗಿದ್ದಾರೆ.

೧೮) ಅಧಿಕಾರ ಪಡೆದ ನಂತರವೂ ಅವಳ ಸ್ಥಿತಿಗತಿಯಲ್ಲಿ ಯಾವುದೇ ಬದಲಾವಣೆಗಳು ಕಂಡುಬಂದಿಲ್ಲ. ಇಂದಿಗೂ ಗ್ರಾಮ ಪಂಚಾಯಿತಿಯಲ್ಲಿನ ಚುನಾಯಿತ ಮಹಿಳೆ ಕೃಷಿ ಹಾಗೂ ವ್ಯಾಪಾರಗಳನ್ನೇ ತನ್ನ ಜೀವನೋಪಾಯಕ್ಕಾಗಿ ಆಯ್ದುಕೊಂಡಿದ್ದಾಳೆ.

೧೯) ಪಂಚಾಯಿತಿಯ ಅಧ್ಯಕ್ಷೆಯ ಸ್ಥಾನ ಅಲಂಕರಿಸಿದ್ದರೂ ಸಹ ಅವಳು ಸಾರ್ವಜನಿಕ ಸ್ಥಳಗಳಿಗೆ ಮುಕ್ತವಾಗಿ ಸಂಚರಿಸುವ ಅವಕಾಶವನ್ನೇ ಪಡೆದಿಲ್ಲ.

೨೦) ಈ ಜನಪದ ಆಟಗಳಲ್ಲಿ ಸಾಮಾನ್ಯವಾಗಿ ಹೆಣ್ಣು ಮಕ್ಕಳು ಚಿಕ್ಕವರಿದ್ದಾಗ ಎಲ್ಲಾ ಆಟಗಳನ್ನು ಆಡುವ ಸ್ವಾತಂತ್ರ್ಯವಿದ್ದು ಬೆಳೆಯುತ್ತಾ ಹೋದರೆ ಅವಳು ಆಡಲು ಓಣಿಯನ್ನು ಬಿಟ್ಟು ಮನೆಯ ಒಳಗೆ ಆಡುವ ಆಟಗಳಿಗೆ ಸೀಮಿತವಾಗುತ್ತಾಳೆ.

೨೧) ನಾಟಿ ವೈದ್ಯ ಪದ್ದತಿಯನ್ನು ತನ್ನ ವೈಯಕ್ತಿಕ ನೆಲೆಯಲ್ಲಿ ಅಳವಡಿಸಿಕೊಂಡಿರುವ ಮಹಿಳೆಯರ ಪ್ರಮಾಣ ತೀರಾ ಕಡಿಮೆ.

**ಮುಂದಿನ ಸಾಧ್ಯತೆಗಳು :**

೧) ಯಾವುದೇ ನಿರ್ಧಾರ ತೆಗೆದುಕೊಳ್ಳುವಲ್ಲಿ ಮಹಿಳೆ ಮತ್ತು ಪುರುಷರಿಬ್ಬರ ಅಭಿಪ್ರಾಯವನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು.

೨) ಮಹಿಳೆ ಮತ್ತು ಪುರುಷರಿಗೆ ಸಮಾನ ಉದ್ಯೋಗ ಮತ್ತು ವಿದ್ಯಾಭ್ಯಾಸ ಸಾಮಾಜಿಕ ಅವಕಾಶಗಳು ಸಮಾನ ಅವಕಾಶ ಒದಗಿಸುವುದು.

೩) ಮಹಿಳೆಯರು ಪುರುಷರಿಗಿಂತ ಎಲ್ಲಾ ಕ್ಷೇತ್ರಗಳಲ್ಲಿ ಕೀಳು ಅಶಕ್ತರಲ್ಲ ಎಂಬ ರೂಢಿಗತ ತಪ್ಪು ಕಲ್ಪನೆಯನ್ನು ಪೂರ್ಣ ಅಳಿಸಿ ಹಾಕಿ ಲಿಂಗ ಸಮಾನತೆಯ ಮನೋಭಾವನೆಯನ್ನು ಬೆಳಸುವುದು.

೪) ಹೆಣ್ಣು ಮಕ್ಕಳ ಬಗ್ಗೆ ಆಚರಣೆಯಲ್ಲಿರುವ ಕೀಳರಿಮೆ ನಿರ್ಲಕ್ಷ್ಯಗಳನ್ನು ಅಳಿಸಿ ಹಾಕಿ ಹೆಣ್ಣು ಮಕ್ಕಳು ಹುಟ್ಟಿ ಬೆಳೆಯುವ ವಿವಿಧ ಹಂತಗಳಲ್ಲಿ ಮಾನವೀಯ ವಾತಾವರಣ ಸೃಷ್ಟಿಸುವುದು.

೫) ಮಹಿಳೆಯು ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ ಎಲ್ಲ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುವಂತೆ ಉತ್ತೇಜಿಸಬೇಕು.

**೬.೨. ಗ್ರಂಥ ಋಣ :**


೧) ಅನುಸೂಯ ಕಾಂಬಳೆ, ೧೯೯೯, ವಿಚಾರ ಸಾಹಿತ್ಯ ಮತ್ತು ಹೆಣ್ಣು ವೈಚಾರಿಕ ಸಾಹಿತ್ಯ ಪ್ರಕಾಶನ, ರಾಯಭಾಗ, ಬೆಳಗಾವಿ ಜಿಲ್ಲೆ

೨) ಅವಿನಾಶ ಕೊಡೆಂಕಿರಿ, ೨೦೦೯, ಹಿಂದೂ ಧರ್ಮ ನಂಬಿಕೆ ನಡವಳಿಕೆ, ಕೊಡೆಂಕಿರಿ ಪ್ರಕಾಶನ, ಪುತ್ತೂರು

೩) ಅಶೋಕ ಕುಮಾರ್.ಯು.ಬಿ. ೨೦೦೧. ಕೃಷಿ ಕೂಲಿಕಾರರ ಬದುಕು, ಬವಣೆ, ಚೇತನ ಬುಕ್ ಹೌಸ್, ಮೈಸೂರು.

೪) ಅಂಜನಪ್ಪ ಬಿ.ಹೆಚ್೨೦೦೨ ಮಹಿಳೆ ಮತ್ತು ದುಡಿಮೆ ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು

೫) ಅರ್ಜುನ್ ಯ. ಗೊಳಸಂಗಿ, ೧೯೯೫. ಗೊಳಸಂಗಿ ಗ್ರಾಮ, ಒಂದು ಸಾಂಸ್ಕೃತಿಕ ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ, ಗೋಳಸಂಗಿ

೬) ಅರ್ಚಕ ಬಿ.ರಂಗಸ್ವಾಮಿ, ೨೦೦೧, ಹುಟ್ಟಿದ ಹಳ್ಳಿ, ಮೈಸೂರು ವಿಶ್ವವಿದ್ಯಾಲಯ

೭) ಇಂದಿರಾ ಆರ್, ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ ಪ್ರಸಾರಾಂಗ, ಕ.ವಿ.ವಿ. ಹಂಪಿ

೮) ಈಶ್ವರಪ್ಪ ಎಂ., ೧೯೯೫ ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜನಪದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯) ಕಮಲಾ ಹಂಪನಾ, ೨೦೦೩. ಬೊಗಸೆ (ಮಹಿಳೆ ಸುತ್ತ-ಮುತ್ತ) ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು

೧೦) ಕವಿತಾ ರೈ ಬಿ.ಆರ್. ೨೦೦೫ ಮಹಿಳಾ ಅಸ್ತಿತ್ವದ ಸಂಕಥನ ಸಿ.ವಿ.ಜಿ. ಬೆಂಗಳೂರು.

೧೧) ಕೋಂದಂಡರಾಮ.ಎನ್.ಕೆ. ೨೦೦೫, ಮಹಿಳೆ ಮತ್ತು ಸಾಮಾಜಿಕತೆ, ಶ್ರೀಮತಿ ಯಶೋಧ ರಾಗೌ ಟ್ರಸ್ಟ್, ಮೈಸೂರು

೧೨) ಕಾಳೇಗೌಡ ನಾಗವಾರ, ೧೯೯೬ ಜಾನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು

೧೩) ಗಾಯಿತ್ರಿ ನಾವಡ, ೧೯೯೭ ಮಹಿಳಾ ಜನಪದ ಕತೆಗಳು ಎರಡು ಸಂಪುಟಗಳು

೧೪) ಗಾಯಿತ್ರಿ ನವಾಡ, ೨೦೦೦.ಭಾರತೀಯ ಸ್ತ್ರೀ ವಾದ ಒಂದು ಸಂಕಥನ ಪ್ರಸಾರಂಗ, ಕ.ವಿ.ವಿ. ಹಂಪಿ

೧೫) ಗಾಯಿತ್ರಿ ನವಾಡ, ೨೦೦೩. ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೬) ಗಾಯಿತ್ರಿ ಎನ್., ೧೯೯೯, ಮಹಿಳೆ ಬಿಡುಗಡೆಯ ಹಾದಿಯಲ್ಲಿ ನವ ಕರ್ನಾಟಕ, ಬೆಂಗಳೂರು

೧೭) ಗೋಪಾಲ್ ರಾವ್.ಎಂ.ವೈ. ೨೦೦೦, ಭಾರತೀಯ ನಾರಿ ಅಂದು ಇಂದು, ಬೈರವ ಪ್ರಕಾಶನ, ಚಿಕ್ಕಮಗಳೂರು

೧೮) ಗೋವಿಂದರಾಜು ಓ. ೨೦೦೩, ಜನಪದ ವೈದ್ಯ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೯) ಗೋವಿಂದರಾಜು.ಟಿ. ೧೯೯೩, ಚೆನ್ನಾದೇವಿ ಅಗ್ರಹಾರ, ಜನಪದೀಯ ಅಧ್ಯಯನ, ಪುಸ್ತಕ ಜೇನು, ಚನ್ನದೇವಿ ಅಗ್ರಹಾರ

೨೦) ಚನ್ನಣ್ಣ ವಾರೀಕಾರ, ೧೯೯೧. ಒಂದು ಗ್ರಾಮದ ಜನಪದೀಯ ಅಧ್ಯಯನ, ಅಕ್ಷರ ಪ್ರಕಾಶನ, ಸಾಗರ

೨೧) ಚನ್ನಕ್ಕ ಪಾವಟಿ, ೨೦೦೫, ಸಂಸ್ಕೃತಿಕ ಅಧ್ಯಯನ, ಚನ್ನಗಂಗಾ ಪ್ರಕಾಶನ, ಧಾರವಾಡ

೨೨) ಚಂದ್ರಬಾಬು ಮುಳಬಾಗಿಲು, ೨೦೧೦, ಜನಪದ ಕಾವಡಿ ಹಬ್ಬಗಳು ಸಾಂಸ್ಕೃತಿಕ ಅಧ್ಯಯನ ಅಂಜಲಿ ಪ್ರಕಾಶನ, ಮುಳಬಾಗಿಲು, ಕೋಲಾರ ಜಿಲ್ಲೆ

೨೩) ಚಂದ್ರಶೇಖರ್ ಸಿ.ಆರ್, ೧೯೯೪, ಸಾಮಾಜಿಕ ನಂಬಿಕೆಗಳು ಮತ್ತು ಮಾನಸಿಕ ಆರೋಗ್ಯ ನಿರ್ದೇಶಕರು, ರಾಷ್ಟ್ರೀಯ ಮಾನಸಿಕ ಆರೋಗ್ಯ ನರವಿಜ್ಞಾನ ಸಂಸ್ಥೆ, ಬೆಂಗಳೂರು

೨೪) ಚಂದ್ರಶೇಖರ್.ಬಿ.ಆರ್, ೨೦೦೩, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

೨೫) ಚಂದ್ರಶೇಖರ್.ಬಿ.ಆರ್, ೨೦೦೩, ಮಹಿಳೆ ಅರ್ಥಿಕತೆ ಮತ್ತು ಅಭಿವೃದ್ಧಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೬) ಚಿದಾನಂದಮೂರ್ತಿ ಎಂ, ೧೯೭೭, ಗ್ರಾಮೀಣ ಮತ್ತು ಗ್ರಾಮ ಜೀವನಕ್ಕೆ ಸಂಬಂಧಿಸಿದ ಸಂಶೋಧನ ಪ್ರಬಂಧ, ಜಾಪ್ಕೊ

೨೭) ಜಯಲಕ್ಷ್ಮೀ.ಕೆ, ೨೦೦೬, ಹೆಣ್ಣು ಅಸ್ತಿತ್ವದ ಹೋರಾಟದಲ್ಲಿ ಅನಾವರಣ, ಬೆಂಗಳೂರು

೨೮) ಜವರೇಗೌಡ ದೇ, ೧೯೮೬, ಜಾತ್ರೆಗಳು, ಜಾನಪದ ವಾಹಿನಿ, ಪ್ರೋ.ಡಿ.ವಿ.ಕೆ.ಮೂರ್ತಿ, ಮೈಸೂರು

೨೯) ಜೀನಹಳ್ಳಿ ಸಿದ್ದಲಿಂಗಪ್ಪ, ೨೦೦೧, ಸ್ತ್ರೀವಾದಿ ಜನಪದ ಕಥೆಗಳು ಪ್ರೇಮ ಪ್ರಕಾಶನ

೩೦) ಜೆರಾಲ್ಡಿನ್ ಪೋರ್ಬ್ಸ್ (ಮೂಲ), ಕನ್ನಡಕ್ಕೆ ಎಚ್.ಎಸ್.ಶ್ರೀಮತಿ,೨೦೦೨, ಆಧುನಿಕ ಭಾರತದಲ್ಲಿ ಮಹಿಳೆ ಎಂ.ಬೈರೇಗೌಡ ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೩೧) ಜ್ಯೋತ್ಸ್ನ ಕಾಮತ್, ೧೯೯೯, ಮಹಿಳೆ ಒಂದು ಅವಲೋಕನ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೩೨) ಜ್ಯೋತಿ ಶಶಿಕುಮಾರ, ೨೦೦೭,ಮಹಿಳಾ ಸಮಾಜಿಕತೆ ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿ.ವಿ. ಹಂಪಿ

೩೩) ದಾಸೇಗೌಡ ಜಿ.ಪಿ. ೨೦೦೭. ನಮ್ಮ ಜನಪದ ನಂಬಿಕೆಗಳು. ಚೇತನ ಬುಕ್ ಹೌಸ್ ಅಂಜನಾದ್ರಿ ರೇಣುಕಾಚಾರ್ಯ ದೇವಸ್ಥಾನ. ಲಕ್ಷ್ಮಿ ಟಾಕೀಸ್ ಹಿಂದುಗಡೆ, ಮೈಸೂರು ೨೪

೩೪) ನಾಯಕ.ಎನ್.ಆರ್, ೧೯೯೨, ಜಾತ್ರೆಗಳ ಸ್ವರೂಪ ಜಾನಪದ ಸಂಬಾರು ಬಚ್ಚಲು,

ಜಾನಪದ ಪ್ರಕಾಶನ, ಹೊನ್ನಾವರ

೩೫) ನಾಗರಾಜಯ್ಯಹಂಪ, ೧೯೮೫, ಕರ್ನಾಟಕ ಜಾತ್ರೆಗಳು

೩೬) ನಾಗರಾಜ ಬಿ., ೨೦೦೦, ವಿಕೇಂದ್ರೀಕರಣ ಪಂಚಾಯತ್ ರಾಜ್ ನಡೆದು ಬಂದ ದಾರಿ; ಒಂದು ಅವಲೋಕನ ಕನಾಟಕ ವಿಕಾಸ, ಬೆಂಗಳೂರು

೩೭) ನಾಗೇಶ್ ಎಚ್.ವಿ. ೧೯೯೪,ಗ್ರಾಮೀಣ ನ್ಯಾಯ ಪ್ರಸಾರಂಗ ಕನ್ನಡ ವಿ.ವಿ. ಹಂಪಿ.

೩೮) ಮಂಜುನಾಥ ಬೇವಿನಕಟ್ಟಿ, ೨೦೧೬, ವರವು ಕುರುವು ಕೂಲಹಳ್ಳಿ, ಅರುಣ್ ಪ್ರಕಾಶನ, ಬೆಂಗಳೂರು

೩೯) ಮಂಜುನಾಥ ಬೇವಿನಕಟ್ಟಿ, ೨೦೧೬, ಜನಜಾನಪದ, ಗೌತಮ್ ಬುಕ್ ಹೌಸ್, ಬಳ್ಳಾರಿ, ಕಮಲಪುರ

೪೦) ಮಂಜುನಾಥ ಬೇವಿನಕಟ್ಟಿ, ೨೦೦೩, ಕನ್ನಡ ಜನಪದ ನಂಬಿಕೆಗಳು, ಜ್ಯೋತಿ ಪ್ರಕಾಶನ, ಮೈಸೂರು

೪೧) ಮಲ್ಲೇಪುರಂ ಜಿ.ವೆಂಕಟೇಶ, ಜೂನ್ ೨೦೦೨, ದ್ರಾವಿಡ ಅಧ್ಯಯನ, ಸಂಪು-೧, ಸಂಚಿಕೆ ೨, ಪ್ರಕಟಣೆ ವಿಭಾಗ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೨) ಮುಡುಬಿ ಬಾಬುರಾವ್, ೨೦೦೫ ಮಹಿಳಾ ಸಬಲೀಕರಣ ಮತ್ತು ಅಂಬೇಡ್ಕರ್ ದೃಷ್ಟಿಕೋನ ಲಕ್ಷ್ಮಿ ಪ್ರಕಾಶನ, ಬೆಂಗಳೂರು

೪೩) ಯರ್ರಿಸ್ವಾಮಿ ಈ., ಮುದ್ರಣ ಏಪ್ರಿಲ್-ಜೂನ್-೨೦೧೫, ಅಚಲ ಮಹಿಳಾ ಅಧ್ಯಯನ, ತ್ರೈಮಾಸಿಕ ಪತ್ರಿಕೆ

೪೪) ಯರ್ರಿಸ್ವಾಮಿ.ಈ. ಜುಲೈ -ಸೆಪ್ಟೆಂಬರ್-೨೦೧೫, ಅಚಲ ಮಹಿಳಾ ಅಧ್ಯಯನ, ತ್ರೈಮಾಸಿಕ ಪತ್ರಿಕೆ, ಮುದ್ರಣ

೪೫) ಯಶೋಧರಾ ಶಾಸ್ತ್ರಿ, ೧೯೯೯, ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಜ್ಯೋತಿರ್ಮಯಿ ಪ್ರಕಾಶನ, ಗುಲಬರ್ಗ

೪೬) ರಮೇಶ ಸ.ಚಿ., ೨೦೧೧, ಕರ್ನಾಟಕ ಜನಪದ ಆಚರಣೆಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ

೪೭) ರಾಮಲಿಂಗಯ್ಯ ಉಪ್ಪಿನಕೆರೆ, ೧೯೯೯, ವೈದ್ಯಕೀಯ ನಂಬಿಕೆಗಳ ವಿಶ್ಲೇಷಣೆ, ಕರ್ನಾಟಕ ಸರ್ಕಾರ, ಪುಸ್ತಕ ಪ್ರಾಧಿಕಾರ, ಬೆಂಗಳೂರು

೪೮) ಲಿಂಗಯ್ಯ ಡಿ., ೧೯೮೨, ಜನಪದ ಸಾಹಿತ್ಯ ಸಂಪಾದ, ದಿನಕರ ಪ್ರಕಾಶನ, ಬೆಂಗಳೂರು.

೪೯) ಲೀಲಾದೇವಿ.ಆರ್ ಪ್ರಸಾದ್, ೨೦೦೩, ೨೦ನೇ ಶತಮಾನದಲ್ಲಿ ಕರ್ನಾಟಕ ರಾಜಕೀಯ

ಮತ್ತು ಮಹಿಳೆ ಅರತಿ ಪಬ್ಲಿಕೇಶನ್ಸ್, ಬೆಂಗಳೂರು

೫೦) ವಸಂತ ಬನ್ನಾಡಿ, ೧೯೯೫, ಸಾಂಸ್ಕೃತಿಕ ಚಿಂತನೆ ಅರಿವು ಬರಹ ಪ್ರಕಾಶನ .

೫೧) ವಿದ್ವಾನ್ ವಿ.ಎನ್.ಭಟ್, ೨೦೦೭, ಭಾರತೀಯ ಹಬ್ಬಗಳ ವೈಶಿಷ್ಟ್ಯ, ಪ್ರಾಚೀ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್

೫೨) ವಿಜಯಶ್ರೀ ಸಬರದ, ೨೦೦೫ ಮಹಿಳಾ ಶೋಷಣೆ ಸವಾಲುಗಳು, ಪ್ರಸಾರಂಗ ಗುಲಬರ್ಗ ವಿ.ವಿ.

೫೩) ವಿಠಲರಾವ್.ಟಿ.ಗಾಯಕ್ವಾಡ್, ೨೦೦೫. ಭಾರತೀಯ ಸ್ತ್ರೀ ಜೀವನ, ಪ್ರಸಾರಾಂಗ, ಕ.ವಿ.ವಿ. ಹಂಪಿ.

೫೪) ವೀರಭದ್ರಪ್ಪ ಬಿ.ವಿ. ೨೦೦೬, ಭಾರತೀಯ ಮಹಿಳೆ ಸಾಂಸ್ಕೃತಿಕ ವಿಕಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೫) ವೆಂಕಟಗಿರಿ ದಳವಾಯಿ,೨೦೦೮, (ಸಂ) ಸಾಂಸ್ಕೃತಿಕ ಮಹಿಳಾ ಮಾಲಿಕೆ ಸಂ. ೬ ಕರ್ನಾಟಕ ಸಾಹಿತ್ಯ ಅಕಾಡೆಮಿ

೫೬) ವೆಂಕೋಬರಾವ್.೨೦೦೦, ನ್ಯಾಯಕ್ಕಾಗಿ ಮಹಿಳೆಯರ ಹೋರಾಟ, ದಿವ್ಯಚಂದ್ರ ಪ್ರಕಾಶನ, ಬೆಂಗಳೂರು

೫೭) ಶಂಕರರಾವ್.ಚ.ನ. ೨೦೦೫ ಭಾರತಿ ಸಮಾಜ (ಸಂರಚನೆ ಮತ್ತು ಪರಿವರ್ತನೆ) ಜೈ ಭಾರತ ಪ್ರಕಾಶನ, ಬೆಂಗಳೂರು

೫೮) ಶಾಂತಾ ಇಮ್ರಾಪೂರ, ೨೦೦೨ ಮಹಿಳಾ ಶಹಿತ್ಯ ಸಂಸ್ಕೃತಿ ಚೇತನ ಪ್ರಕಾಶನ, ಧಾರವಾಡ

೫೯) ಶಿವಚಿತ್ತಪ್ಪ.ಕೆ, ೨೦೦೬, ಮಹಿಳಾ ಸಬಲೀಕರಣದ ವಿಭಿನ್ನ ನೆಲೆಗಳು, ಲಕ್ಷ್ಮೀ ಪ್ರಿಂಟರ್ಸ್, ಮೈಸೂರು

೬೦) ಶಿವಾನಂದ ಗುಬ್ಬಣ್ಣವರ – ಸೋ ಅನ್ನ ಸೋಬಾನವನ್ನು, ಅಕ್ಷಯ ಪ್ರಕಾಶನ, ಧಾರವಾಡ

೬೧) ಶೈಲಜಾ ಹಿರೇಮಠ, ೧೯೯೪, ಅಪ್ರಕಟಿತ, ಜನಪದ ಸಾಹಿತ್ಯ ಮಹಿಳಾ ಸಂಸ್ಕೃತಿ.

೬೨) ಶ್ರೀಮತಿ ಹೆಚ್.ಎಸ್. ೨೦೦೧, (ಅನು ಮೂಲ ಜೆರಾಲ್ಡಿನ್ ಪೋರ್ಬ್ಸ್) ಆಧುನಿಕ ಭಾರತದಲ್ಲಿ ಮಹಿಳೆ ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೬೩) ಶ್ರೀಮತಿ ಹೆಚ್.ಎಸ್.೨೦೦೪, ಚಹರೆ

೬೪) ಸಂಧ್ಯಾರೆಡ್ಡಿ.ಕೆ.ಆರ್.೧೯೯೫, ಜನಪದ ಸಾಹಿತ್ಯದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು,

ಬೆಂಗಳೂರು

೬೫) ಸಂಧ್ಯಾರೆಡ್ಡಿ.ಕೆ.ಆರ್. ೨೦೦೩, (ಸಂ), ಮಹಿಳಾ ಜನಪದ, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೨,

೬೬) ಸಬಿಹಾ ಭೂಮಿಗೌಡ ೨೦೦೮, (ಸಂ) ಸಾಂಸ್ಕೃತಿಕ ಮಹಿಳಾ ಮಾಲಿಕೆ, ಸಂ-೧, ಪ್ರಕಾಶನ ವಿ.ಎನ್. ಮಲ್ಲಿಕಾರ್ಜುನ ರಿಜಸ್ಟ್ರಾರ್ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೭) ಸಿದ್ದಪ್ಪ ಟಿ., ೨೦೦೩ ವೈದ್ಯ ಪದ್ಧತಿಗಳ ಅಂತರಂಗ, ವಿಜ್ಞಾನ ಪುಸ್ತಕ ಪ್ರಕಾಶನ, ಬೆಂಗಳೂರು

೬೮) ಸುನಂದಮ್ಮ ಆರ್., ೧೯೯೭, ಜನಪದ ಸಾಹಿತ್ಯ ಮಹಿಳಾ ಜಗತ್ತು ಪ್ರಸಾರಾಂಗ ಅಧ್ಯಯನ ಕೇಂದ್ರ, ಬೆಂಗಳೂರು

೬೯) ಸುಜಾತ ಕೆ.ಎಸ್. ಮತ್ತು ರಘುರಾಮ.ವಿ, ೨೦೦೭, ಮಹಿಳಾ ಸಬಲೀಕರಣ ಕಿರುಸಾಲ ಮತ್ತು ಸ್ವಸಹಾಯ ಗುಂಪುಗಳು, ಸತ್ಯ ಮಿಥ್ಯಗಳು, ಜಯಶೀಲ ಶೌಕತ್ ಅಲಿ, ಎಂ. ಮೇಗಲಮನಿ ಸುಧಾಕರ.ಎಸ್ (ಸಂ) ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು

೭೦) ಹಿರೇಮಠ ಎಸ್.ಎಸ್. ೧೯೯೩, ಜಾತ್ರೆಗಳು, ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨ ಸಮತಾ ಪ್ರಕಾಶನ, ಹೊಸಪೇಟೆ

೭೧) ಹಿರೇಮಠ ಎಸ್.ಎಸ್. ೨೦೦೦, ಕೊಪ್ಪಳ ಜಿಲ್ಲೆಯ ಜಾತ್ರೆಗಳು, ಕನ್ನಡ ಪುಸ್ತಕ ಪ್ರಾಧಿಕಾರ

೭೨) ಹೆಗ್ಗಡೆ ಒಡೆಯರ್.ಡಿ, ೨೦೦೮, ಮಹಿಳೆ ಮತ್ತು ಸಾಮಾಜಿಕ ಅಭಿವೃದ್ಧಿ, ಅರ್ಜುನ ಪಬ್ಲಿಶಿಂಗ್ ಹೌಸ್, ಮೈಸೂರು

೭೩) ಹೇಮಲತ ಹೆಚ್.ಎಂ. ೨೦೦೦, ಮಹಿಳಾ ಸಬಲೀಕರಣ, ಅಭಿರುಚಿ ಪ್ರಕಾಶನ, ಬೆಂಗಳೂರು

೭೪) ಹೊನ್ನಪೂರ ಬಂಗಾರಪ್ಪ, ೧೯೯೯, ಸಮಾನತೆಯ ಚಿಂತನೆಗಳು, ಚಿಂತನಾ ಪ್ರಕಾಶನ ಹೊಳೆನರಸಿಪುರ

**ದಿನಪತ್ರಿಕೆಗಳು**

* ಮಂಗಳ ಕೆ.ಆರ್. ನಾಯಕತ್ವದ ಹೊಸ್ತಿಲಲ್ಲಿ ಪ್ರಜಾವಾಣಿ ದಿನಪತ್ರಿಕೆ,ದಿನಾಂಕ:೫/೩/೨೦೦೦

* ಯೋಜನ ಪತ್ರಿಕೆ, ಮಾಸಿಕ ಜುಲೈ ೨೦೦೭

## ೬.೩. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಊರು | ಉದ್ಯೋಗ | ವಿದ್ಯಾರ್ಹತೆ | ಜಾತಿ |
|---|---|---|---|---|---|---|
| ೧ | ಲಕ್ಕಮ್ಮ | ೩೭ | ತಮಟಕಲ್ಲು | ಟೈಲರಿಂಗ್ | ಪಿ.ಯು.ಸಿ. | ನಾಯಕ |
| ೨ | ತಿಪ್ಪೇಸ್ವಾಮಿ | ೬೫ | ತಮಟಕಲ್ಲು | ರೈತ | ೯ನೇತರಗತಿ | ನಾಯಕ |
| ೩ | ಬಿ.ಟಿ.ಸಾಕಮ್ಮ | ೩೬ | ತಮಟಕಲ್ಲು | ಗ್ರಾಪಂ.ಸದಸ್ಯ | ೧೦ನೇತರಗತಿ | ಎಸ್.ಸಿ. |
| ೪ | ಟಿ.ಬಿ.ರೂಪ | ೩೧ | ತಮಟಕಲ್ಲು | ಗ್ರಾ.ಪಂಸದಸ್ಯ | ೧೦ನೇತರಗತಿ | ಲಿಂಗಾಯಿತ |
| ೫ | ರತ್ನಮ್ಮ | ೫೯ | ತಮಟಕಲ್ಲು | ಗ್ರಾ.ಪಂಸದಸ್ಯ | ೯ನೇತರಗತಿ | ಲಿಂಗಾಯಿತ |
| ೬ | ಮುನಿಯಪ್ಪ | ೬೮ | ತಮಟಕಲ್ಲು | ವ್ಯವಸಾಯ | ೮ನೇತರಗತಿ | ಶೆಟ್ಟಿ ಬಣಜಿಗ |
| ೭ | ಮಾರುತಿ | ೪೮ | ತಮಟಕಲ್ಲು | ವ್ಯವಸಾಯ | ೭ನೇ ತರಗತಿ | ನಾಯಕ |
| ೮ | ನಾಗಪ್ಪ | ೭೫ | ತಮಟಕಲ್ಲು | ವ್ಯವಸಾಯ | -॥- | ನಾಯಕ |
| ೯ | ಹನುಮಕ್ಕ | ೬೩ | ತಮಟಕಲ್ಲು | ಕೂಲಿ | -॥- | ಎಸ್.ಸಿ. |
| ೧೦ | ಸುಲೋಚನಮ್ಮ | ೪೫ | ತಮಟಕಲ್ಲು | ಕೂಲಿ | -॥- | ಲಿಂಗಾಯಿತ |
| ೧೧ | ಬಸವರಾಜಪ್ಪ | ೫೯ | ತಮಟಕಲ್ಲು | ವ್ಯವಸಾಯ | ೪ನೇ ತರಗತಿ | ಲಿಂಗಾಯಿತ |
| ೧೨ | ಕಲಾವತಿ.ಕೆ.ಬಿ. | ೪೧ | ತಮಟಕಲ್ಲು | ಅಂಗಡಿ (ಗ್ರಾ.ಪಂ.ಸದಸ್ಯ) | ೧೦ನೇ ತರಗತಿ | ಕುಂಬಾರ |
| ೧೩ | ಹನುಮಂತಪ್ಪ | ೫೮ | ತಮಟಕಲ್ಲು | ಕಡ್ಲೆಬಟ್ಟಿ ಕೆಲಸ | ೧೦ನೇ ತರಗತಿ | ನಾಯಕ |
| ೧೪ | ಶಿವಣ್ಣ | ೭೫ | ತಮಟಕಲ್ಲು | ರೈತ(ನಾ.ಔಷಧಿ) | ೨ನೇ ತರಗತಿ | ಕುಂಬಾರ |
| ೧೫ | ಈರಮ್ಮ | ೪೫ | ತಮಟಕಲ್ಲು | ಮನೆಯಲ್ಲಿ ಕೆಲಸ | ೧೦ನೇ ತರಗತಿ | ಕುಂಬಾರ |
| ೧೬ | ಅಂಜಿನಮ್ಮ | ೫೫ | ತಮಟಕಲ್ಲು | ಕೂಲಿ | ೩ನೇ ತರಗತಿ | ಎಸ್.ಸಿ. |
| ೧೭ | ವನಜಾಕ್ಷಮ್ಮ.ಕೆ.ಎಂ | ೬೨ | ತಮಟಕಲ್ಲು | ಗ್ರಾ.ಪಂ ಸದಸ್ಯ | ೧೦ನೇ ತರಗತಿ | ಲಿಂಗಾಯಿತ |
| ೧೮ | ಚಂದ್ರಪ್ಪ | ೬೫ | ತಮಟಕಲ್ಲು | ಹಿಟ್ಟಿನ ಗಿರಣಿ | ೭ನೇ ತರಗತಿ | ಲಿಂಗಾಯಿತ |
| ೧೯ | ಪ್ರದೀಪ್ ಕುಮಾರ್ | ೩೬ | ತಮಟಕಲ್ಲು | ಟೀಚರ್ | ಬಿ.ಎ. ಬಿಪಿಎಡ್ | ಕುರುಬರು |
| ೨೦ | ಚಂದ್ರಪ್ಪ.ಬಿ | ೩೯ | ತಮಟಕಲ್ಲು | ಟೀಚರ್ | ಎಂ.ಎ. ಬಿಎಡ್ | ಗೊಲ್ಲರು |
| ೨೧ | ಕಲ್ಲೇಶ್ ಕುಮಾರ್ | ೨೯ | ತಮಟಕಲ್ಲು | ಟೀಚರ್ | ಎಂಎಸ್ಸಿ, ಬಿಎಡ್ | ಭೋವಿ |
| ೨೨ | ಟಿ.ಎಚ್.ಗಿರೀಶ್ | ೩೯ | ತಮಟಕಲ್ಲು | ಮುಖ್ಯೋಪಾಧ್ಯಾ | ಎಂ.ಎ., ಬಿಎಡ್ | ನಾಯಕ |
| ೨೩ | ಪ್ರವೀಣ್ | ೩೩ | ತಮಟಕಲ್ಲು | ಟೀಚರ್ | ಎಂಎಸ್ಸಿ ಬಿಎಡ್ | ಗೊಲ್ಲರು |
| ೨೪ | ಎಂ.ಯೋಗರಾಜ್ | ೪೩ | ತಮಟಕಲ್ಲು | ಟೀಚರ್ | ಡಿಪ್ಲೊಮಾ | ಗೊಲ್ಲರು |
| ೨೫ | ಓ.ಜಗದೀಶ್ | ೩೯ | ತಮಟಕಲ್ಲು | ಟೀಚರ್ | ಎಂಎ, ಬಿಎಡ್ | ಲಿಂಗಾಯಿತ |
| ೨೬ | ತಹಸೀನಬಾನು | ೩೫ | ತಮಟಕಲ್ಲು | ಟೀಚರ್ | ಬಿಎ, ಬಿಎಡ್ | ಮುಸ್ಲಿಂ |
| ೨೭ | ರಾಮಚಾರಿ | ೪೨ | ತಮಟಕಲ್ಲು | ವ್ಯವಸಾಯ | ೧೦ನೇ ತರಗತಿ | ನಾಯಕ |
| ೨೮ | ಶಾಂತಮ್ಮ | ೩೭ | ತಮಟಕಲ್ಲು | ಮನೆಗೆಲಸ | ಓದಿಲ್ಲ | ನಾಯಕ |
| ೨೯ | ಸಿದ್ದಮ್ಮ | ೪೧ | ತಮಟಕಲ್ಲು | ಹಾಲುಮಾರಾಟ | ಓದಿಲ್ಲ | ನಾಯಕ |

| | | | | | | |
|---|---|---|---|---|---|---|
| ೩೦ | ಸ್ವಾಮಿಯಣ್ಣ | ೪೫ | ತಮಟಕಲ್ಲು | ಕುರಿಕಾಯುವವ | ೪ನೇ ತರಗತಿ | ನಾಯಕ |
| ೩೧ | ಓಬಣ್ಣ | ೩೮ | ತಮಟಕಲ್ಲು | ಹಸುಮೇಯಿಸು | ೫ನೇ ತರಗತಿ | ನಾಯಕ |
| ೩೨ | ವಜಾಕ್ಷಮ್ಮ | ೪೫ | ತಮಟಕಲ್ಲು | ಗ್ರಾ.ಪಂ.ಸದಸ್ಯ | ಓದಿಲ್ಲ | ಎಸ್.ಸಿ. |
| ೩೩ | ಮೋಹನ್ | ೧೯ | ತಮಟಕಲ್ಲು | ಕೂಲಿ | ಪಿಯುಸಿ | ಎಸ್.ಸಿ. |
| ೩೪ | ಗೌರಮ್ಮ | ೪೭ | ತಮಟಕಲ್ಲು | ಕೂಲಿ | ೬ನೇ ತರಗತಿ | ನಾಯಕ |
| ೩೫ | ಮಂಜಣ್ಣ | ೫೫ | ತಮಟಕಲ್ಲು | ಹಾಲುಮಾರಾಟ | ೩ನೇ ತರಗತಿ | ಕುಂಬಾರ |
| ೩೬ | ಶಕುಂತಲ | ೩೨ | ತಮಟಕಲ್ಲು | ಹಾಲುಮಾರಾಟ | ೩ನೇ ತರಗತಿ | ನಾಯಕ |
| ೩೭ | ಶಾರದಮ್ಮ | ೩೮ | ತಮಟಕಲ್ಲು | ಹಾಲುಮಾರಾಟ | ಓದಿಲ್ಲ | ನಾಯಕ |
| ೩೮ | ಟಿ.ಓ.ಶಿವಕುಮಾರಿ | ೩೭ | ತಮಟಕಲ್ಲು | ಆಶಾಕಾ.ಕರ್ತೆ | ೧೦ನೇ ತರಗತಿ | ನಾಯಕ |
| ೩೯ | ಕೆ.ಹೆಚ್.ಗೀತಾ | ೩೯ | ತಮಟಕಲ್ಲು | ಆಶಾ ಕಾ.ಕರ್ತೆ | ೧೦ನೇ ತರಗತಿ | ನಾಯಕ |
| ೪೦ | ನರಸಿಂಹಮೂರ್ತಿ | ೫೩ | ತಮಟಕಲ್ಲು | ರೈತರು | ೪ನೇ ತರಗತಿ | ನಾಯಕ |
| ೪೧ | ಟಿ.ಎನ್.ಚನ್ನಪ್ಪ | ೭೨ | ತಮಟಕಲ್ಲು | ರೈತರು | ಪಿಯುಸಿ | ಬಲಿಜಿಗ |
| ೪೨ | ಕೆ.ಬಿ.ಶ್ರೀಮತಿ | ೫೯ | ತಮಟಕಲ್ಲು | ಟೀಚರ್ | ಟಿ.ಸಿ.ಹೆಚ್ | ಬ್ರಾಹ್ಮಣರು |
| ೪೩ | ತಿಪ್ಪಮ್ಮ.ಸಿವಿ. | ೬೫ | ತಮಟಕಲ್ಲು | ಗ್ರಾ.ಪಂ.ಸದಸ್ಯ | ೧೦ನೇ ತರಗತಿ | ನಾಯಕ |
| ೪೪ | ಎಸ್.ಓಬಳಮ್ಮ | ೪೮ | ತಮಟಕಲ್ಲು | ಮನೆಗೆಲಸ | ೭ನೇ ತರಗತಿ | ನಾಯಕ |
| ೪೫ | ಸುಮಿತ್ರಮ್ಮ | ೪೮ | ತಮಟಕಲ್ಲು | ಗ್ರಾ.ಪಂ.ಸದಸ್ಯ | ೪ನೇ ತರಗತಿ | ನಾಯಕ |
| ೪೬ | ಹನುಮಂತಪ್ಪ | ೬೫ | ತಮಟಕಲ್ಲು | ಗ್ರಾ.ಪಂ. ಸದಸ್ಯ | ೧೦ನೇ ತರಗತಿ | ನಾಯಕ |
| ೪೭ | ಶ್ರೀನಿವಾಸ | ೪೫ | ತಮಟಕಲ್ಲು | ಆಟೋ ಚಾಲಕ | ೧೦ನೇ ತರಗತಿ | ನಾಯಕ |
| ೪೮ | ನಾರಾಯಣಸ್ವಾಮಿ | ೭೦ | ತಮಟಕಲ್ಲು | ಉಪನ್ಯಾಸಕರು | ಎಂ.ಎ. | ಬಲಜಿಗ |
| ೪೯ | ಟಿ.ವಿ.ವಿರೂಪಾಕ್ಷಪ್ಪ | ೫೯ | ತಮಟಕಲ್ಲು | ಇಂಜಿನಿಯರ್ | ಬಿ.ಇ | ಲಿಂಗಾಯಿತ |
| ೫೦ | ಮಂಜಪ್ಪ | ೫೮ | ತಮಟಕಲ್ಲು | ಎಸ್.ಡಿ.ಎ. | ಪಿಯುಸಿ | ಬಲಜಿಗ |
| ೫೧ | ಅನುಸೂಯಮ್ಮ | ೪೮ | ತಮಟಕಲ್ಲು | ಅಡುಗೆ ಕೆಲಸ | – | ನಾಯಕ |
| ೫೨ | ಗೀತಾಮ್ಮ | ೨೯ | ತಮಟಕಲ್ಲು | ಅಂ.ಸಹಾಯಕಿ | ೧೦ನೇ ತರಗತಿ | ನಾಯಕ |
| ೫೩ | ಶಾಂತಮ್ಮ | ೬೫ | ತಮಟಕಲ್ಲು | ಅಂ.ಸಹಾಯಕಿ | ೩ನೇ ತರಗತಿ | ನಾಯಕ |
| ೫೪ | ಕೆಂಚಮ್ಮ | ೪೦ | ತಮಟಕಲ್ಲು | ಊಟಕಾ.ಕರ್ತೆ | ೧೦ನೇ ತರಗತಿ | ನಾಯಕ |
| ೫೫ | ಪ್ರಜ್ವಲ್ | ೨೩ | ತಮಟಕಲ್ಲು | ಸೇವಾ ಪ್ರತಿನಿಧಿ | ಪಿ.ಯು.ಸಿ. | ನಾಯಕ |

| | | | | | |
|---|---|---|---|---|---|
| ೫೬ | ಚೈತ್ರ | ೨೫ | ತಮಟಕಲ್ಲು | ಮನೆಗೆಲಸ | ನಾಯಕ |
| ೫೭ | ಪಂಕಜ | ೨೦ | ತಮಟಕಲ್ಲು | ಮನೆಗೆಲಸ | ನಾಯಕ |
| ೫೮ | ಶಾಂತಮ್ಮ | ೬೮ | ತಮಟಕಲ್ಲು | ಅಂ.ಸಹಾಯಕಿ | ನಾಯಕ |
| ೫೯ | ಅನ್ನಪೂರ್ಣಮ್ಮ | ೪೫ | ತಮಟಕಲ್ಲು | ಊಟದ ಕಾರ್ಯಕರ್ತೆ | ನಾಯಕ |
| ೬೦ | ಸುಶೀಲ | ೩೦ | ತಮಟಕಲ್ಲು | ಹೊಲ ಮನೆಗೆಲಸ | ಕುಂಬಾರ |
| ೬೧ | ಜಯಮ್ಮ | ೪೯ | ತಮಟಕಲ್ಲು | ಮನೆಗೆಲಸ | ಕುಂಬಾರ |
| ೬೨ | ಮಂಜುನಾಥ | ೫೫ | ತಮಟಕಲ್ಲು | ವ್ಯವಸಾಯ | ಕುಂಬಾರ |
| ೬೩ | ಶಿವಮ್ಮ | ೫೦ | ತಮಟಕಲ್ಲು | ಕೂಲಿ ಗಾರೆಕೆಲಸ | ಕುಂಬಾರ |
| ೬೪ | ಪ್ರೇಮಕ್ಕ | ೪೫ | ತಮಟಕಲ್ಲು | ಕೂಲಿ | ನಾಯಕ |
| ೬೫ | ಶ್ವೇತ | ೧೯ | ತಮಟಕಲ್ಲು | ದ್ವಿತೀಯ ಪಿಯುಸಿ | ನಾಯಕ |
| ೬೬ | ಪ್ರವೀಣ್ ಕುಮಾರ್ | ೨೧ | ತಮಟಕಲ್ಲು | ಆಟೋ ಚಾಲಕರು | ನಾಯಕ |
| ೬೭ | ಲತಾ | ೪೫ | ತಮಟಕಲ್ಲು | ಹಾಲು ಮಾರುವುದು | ನಾಯಕ |
| ೬೮ | ರತ್ನಮ್ಮ | ೪೭ | ತಮಟಕಲ್ಲು | ಮನೆಗೆಲಸ | ಎಸ್.ಸಿ. |
| ೬೯ | ಹನುಮಂತಪ್ಪ | ೫೩ | ತಮಟಕಲ್ಲು | ಬಡಗಿ | ಎಸ್.ಸಿ. |
| ೭೦ | ತಿಮ್ಮಕ್ಕ | ೪೬ | ತಮಟಕಲ್ಲು | ಹಾಲು ಮಾರುವುದು | ನಾಯಕ |
| ೭೧ | ಗೀತಾ | ೩೬ | ತಮಟಕಲ್ಲು | ಮನೆಗೆಲಸ | ನಾಯಕ |
| ೭೨ | ವನಜಾಕ್ಷಿ | ೪೮ | ತಮಟಕಲ್ಲು | ಹಾಲು ಮಾರುವುದು | ನಾಯಕ |
| ೭೩ | ಗಂಗಮ್ಮ | ೪೦ | ತಮಟಕಲ್ಲು | ಕೂಲಿ | ನಾಯಕ |
| ೭೪ | ಗೌರಮ್ಮ | ೪೬ | ತಮಟಕಲ್ಲು | ಹೂ ಕಟ್ಟುವುದು | ಲಿಂಗಾಯಿತ |
| ೭೫ | ಶೋಭಾ | ೨೭ | ತಮಟಕಲ್ಲು | ಕೂಲಿ | ಲಿಂಗಾಯಿತ |
| ೭೬ | ರೂಪ | ೩೩ | ತಮಟಕಲ್ಲು | ಮನೆಗೆಲಸ | ನಾಯಕ |
| ೭೭ | ಅನಸೂಯಮ್ಮ | ೪೫ | ತಮಟಕಲ್ಲು | ಮನೆಗೆಲಸ | ನಾಯಕ |
| ೭೮ | ಮಂಜುಳ | ೩೮ | ತಮಟಕಲ್ಲು | ಮನೆಗೆಲಸ | ಆದಿಕರ್ನಾಟಕ |
| ೭೯ | ಶಿಲ್ಪ | ೩೦ | ತಮಟಕಲ್ಲು | – | ಆದಿಕರ್ನಾಟಕ |
| ೮೦ | ಜ್ಯೋತಿ | ೩೦ | ತಮಟಕಲ್ಲು | ಕೂಲಿ | ಆದಿಕರ್ನಾಟಕ |
| ೮೧ | ಮೀನಾಕ್ಷಮ್ಮ | ೪೦ | ತಮಟಕಲ್ಲು | ಮನೆಗೆಲಸ | ಆದಿಕರ್ನಾಟಕ |
| ೮೨ | ಮಂಜುಳ | ೪೫ | ತಮಟಕಲ್ಲು | ಕೂಲಿ | ಆದಿಕರ್ನಾಟಕ |

| | | | | | |
|---|---|---|---|---|---|
| ೮೩ | ರಾಮಕ್ಕ | ೪೫ | ತಮಟಕಲ್ಲು | ಕೂಲಿ | ಆದಿಕರ್ನಾಟಕ |
| ೮೪ | ಗೀತಮ್ಮ | ೩೭ | ತಮಟಕಲ್ಲು | ಹಾಲು ಮಾರುವುದು | ಆದಿಕರ್ನಾಟಕ |
| ೮೫ | ಹನುಮಕ್ಕ | ೫೮ | ತಮಟಕಲ್ಲು | ಹಾಲು ಮಾರುವುದು | ಆದಿಕರ್ನಾಟಕ |
| ೮೬ | ಯಶೋಧಮ್ಮ | ೩೮ | ತಮಟಕಲ್ಲು | ಕೂಲಿ | ಆದಿಕರ್ನಾಟಕ |
| ೮೭ | ಮಾನಸ | ೩೦ | ತಮಟಕಲ್ಲು | ಅಂಗನವಾಡಿ ಟೀಚರ್ | ಆದಿಕರ್ನಾಟಕ |
| ೮೮ | ವನಜಾಕ್ಷಿ | ೩೦ | ತಮಟಕಲ್ಲು | ಅಂಗನವಾಡಿ ಸಹಾಯಕಿ | ಆದಿಕರ್ನಾಟಕ |
| ೮೯ | ಸುಲೋಚಮ್ಮ | ೪೮ | ತಮಟಕಲ್ಲು | ಅಂಗನವಾಡಿ ಟೀಚರ್ | ಆದಿಕರ್ನಾಟಕ |
| ೯೦ | ಗೀತಾ | ೩೫ | ತಮಟಕಲ್ಲು | ಅಂಗನವಾಡಿ ಸಹಾಯಕಿ | ನಾಯಕ |
| ೯೧ | ಹನುಮಂತಪ್ಪ | ೩೬ | ತಮಟಕಲ್ಲು | ಟ್ರ್ಯಾಕ್ಟರ್ ಓಡಿಸುವುದು | ಎಸ್.ಸಿ. |
| ೯೨ | ಅಂಜನಮೂರ್ತಿ | ೪೦ | ತಮಟಕಲ್ಲು | ಸಿಮೆಂಟ್ ಕೆಲಸ | ಎಸ್.ಸಿ. |
| ೯೩ | ಮೂರ್ತಿ | ೫೫ | ತಮಟಕಲ್ಲು | ಎತ್ತಿನಗಾಡಿ ಓಡಿಸುವುದು | ಎಸ್.ಸಿ. |
| ೯೪ | ಹನುಮಂತಪ್ಪ | ೬೦ | ತಮಟಕಲ್ಲು | ಕೂಲಿ | ಎಸ್.ಸಿ. |
| ೯೫ | ಗೌರಮ್ಮ | ೭೨ | ತಮಟಕಲ್ಲು | ಕೂಲಿ | ಎಸ್.ಸಿ. |
| ೯೬ | ಗಂಗಮ್ಮ | ೪೦ | ತಮಟಕಲ್ಲು | ಕೂಲಿ | ಎಸ್.ಸಿ. |
| ೯೭ | ಮಂಜಮ್ಮ | ೪೬ | ತಮಟಕಲ್ಲು | ಮನೆಗೆಲಸ & ಕೂಲಿ | ಎಸ್.ಸಿ. |
| ೯೮ | ನಿಂಗಮ್ಮ | ೭೬ | ತಮಟಕಲ್ಲು | ಮನೆ ಗೆಲಸ | ಎಸ್.ಸಿ. |
| ೯೯ | ಚೌಡಪ್ಪ | ೩೪ | ತಮಟಕಲ್ಲು | ಟ್ರ್ಯಾಕ್ಟರ್ ಡ್ರೈವರ್ | ಎಸ್.ಸಿ. |
| ೧೦೦ | ಹನುಮಂತಪ್ಪ | ೩೭ | ತಮಟಕಲ್ಲು | ಬಣ್ಣಹೊಡೆಯುವ ಕೆಲಸ | ಎಸ್.ಸಿ. |
| ೧೦೧ | ಆನಂದಪ್ಪ | ೪೫ | ತಮಟಕಲ್ಲು | ಎಲೆಕ್ಟ್ರೀಷಿಯನ್ | ಎಸ್.ಸಿ. |
| ೧೦೨ | ರಾಜಪ್ಪ | ೫೮ | ತಮಟಕಲ್ಲು | ಬಡಗಿ | ಎಸ್.ಸಿ. |
| ೧೦೩ | ಮಧು | ೩೨ | ತಮಟಕಲ್ಲು | ಬಡಗಿ | ಎಸ್.ಸಿ. |
| ೧೦೪ | ಸಾವಿತ್ರಮ್ಮ | ೪೮ | ತಮಟಕಲ್ಲು | ಕೂಲಿ | ಎಸ್.ಸಿ. |
| ೧೦೫ | ಹನುಮಕ್ಕ | ೬೦ | ತಮಟಕಲ್ಲು | ವ್ಯವಸಾಯ | ಎಸ್.ಸಿ. |



ಹೆಡಕಲ್ಲು ಬೆಟ್ಟದ ತುದಿಯಿಂದ ತಮಟಕಲ್ಲು ಗ್ರಾಮ ವ್ಯೋಮ ನೋಟ



ಶ್ರೀ ಆಂಜನೇಯಸ್ವಾಮಿ ದೇವಸ್ಥಾನ



ಕಾರ್ಯಪ್ರಗತಿಯಲ್ಲಿರುವ ಆಂಜನೇಯಸ್ವಾಮಿ ದೇವಸ್ಥಾನದ ಮಹಾದ್ವಾರ, ತಮಟಕಲ್ಲು



ರಂಗನಾಥಸ್ವಾಮಿ ಬೆಟ್ಟದ ಮುಂಭಾಗದಲ್ಲಿರುವ ಬಂಡೆ ಬರಹ



ಉಡಸಲಮ್ಮ ದೇವಿಯ ಜಾತ್ರೆಯ ಸಿಡಿಕಂಭ




ತಮಟಕಲ್ಲು ಆಂಜನೇಯ ದೇವಸ್ಥಾನದ ಭೋಜನಾಲಯ



ಉಡಸಲಮ್ಮ ದೇವಿಯ ನವ ನಿರ್ಮಾಣದ ದೇವಸ್ಥಾನ



ಗರ್ಭಗೃಹದಲ್ಲಿರುವ ಆಂಜನೇಯ ಮೂರ್ತಿಶಿಲ್ಪ, ತಮಟಕಲ್ಲು.



ಭೈರ ಸಿದ್ದೇಶ್ವರ ದೇವಸ್ಥಾನದ ಒಳಭಾಗ, ತಮಟಕಲ್ಲು.



ಈಶ್ವರ ದೇವಾಲಯದ ಗರ್ಭಗೃಹ, ತಮಟಕಲ್ಲು.



ರಂಗನಾಥಸ್ವಾಮಿ ಮತ್ತು ಭೂತಪ್ಪ ದೇವರುಗಳು,ತಮಟಕಲ್ಲು



ಶೇಜಿ ಮತ್ತು ಸೂರ್ಯಲಿಂಗೇಶ್ವರ ದೇವರುಗಳು, ತಮಟಕಲ್ಲು.



ಗೌರಸಂದ್ರ ಮಾರೆಮ್ಮ ದೇವಸ್ಥಾನದ ಒಳಭಾಗ, ತಮಟಕಲ್ಲು.



ಉಡಸಲಮ್ಮ ದೇವಿಯ ವಿಗ್ರಹ, ತಮಟಕಲ್ಲು.



ಕೆಂಡದ ಗುಂಡಿಗೆ ಪೂಜೆಸಲ್ಲಿಸುತ್ತಿರುವುದು.



ರಂಗನಾಥ ಸ್ವಾಮಿ ಬೆಟ್ಟಕ್ಕೆ ಮೊಳಕೆ ಆರತಿ ಹಿಡಿದು ಹೊರಟಿರುವ ಭಕ್ತರು





ರಂಗನಾಥಸ್ವಾಮಿ ಬೆಟ್ಟದ ಮುಂಭಾಗದ ಬಂಡೆಗಳ ಮೇಲಿರುವ ತಂತ್ರ ಸಂಭಂದಿ ಸಂಕೇತಗಳು





ರಂಗನಾಥಸ್ವಾಮಿ ಬೆಟ್ಟದ ಮುಂಭಾಗದಲ್ಲಿರುವ ಬಂಡೆ ಬರಹಗಳು





ರಂಗನಾಥಸ್ವಾಮಿ ಬೆಟ್ಟದ ಮುಂಭಾಗದ ಬಂಡೆಗಳ ಮೇಲಿರುವ ಸಂಕೇತಗಳು





ಹೆಡಕಲ್ಲು ಬೆಟ್ಟದ ಮೇಲಿರುವ ನಂದಿ ವಿಗ್ರಹ

